# ಶ್ರೀ ಪ್ರಸನ್ನ ವೆಂಕಟ ವಿಜಯ

## ಶ್ರೀ ಪ್ರಸನ್ನ ವೆಂಕಟದಾಸರ ಜೀವನ ಆಧಾರಿತ ಕಾದಂಬರಿ



ರೇಖಾ ಕಾಖಂಡಕಿ

ಶ್ರೀ ಪ್ರಸನ್ನ ವೆಂಕಟ ವಿಜಯತೇ

# ಶ್ರೀ ಪ್ರಸನ್ನ ವೆಂಕಟ ವಿಜಯ

(ಶ್ರೀ ಪ್ರಸನ್ನ ವೆಂಕಟ ದಾಸರ ಜೀವನ ಆಧಾರಿತ ಕಾದಂಬರಿ)

ಲೇಖಕಿ

**ರೇಖಾ ಕಾಖಂಡಕಿ**

**ಶ್ರೀ ಪ್ರಸನ್ನ ವೆಂಕಟ ಪ್ರಕಾಶನ**

# ೧೫, "ಮಂತ್ರಾಲಯ" (ಪ್ರಶಾಂತನಗರ)
೯ನೇ ಮುಖ್ಯರಸ್ತೆ, ೧೭ನೇ ಕ್ರಾಸ್,
ಇಸ್ರೋ ಲೇಔಟ್, ಬೆಂಗಳೂರು – ೫೬೦ ೦೭೮
ದೂರವಾಣಿ : ೦೮೦–೨೬೬೬೫೩೯೮
Email. : rsk9651@yahoo.com



**SHRI PRASANNA VENKATA VIJAYA**

- A Kannad Novel based on life history of Sri Prasanna Venkatadasaru

***Written by*** : **Smt. Rekha - Kakhandaki**

**Published by** : **Sri Prasanna Venkatak Publishers**

No. 15, "Mantralya" (Preshantinagar)
9th 'B' Main Road, 17th Cross,
ISRO Layout, Bangalore - 560 078



Pages : xvi + 172 = 188

First Print : 2010

Copies : 1000

Paper Used : 70 GSM Maplitho

Cover page : V.raj (Chamalapura)

*Copies available at :*

1. **Dr. Subhas, Kakahandaki**
   15, "Mantralaya" Prashanti Nagar
   9th 'B' Main Road, 17th Cross,
   ISRO Layout, Bangalore - 560 078
   Phone : 080-26665398, Mob. : 9448011954
   Email. : subhasbk@gmail.com

2. **Sri Pralhad. M. Kulkarni**
   # 273, Bapujee Layout, Sarawati Nagar
   Vijayanagar Extention, Bangalore - 560 040

Printed at
**Vishwas Prints**
Chamarajpet, Bangalore - 18
Ph. : 26606088

# ಓದುಗರೊಡನೆ

ಹರೇ ಶ್ರೀನಿವಾಸ

ಹರಿಸೇವೆ, ಹರಿಭಕ್ತರ ಸೇವೆ ಮಾಡುವ ಯೋಗ ಕೂಡ. ಒಂದು ಸುಯೋಗವೆ, ಆದರೆ ಅದನ್ನು ಮಾಡಲು ಕೂಡ ಆ ಸರ್ವಶಕ್ತನಾದ ಭಗವಂತನ ಅನುಗ್ರಹಬೇಕು. ಪ್ರೇರಣೆಬೇಕು.

ಸುಮಾರು ವರ್ಷಗಳಿಂದ ನನಗೆ ಶ್ರೀ ಪ್ರಸನ್ನ ವೆಂಕಟ ದಾಸರ" ಚರಿತ್ರೆಯನ್ನು ಕಥಾರೂಪಕದಲ್ಲಿ ಬರೆದು ಭಕ್ತಜನಕ್ಕೆ ತಲುಪಿಸಬೇಕೆಂಬ ಹಂಬಲ, ಬಹಳ ದಿನದ್ದು, ಆದರೆ ಅಂಥ ಮಹಾತ್ಮರ ಬಗ್ಗೆ ಬರೆಯುವ ಶಕ್ತಿಯಾಗಲಿ – ಯೋಗ್ಯತೆಯಾಗಲಿ ನನ್ನಲ್ಲಿಲ್ಲವೆಂದೇ ನಾನು ಸಮಯ ಮುಂದೂಡುತ್ತ ಬಂದಿದ್ದೆ. ಆದರೆ – ದಾಸರ ದಯೆ, ಯಾವುದೋ ಒಂದು ಗಳಿಗೆಯಲ್ಲಿ "ಶ್ರೀಪ್ರಸನ್ನವೆಂಕಟ ದಾಸರ" ಜೀವನಚರಿತ್ರೆಯನ್ನು ಕಾದಂಬರಿ ರೂಪದಲ್ಲಿ ಬರೆಯಬೇಕೆಂಬ ಆಲೋಚನೆ ಬಂದಾಗ. ಬರೆಯಲೇಬೇಕೆಂಬ ಮನಸ್ಸಿನ ಒತ್ತಡ ಅಧಿಕವಾದಾಗ ಇದು ಅವರ ಪ್ರೇರಣೆಯೆ ಇರಬೇಕು ಎಂದುಕೊಂಡು. ಬರೆಯಲು ಶುರುಮಾಡುವ ಮೊದಲು ದಾಸರಿಗೆ ಕೈಮುಗಿದು ಈ ಕೃತಿ ನಾನು ಬರೆಯುತ್ತಿಲ್ಲ., ಬರೆಯಿಸುವವರು ನೀವೆ. ಬರೆಯಲು ಪ್ರೇರಣೆ ಮಾಡಿದವರು ನೀವೆ. ಬರೆಯುವ ಶಕ್ತಿ ಕೊಡುವವರು ನೀವೆ ಎಂದು ಶುರುವಾಡಿದಾಗ ಬರೆಯುತ್ತ – ಬರೆಯುತ್ತ. ಅವರ ಅನುಗ್ರಹ ಆಶೀರ್ವಾದದಿಂದ ಕೃತಿ ಪೂರ್ಣಗೊಂಡಿತು. ಇದು ನನ್ನ ಸೌಭಾಗ್ಯ, ಬರೆಯುವಾಗ ಎಷ್ಟೋ ಗ್ರಂಥಗಳ ಆಧಾರ ಪಡೆದೆ. ಕೆಲವು ಕಡೆ ಸಲಹೆ, ಸೂಚನೆ ಕೊಟ್ಟು, ಕೆಲವು ಸಂದರ್ಭಗಳ ಮಾಹಿತಿ ಒದಗಿಸಿದ ನನ್ನ ಹಿರಿಯ ಸಹೋದರ ಶ್ರೀ ರಾಮಚಂದ್ರ ಕುಲಕರ್ಣಿಯವರು, ಈ ಪುಸ್ತಕ ಬರೆಯಲು ಮೊದಲಿನಿಂದ ನನಗೆ ಸೂಚನೆ ಕೊಡುತ್ತಾ ಬಂದವರು ಅವರೇ. ಅವರಿಗೆ ನನ್ನ ಅನಂತ ಕೃತಜ್ಞತೆಗಳು. ಇನ್ನು, ಪುಸ್ತಕ ಬರೆಯುವಾಗ ಕೆಲವು. ಸಂದರ್ಭ ಸನ್ನಿವೇಶಗಳನ್ನು ಚರ್ಚಿಸಿ, ಸಲಹೆಕೊಟ್ಟು, ಸಹಕಾರ ನೀಡಿದ. ನನ್ನ ಪತಿ ಡಾ. ಸುಭಾಷ ಕಾಖಂಡಕಿಯವರಿಗೂ ನನ್ನ ಕೃತಜ್ಞತೆಗಳು.



ಇದು ಶ್ರೀ ಪ್ರಸನ್ನ ವೆಂಕಟ ದಾಸರ ಜೀವನ ಚರಿತ್ರೆಯನ್ನು ಆಧರಿಸಿದ ಕಾದಂಬರಿಯಾದ್ದರಿಂದ ಸಂದರ್ಭಗಳು, ಸನ್ನಿವೇಶಗಳು ಕರಾರುವಕ್ಕಾಗಿ ದಾಖಲೆಯಾಗಿರಲಿಕ್ಕಿಲ್ಲ. ಓದುಗರನ್ನು ತಲುಪಲು ಅಳವಡಿಸಿಕೊಂಡ ಬರವಣಿಗೆಯ ರೂಪ, ಓದುಗ ಭಕ್ತರು ಲೋಪ – ದೋಷಗಳನ್ನು ತಿದ್ದಿಕೊಂಡು ನನ್ನ ಈ ಕೃತಿಯನ್ನು ಹೃದಯ ಪೂರ್ವಕವಾಗಿ ಸ್ವಾಗತಿಸಬೇಕೆಂದು ನನ್ನ ವಿನಂತಿ.

ಸರ್ವಕಾಲಕ್ಕೂ ಹರಿಸೇವೆಯಲ್ಲಿದ್ದು, ಶ್ರೀ – ಶ್ರೀಪಾದರಾಜಮಠ ಪೀಠವನ್ನಲಂಕರಿಸಿ, ಹರಿದಾಸ ಸಾಹಿತ್ಯಕ್ಕೆ ನಿರಂತರ ಪ್ರೋತ್ಸಾಹ ನೀಡುತ್ತ ಬಂದಿರುವ ಶ್ರೀ ಶ್ರೀ ಶ್ರೀ ವೇದವಿಜ್ಞಾನ ನಿಧಿ ತೀರ್ಥರು. ಈ ಕೃತಿಯನ್ನು ಓದಿಸಿ – ಕೇಳಿ ಇದಕ್ಕೆ ಆಶೀರ್ವಚನ ಬರೆದು, ಕೃತಿಯ ಮೌಲ್ಯ ಹೆಚ್ಚಿಸಿ, ಹಾರೈಸಿದ್ದಾರೆ. ಅದಕ್ಕಾಗಿ ಅವರ ಹಿರಿಚರಣಗಳಿಗೆ ನನ್ನ ಅನಂತ ವಂದನೆಗಳು

ಇನ್ನು ತಮ್ಮ ಬಿಡುವಿಲ್ಲದ ಸಮಯದಲ್ಲೂ ಈ ಕೃತಿಯನ್ನು ಓದಿ, ಇದರ ಬಗ್ಗೆ ಮೆಚ್ಚಿನ ಮಾತುಗಳನ್ನಾಡಿ ಕೃತಿಗೆ ಮುನ್ನುಡಿ ಬರೆದು ಕೊಟ್ಟ ಶ್ರೀ ದಾಸ ಸಾಹಿತ್ಯದ ಜೀವಾಳವಾಗಿ, ಅನವರತ ದಾಸ ಸಾಹಿತ್ಯಕ್ಕಾಗಿ ತಮ್ಮ ಸೇವೆಯನ್ನು ಮೀಸಲಿಟ್ಟು ವಿದ್ಯಾವಾಚಸ್ಪತಿ ಡಾ॥ ಅರಳು ಮಲ್ಲಿಗೆ ಪಾರ್ಥಸಾರಥಿಯವರಿಗೆ ಮನದುಂಬಿದ ಕೃತಜ್ಞತೆಗಳು.

ಮತ್ತೆ, ಕೆಲವು ಸಲಹೆ ಸೂಚನೆ ಕೊಟ್ಟ ನಮ್ಮ ಮನೆತನದ ಹಿರಿಯರಾಗಿರುವ ಶ್ರೀ ಧ್ರುವಾಚಾರ್ಯ ಕಾಖಂಡಕಿಯವರಿಗೂ ವಿನಯಪೂರ್ವಕ ವಂದನೆಗಳು.

"ಶ್ರೀ ಪ್ರಸನ್ನ ವೆಂಕಟದಾಸರು" ಹೀಗೆಯೇ ನನ್ನೀ ಸೇವೆ ತೆಗೆದುಕೊಳ್ಳಲಿ ಎಂದು ಬೇಡಿಕೊಳ್ಳುತ್ತ ನನ್ನೆರಡು ನುಡಿಗಳನ್ನು ಮುಗಿಸುತ್ತೇನೆ.

#15, "ಮಂತ್ರಾಲಯ" (ಪ್ರಶಾಂತಿನಗರ) **ಶ್ರೀಮತಿ ರೇಖಾ ಕಾಖಂಡಕಿ**
9ನೇ ಮುಖ್ಯರಸ್ತೆ, 17ನೇ ಅಡ್ಡರಸ್ತೆ
ಇಸ್ರೊ ಬಡಾವಣೆ, ವಿಕ್ರಮನಗರ
ಬೆಂಗಳೂರು – 560 078
ದೂರವಾಣಿ: 080–26665398
email : rsk9651@yahoo.com

॥ ಶ್ರೀ ಗೋಪೀನಾಥೋವಿಜಯತೇ ॥

ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯತ್ವಾದ್ಯನೇಕಗುಣಸಂಪನ್ನ ಪದವಾಕ್ಯಪ್ರಮಾಣ
ಪಾರಾವಾರಪಾರೀಣ ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ಜಗದ್ಗುರು
ಶ್ರೀಮನ್‌ಮಧ್ವಾಚಾರ್ಯ ಮೂಲ ಮಹಾ ಸಂಸ್ಥಾನ ಶ್ರೀಪದ್ಮನಾಭತೀರ್ಥ ಪರಂಪರಾ ಶ್ರೀಹಯವದನ
ರಂಗವಿಠ್ಠಲಾತ್ಮಕ ಶ್ರೀ ಗೋಪೀನಾಥ ದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ
ಶ್ರೀ ಶ್ರೀ ಪಾದರಾಜವರವಿದ್ಯಾಸಿಂಹಾಸನಾಧೀಶರಾದ ಶ್ರೀ 108 ಶ್ರೀ ಸತ್ಯನಿಧಿತೀರ್ಥ ಶ್ರೀಪಾದಂಗಳವರ
ವರಕುಮಾರರಾದ ಶ್ರೀ 108 ಶ್ರೀ ವಿಜಯನಿಧಿತೀರ್ಥ ಶ್ರೀಪಾದಂಗಳವರ ಕರಕಮಲ ಸಂಜಾತರಾದ

**ಶ್ರೀ 108 ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರು**

ದಿನಾಂಕ : 3.7.2010

**ಅನುಗ್ರಹ ಸಂದೇಶ**

ಶ್ರೀಪಾದರಾಜರಿಂದ ಹರಿದು ಬಂದ ಭಕ್ತಿ ಗಂಗೆ ವ್ಯಾಸರಾಜರು, ವಾದಿರಾಜರು, ಪುರಂದರದಾಸರು, ಕನಕದಾಸರವರೆಗೆ ಆವ್ಯಾಹತವಾಗಿ ನಡೆದು ಬಂದಿತು. ಕನಕದಾಸರಿಂದ ವಿಜಯದಾಸರವರೆಗೆ ಹರಿದಾಸ ಸಾಹಿತ್ಯವು ಸ್ವಲ್ಪ ಮಟ್ಟಿಗೆ ಮಂದವಾಯಿತು ಎಂದೆ ಹೇಳಬಹುದು.

ವಿಜಯದಾಸರ ತರುವಾಯ ದಾಸಸಾಹಿತ್ಯವು ಚುರುಕುಗೊಂಡು ಪ್ರವಹಿಸಿತು. ವಿಜಯದಾಸರ ಸಮಕಾಲೀನರಾದ ಪ್ರಸನ್ನ ವೆಂಕಟದಾಸರು ಮೂಲತಹ ಕಾಖಂಡಕಿಯವರು.

ಪ್ರಸನ್ನ ವೆಂಕಟದಾಸರ ಪೂರ್ವಜರು ಕಾಖಂಡಕಿಯವರೇ ಆದರು ಅವರನ್ನು ಬಾಗಲಕೋಟೆ ಪ್ರಸನ್ನ ವೆಂಕಟದಾಸರೆಂದೆ ಗುರುತಿಸುವುದು ಸಹಜವಾಗಿದೆ. ಅಂತಹ ಪ್ರಸನ್ನ ವೆಂಕಟದಾಸರ ಚರಿತ್ರೆಯನ್ನು ಶ್ರೀಮತಿ ರೇಖಾ ಕಾಖಂಡಕಿಯವರು ಸುಲಲಿತ ಶೈಲಿಯಲ್ಲಿ ಕಾದಂಬರಿ ರೂಪವಾಗಿ ನೀಡಿರುವುದು ಶ್ಲಾಘನೀಯ. ಅವರ ಶ್ರಮಕ್ಕೆ ಪ್ರಸನ್ನ ವೆಂಟಕದಾಸರ ಆರಾಧ್ಯಮೂರ್ತಿ ತಿರುಪತಿಯ ಶ್ರೀನಿವಾಸನು ಅನುಗ್ರಹಿಸಲಿ.

ಇಂತಹ ಅದ್ಭುತ ಕಾದಂಬರಿಯನ್ನು ರಚಿಸಿದ ಶ್ರೀಮತಿ ರೇಖಾ ಕಾಖಂಡಕಿಯವರಿಗೆ ನಮ್ಮ ಆರಾಧ್ಯ ಮೂರ್ತಿ ಶ್ರೀಹಯವದನ ರಂಗವಿಠಲ ಗೋಪೀನಾಥದೇವರು ವಿಶೇಷವಾಗಿ ಅನುಗ್ರಹಿಸಿ ಇಂತಹ ಕಾರ್ಯಗಳನ್ನು ಅವರಿಂದ ಪದೇ ಪದೇ ಮಾಡಿಸಲೆಂದು ಹಾರೈಸುತ್ತಾ

ಮಾಡುವ ನಾರಾಯಣ ಸ್ಮರಣೆಗಳು

ಶ್ರೀ ಶ್ರೀವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರು
ಶ್ರೀ ಪಾದರಾಜ ಮಠ, ಮುಳಬಾಗಿಲು



# ಮುನ್ನುಡಿ

ಕರ್ನಾಟಕ ಸಂಸ್ಕೃತಿಯ ಶ್ರೀಮಂತಿಕೆಗೆ ಬಾಗಲಕೋಟೆಯ ಪ್ರದೇಶದ ಸಾಂಸ್ಕೃತಿಕ ಕೊಡುಗೆಯೂ ಮಹತ್ವದ್ದು. ಹಾಗೆಯೇ ಬಾಗಲಕೋಟೆ ಪ್ರಾಂತ್ಯದ ಪ್ರಾದೇಶಿಕ ಸಂಸ್ಕೃತಿಯ ಹಿರಿಮೆಗೆ ಕಾಖಂಡಕಿ ಮನೆತನದ ಕೊಡುಗೆಯೂ ದೊಡ್ಡದು. ಪ್ರಸನ್ನ ವೆಂಕಟದಾಸರಂತಹ ಹಿರಿಯ ಹರಿದಾಸರು ಬಾಳಿ ಬದುಕಿದ ನೆಲ ಬಾಗಲಕೋಟೆ. ಬಾಗಲಕೋಟೆ, ಘಟಪ್ರಭ, ಮಾಧ್ವ ವಿದ್ವಾಂಸರು, ಹರಿದಾಸ ಪರಿಸರ, ಬಡತನದ ಒಡಲಲ್ಲಿ ಟಿಸಿಲೊಡೆದಿದ್ದ ಅದ್ಭುತ ಸಂಸ್ಕಾರ, ವೇದವಿದ್ಯಾಸಂಸ್ಕೃತಿ, ಆಚಾರ ವಿಚಾರಗಳನ್ನೇ ಸಂಸಾರ ಮಾಡಿಕೊಂಡು ಬದುಕುತ್ತಿದ್ದ ಬಡತನದ ಧೀಮಂತಿಕೆ, ಇವೆಲ್ಲದರ ಜೊತೆ ಜೊತೆಗೇ ಹರಿದುಬಂದ ದೈವಭಕ್ತಿ ಹಾಗೂ ಧರ್ಮಶ್ರದ್ಧೆ, ಇದೇ ಕಳೆದ ಮೂರು ನಾಲ್ಕು ಶತಮಾನಗಳ ಬಾಗಲಕೋಟೆಯ ಸಾಂಸ್ಕೃತಿಕ ಹಿನ್ನೆಲೆ.

ಈ ಹಿನ್ನೆಲೆಯಿಂದ ಬ್ರಹ್ಮ ಕಮಲದಂತೆ ಪಲ್ಲವಿಸಿ ಬಂದವರು ಪ್ರಸನ್ನ ವೆಂಕಟದಾಸರು. ದಾಸರ ಬಾಲ್ಯ–ಬದುಕು–ಪಯಣ–ಅನುಗ್ರಹ ಹಾಗೂ ಪದಪದ್ಯಗಳ ಅಭಿವ್ಯಕ್ತಿ–ದಾಸವೈಭವ–ಸಾಧನೆ–ಆತ್ಮಶೋಧನೆಗಳ ಅಪೂರ್ವ ವಿಚಾರಗಳನ್ನು ಕಾದಂಬರಿ ರೂಪದಲ್ಲಿ ನಮ್ಮೆದುರಿಗೆ ಈ ಗ್ರಂಥದ ಮೂಲಕ ಬಿಚ್ಚಿಟ್ಟಿದ್ದಾರೆ, ಸುಪ್ರಸಿದ್ಧ ಕನ್ನಡ ಲೇಖಕಿ ಶ್ರೀಮತಿ ರೇಖಾ ಕಾಖಂಡಕಿ. ಬಾಗಲಕೋಟೆ ಪ್ರಾಂತದ ಖರೇ ಕನ್ನಡ ಭಾಷಾದ ತಾಜಾತನದ ಸವಿ ಅನುಭವಿಸಬೇಕೆನ್ನುವವರು ಈ ಪುಸ್ತಕವನ್ನು ಒಮ್ಮೆ ಅವಶ್ಯ ಓದಲೇಬೇಕು.

ಪ್ರಸನ್ನ ವೆಂಕಟದಾಸರ ಹಾಡುಗಳಿಂದ ಅವರ ಬದುಕಿನ ವಿವರಗಳು ದೊರಕಿರುವುದು ಅಲ್ಪವೇ. ಅದರಲ್ಲೂ ಅವರ ಬಾಲ್ಯದ ದಿನಗಳ ಪೂರ್ಣ ವಿವರ ಎಲ್ಲಿಯೂ ದೊರೆತಿಲ್ಲ. ಆದರೆ ರೇಖಾ ಕಾಖಂಡಕಿಯವರು ಆ ವಿವರಗಳನ್ನು ಘಟನೆಗಳನ್ನು ಅತ್ಯಂತ ಅರ್ಥಪೂರ್ಣವಾಗಿ, ಸಾಂದ್ರವಾಗಿ, ಅನುಭವ ವೇದ್ಯವಾಗುವಂತೆ ಬಣ್ಣಿಸಿರುವ ಪರಿ ಅನನ್ಯ.

ಮಾನಾಭಿಮಾನ ಬಿಟ್ಟು, ಇಡೀ ದೇಹವನ್ನು ಹಿಡಿಮಾಡಿ ಒಳಗಿನ ಸಂಕಟಕ್ಕಾಗಿ ಒಂದು ವಾಟಗಾ ಮಜ್ಜಿಗಿ ಕೇಳಿದರೆ ತನ್ನ ಅಸ್ತಿತ್ವವನ್ನೇ ಅಲುಗಾಡಿಸುವಂತಹ ಮಾತು ಕೇಳಬೇಕಾಯಿತಲ್ಲಾ. ಕೂಳಿಗೆ ಭಾರವಾಗಿ ತಾನು ಇನ್ನು ಅಲ್ಲಿ ಇರಬಾರದೆಂದು ನಿಶ್ಚಯಿಸಿ ಹೊರಟ ವೆಂಕಣ್ಣನಿಗೆ ತಿರುಪತಿಯಲ್ಲಿ ದೇವರ ದರ್ಶನವಾಗಿ ತನ್ನನ್ನು ಕೈಹಿಡಿದೆತ್ತಿ, ನಾಲಿಗೆಯ

ಮೇಲೆ ಪ್ರಸನ್ವೇಂಕಟ ಎಂದು ಪರಮಾತ್ಮ ಬರೆದ ಅಮೃತಘಳಿಗೆ, ನಾಡಿಗೆ ಒಬ್ಬ ಶ್ರೇಷ್ಠ ಹರಿದಾಸರನ್ನು ನೀಡಿತು. ಪ್ರಸನ್ನ ವೆಂಕಟದಾಸಯುಗ ನಿರ್ಮಾಣವಾಯಿತು. ಬೆಳದಿಂಗಳಿನಂತಹ ಭಾಷೆಯ ವಿಶಿಷ್ಟ ಹೊಳಪಿನ ಗಂಡುಶೈಲಿಯ ಉತ್ಕೃಷ್ಟ ಹಾಡುಗಳ ಹೊಳೆ ಹರಿಯತೊಡಗಿದವು. ವಿಜಯದಾಸರಂತಹವರೇ 'ಕಾಕಂಬಿ ಸಾಹಿತ್ಯವೆಂದು ಗೌರವದಿಂದ ಬಣ್ಣಿಸುವಂತಹ ಸಾಹಿತ್ಯ ಹೊರಬಂತು. ರೇಖಾ ಕಾಖಂಡಕಿಯವರು ದಾಸರನ್ನು ಕಂಡಿರುವ ರೀತಿ, ಕಂಡದ್ದನ್ನು ಅಕ್ಷರಗಳಲ್ಲಿ ಮೂಡಿಸಿರುವ ರೀತಿ ಅದ್ಭುತವೆನಿಸುತ್ತದೆ. "ದಾಸರ ದೇಹವೇ ಒಂದು ತಂಬೂರಿ ಇದ್ದಂತೆ. ಇದರ ತಂತಿಗಳನ್ನು ಶೃತಿಗೊಳಿಸಿ ರಾಗಹೊರಡಿಸಿದಂತೆ ದೇಹದ ಪ್ರತಿಯೊಂದು ಭಾವಗಳನ್ನು ಶೃತಿಗೊಳಿಸಿ ಆ ಪರಮಾತ್ಮನಿಗೆ ಪ್ರೀತಿಯಾಗುವಂತೆ ಹಾಡಿದ ಅವರ ಬಾಯಿಂದ ಕೀರ್ತನೆ ಹೊರಹೊಮ್ಮಿದಾಗ ಎಂತಹ ತನ್ಮಯತೆ, ಎಂತಹ ಆರ್ತರವ, ಎಂತಹ ಸಮರ್ಪಣಭಾವ ಅಡಗಿದೆ ಆ ಧ್ವನಿಯಲ್ಲಿ, ಆ ಸಾಹಿತ್ಯದಲ್ಲಿ. ದಾಸವಾಣಿ ಎಂದರೆ ಇದೆ ಏನೋ ? ಎಲ್ಲ ಮರೆತು ಭಾವದ ಬಂಧ ಕಳೆದು ಪರಮಾತ್ಮನಲ್ಲಿ ಲೀನವಾಗಿ ಅವನೇ ಇವರಾಗಿ, ಇವರೇ ಅವನಾಗಿ, ಒಳಭಾವಗಳನ್ನು ಸಾಕ್ಷಾತ್ಕಾರ ಮಾಡಿಕೊಂಡು ಲೋಕಕ್ಕೆ ಜ್ಞಾನ ಬಿತ್ತುವ ತೆರದಿ ಹಾಡುತ್ತಿರುವುದು ಬರಿ ಶಬ್ದಗಳಲ್ಲ. ಪದಗಳಲ್ಲ. ಅಕ್ಷರಗಳಲ್ಲ ನುಡಿ–ನುಡಿಗಳಲಿ ಬಿತ್ತಿ ಬೆಳೆದಂತೆ ನೂಲಂತೆ ನೇಯ್ದು. ನೇಯ್ದು ಸರ್ವ ಸಮರ್ಪಣಾ ಮಾಡಿದಂತಿರುವ ಭಕ್ತಿರಸ. ಸರ್ವಸಮರ್ಪಣಾ ಮೂಡಿದಂತಿರುವ ಭಕ್ತಿರಸ."

ಇದು ರೇಖಾ ಕಾಖಂಡಕಿಯವರು ಪ್ರಸನ್ನ ವೆಂಕಟದಾಸರ ಹಾಡುಗಳ ಬಗ್ಗೆ ಬರೆದ ವಾಕ್ಯಗಳಾದರೂ, ಈ ವಿವರಣೆ ಈ ಕಾದಂಬರಿಯಲಿ ಅಭಿವ್ಯಕ್ತವಾಗಿರುವ ರೇಖಾ ಕಾಖಂಡಕಿಯವರ ಸಮರ್ಥ ಲೇಖನ ಕೌಶಲ್ಯಕ್ಕೂ ಅನ್ವಯವಾಗುತ್ತದೆ.

ಗುರುಗಳಾದ ಮುದ್ಗಲಾಚಾರ್ಯರಿಂದ ಸಮಸ್ತ ಜ್ಞಾನಧಾರೆ ಪಡೆದು ಅನುಗ್ರಹೀತರಾಗಿ ಗುರುಗಳು ದಾಸರನ್ನು ಬೀಳ್ಕೊಟ್ಟಾಗ "ಒಂದು ಮಹಾಚೇತನ ಇನ್ನೊಂದು ಮಹಾಚೇತನವನ್ನು ಅಗಲುವಾಗ ಆಗಿದ್ದು ಬೆಳಕಿನ ಒಂದು ಮಹಾಯಾನ" ಎನ್ನುವ ಮಾತು ಶಾಸನದಷ್ಟು ಸಾಂದ್ರವಾಗಿ ಮೂಡಿ ಬಂದಿದೆ.

ರೇಖಾ ಕಾಖಂಡಕಿಯವರ ಲೇಖನಿಯಿಂದ ಮೂಡಿಬಂದ 'ಮಹಾ ನವಮಿ' ಈಗಾಗಲೇ ಅತ್ಯಂತ ಪ್ರಸಿದ್ಧವಾದ ಟಿ.ವಿ. ಸೀರಿಯಲ್ ಆಗಿದ್ದು, ಲೇಖಕಿಯವರಿಗೆ ಅಪಾರ ಜನಮನ್ನಣೆಯನ್ನು ತಂದುಕೊಟ್ಟಿದೆ. ಪ್ರಸನ್ನ ವೆಂಕಟದಾಸರ ಸೇವಾರೂಪದ ಈ "ಪ್ರಸನ್ನ ವೆಂಕಟ ವಿಜಯ" ಕೃತಿ



ಬರಹದ ಮೂಲಕ ರೇಖಾ ಕಾಖಂಡಕಿಯವರು ತಮ್ಮ ಸಾಹಿತ್ಯಿಕ ಹಾಗೂ ಶಬ್ದ ರೂಪಸಾಮರ್ಥ್ಯವನ್ನು ಸಶಕ್ತವಾಗಿ ಪ್ರಕಟಪಡಿಸಿದ್ದಾರೆ. ಈ ಕಾದಂಬರಿಯಲ್ಲಿಯ ಅನೇಕ ಘಟನೆಗಳು, ಮಾತುಗಳು, ಸತ್ಯ ದರ್ಶನ ಮಾಡಿಸುತ್ತವೆ. ಸಾಕ್ಷಾತ್ಕಾರದ ಹಾದಿಗೆ ಎಳೆಯುತ್ತವೆ. ಅಲೌಕಿಕ ಸಾಧನೆಯತ್ತ ಸೆಳೆಯುತ್ತವೆ. ಹೃದಯವನ್ನು ತಟ್ಟುತ್ತವೆ. ಮನಸ್ಸನ್ನು ಮುಟ್ಟುತ್ತವೆ. ಅಂತರಂಗದಲ್ಲಿ ಭಕ್ತಿರಸದ ಊಟೆಯನ್ನು ಉಕ್ಕಿಸುತ್ತವೆ. ಲೇಖಕಿಯ ಈ ರೂಪಕ ಶಕ್ತಿ, ಶಬ್ದಶಿಲ್ಪ ಸಾಮರ್ಥ್ಯ, ತೀವ್ರ ರಸಾನುಭವ–ಅಭಿವ್ಯಕ್ತಿ, ವಿಸ್ತಾರವಾದ ವಿಚಾರ ಕ್ಷೇತ್ರ, ಸತ್ವಭರಿತ ನಿರೂಪಣೆ, ಹಾಗೂ ಕಾದಂಬರಿಯ ಮೂಲದ್ರವ್ಯದ ಸತ್ವದಿಂದಾಗಿ, ದಾಸತತ್ವದ ಮಹತ್ವದಿಂದಾಗಿ ಈ ಕಾದಂಬರಿ ಹರಿದಾಸ ಕ್ಷೇತ್ರಕ್ಕೆ ಒಂದು ಅಮೂಲ್ಯ ಸಾಹಿತ್ಯಿಕ ಕೊಡುಗೆಯಾಗಿದೆ.

ಹರಿದಾಸರ ಭಾವ, ಓದುಗರ ಹೃದಯ ಎರಡನ್ನೂ ಅರಿತಿರುವ ಲೇಖಕಿ ರೇಖಾ ಕಾಖಂಡಕಿಯವರ ಈ ಕಾದಂಬರಿ ಪ್ರಸನ್ನ ವೆಂಕಟದಾಸರ ದಿವ್ಯ ಜೀವನ ದರ್ಶನವನ್ನು ಭವ್ಯವಾಗಿ ಮೂಡಿಸುವಲ್ಲಿ ಯಶಸ್ವಿಯಾಗಿದೆ.

ಶ್ರೀಮತಿ ರೇಖಾ ಕಾಖಂಡಕಿಯವರು ಮೊದಲಿನಿಂದಲೇ ದಾಸ ಸಂಸ್ಕೃತಿಯ ಪರಿಸರದಲ್ಲಿ ಬೆಳೆದುಬಂದವರು. ಮನೆಯ ಸಾಂಪ್ರದಾಯಿಕ ರೀತಿನೀತಿಗಳಿಂದ ನೇಮ, ನಿಷ್ಠೆ, ವ್ರತ, ಹಾಡು, ಹಸೆ, ಸಾಹಿತ್ಯ, ಸಂಗೀತಗಳು ತಾವಾಗಿಯೇ ಅವರಿಗೆ ಲಭ್ಯವಾಗಿದೆ.

ಸಾಂಪ್ರದಾಯಿಕ ಹಿನ್ನೆಲೆಯಿಂದ ಬಂದಿದ್ದರೂ ಆಧುನಿಕ ಸಮಾಜದ ಅಗತ್ಯಗಳಿಗೆ ಸ್ಪಂದಿಸಬಲ್ಲ ಮುಕ್ತ ಮನಸ್ಸಿರುವ ಶ್ರೀಮತಿ ರೇಖಾ ಕಾಖಂಡಕಿಯವರು ಹರಿದಾಸರಂತೆಯೇ ಜೀವಪರ ಹಾಗೂ ಜೀವನಪರ ಮನೋಭಾವವಿರುವವರು. ಹಾಗಾಗಿ ಹರಿದಾಸರ ಜ್ಞಾನಭಕ್ತಿಯ ದೀವಿಗೆಯನ್ನು ಬೆಳಗಿ ಆ ಸಂಭ್ರಮವನ್ನು ಸಮುದಾಯಕ್ಕೆ ಹಂಚಿದ ಪುಣ್ಯ ಅವರದಾಗಿದೆ. ಅವರ ಪತಿ ಡಾ॥ ಸುಭಾಸ ಕಾಖಂಡಕಿಯವರು ಉತ್ತಮ ವಿಜ್ಞಾನಿಗಳೆನಿಸಿದ್ದರೂ ದಾಸಭಾವದ ಪ್ರಭಾವದಲ್ಲೇ ಬೆಳೆದುಬಂದವರು. ಹೀಗಾಗಿ ಈ ಅಪರೂಪದ ಜೋಡಿಯಿಂದ ನಾಡು ಮತ್ತಷ್ಟು ಉತ್ಕೃಷ್ಟ ಸಾಹಿತ್ಯ ಕೃಷಿಯನ್ನು ನಿರೀಕ್ಷಿಸುವುದು ಸಹಜವೇ. ಇಬ್ಬರಿಗೂ ನನ್ನ ಹೃದಯ ತುಂಬಿದ ಅಭಿನಂದನೆಗಳು.

**ವಿದ್ಯಾವಾಚಸ್ಪತಿ ಡಾ॥ ಅರಳುಮಲ್ಲಿಗೆ ಪಾರ್ಥಸಾರಥಿ**



# ಶ್ರೀ ಪ್ರಸನ್ನ ವೆಂಕಟ ವಿಜಯ

## (ಶ್ರೀ ಪ್ರಸನ್ನ ವೆಂಕಟ ದಾಸರ ಜೀವನ ಆಧಾರಿತ ಕಾದಂಬರಿ)



## ಶ್ರೀ ಪ್ರಸನ್ನ ವೆಂಕಟ ನಮನ

ದಾಸರ ಕಂಡೀರಾ ವಿಶೇಷವ ನೋಡಿರ್‍ಯಾ

ಪದುಮನಾಭನ ಪಾದಗತಿಯೆಂದು ನಂಬಿ
ಹರಿಧ್ಯಾನದಲ್ಲಿ ಪರಮ ಪದವಿ ಕಂಡ ॥ ಪ ॥

ಭವ ಬಂಧನದಿಂದ ಬಂಧ ಮುಕ್ತರಾಗಿ
ಸಪ್ತಗಿರಿಯ ದಾರಿ ಭೂವೈಕುಂಠವೆಂದು
ಅನಾಥಗೆ ನಾಥನು ನೀನೆ ಎಂದು
ಹರಿಪಾದಕೆ ಪ್ರಾಣಾರ್ಪಣೆ ಮಾಡುವೆನೆಂದ ॥ 1 ॥

ಅಕ್ಷರಕ್ಷರದಲ್ಲಿ ಅನಕ್ಷರ ಕಳೆದು
ಇಕ್ಷುಚಾಪನ ಪಿತನ ಅಕ್ಷಿಯಿಂದಲಿ ಕಂಡು
ನಾಲಿಗೆ ಮೇಲೆ ಬೀಜಾಕ್ಷರ ಪಡೆದು
ಲಕ್ಷ – ಲಕ್ಷವ ಹರಿನಾಮಾಮೃತ ಹರಿಸಿದ ॥ 2 ॥

ಶಬ್ದರೂಪದೊಳು ಬ್ರಹ್ಮಾಂಡವ ನಿರ್ಮಿಸಿ
ಭಾಗವತಾದಿ – ನಾರಾಯಣ ಪಂಜರ
ಕೋಲು – ಕೋಲೆನ್ನುವ ಕೊರವಂಜಿ ರೂಪ
ಶಬ್ದ – ಶಬ್ದದೊಳು ಮುಕುಂದನ ಕಂಡ ॥ 3 ॥

ಪ್ರಸನ್ವೆಂಕಟನೆಂಬ ನಾಮದ ಬಲದಿ
ಭವಬಂಧನಾದಿ ದೋಷವ ಕಳೆದು
ಹರಿನಾಮ ಸ್ಮರಣೆಯೇ ಸರ್ವಕಾಲದಲಿ
ಮುಕುತಿ ಪಥಕೆ ದಾರಿ ತೋರ್ಪುದು ಎಂದ ॥ 4 ॥

– ರೇಖಾ ಕಾಖಂಡಕಿ

**ಚು**ಮು, ಚುಮು, ನಸುಕು. ಪ್ರಶಾಂತವಾಗಿ ಹರಿಯುತ್ತಿರುವ ಘಟಪ್ರಭೆ. ವಿಶಾಲವಾಗಿ ಹರಡಿದ ಗುಡ್ಡದಾಚೆಯಿಂದ ಸೂರ್ಯ ಈಗಲೋ ಆಗಲೋ ಬರುವಂತಿದ್ದ. ಅವನ ಹೊನ್ನಿನ ಕಿರಣಕ್ಕೆ ಪ್ರಭೆಯ ನೀರು ಕೂಡ ಹೊನ್ನಿನಂತೆ ಹೊಳೆಯುತ್ತಿದೆ. ಸೃಷ್ಟಿಯ ಕೌಶಲ್ಯಕ್ಕೆ ಹಾಗೇ ಒಂದಕ್ಕೊಂದು ಪೂರಕವಾಗಿ, ಸೌಂದರ್ಯದ ಅಗಾಧತೆಯನ್ನು ನಿಸರ್ಗದ ತುಂಬೆಲ್ಲ ಹರಡಿ ನಿಂತಂತೆ.

ಲಕ್ಷ್ಮೀಬಾಯಿ ನಿಧಾನವಾಗಿ ಬಟ್ಟೆ ಕುಸುಕುತ್ತ ನೀರಿನ ಸೆಳುವಿಗೆ ಧೋತರದ ಪದರನ್ನು ಬೀಸಿ, ಬೀಸಿದನ್ನು ಮತ್ತೆ ನೀರುಗುಂಟ ಸೆಳೆದುಕೊಂಡು, ಹಿಂಡುತ್ತಿದ್ದರು. ಅವರ ಕಣ್ಣು ಕೂಡ ಸೃಷ್ಟಿಯ ಅಗಾಧತೆಯನ್ನು ನೋಡುತ್ತಿತ್ತು. ಇಷ್ಟು ವರ್ಷವಾಯ್ತು ಈ ಊರಿಗೆ ಬಂದು ಇಂಥಹ ನಿಸರ್ಗ ಸೌಂದರ್ಯವನ್ನು ತಾನು ಕಂಡೇ ಇಲ್ಲವೇನೋ ಎನಿಸಿತು ಒಂದು ಗಳಿಗೆ. ಅಥವಾ ಕಣ್ಣು ಕಂಡರೂ ಮನಸ್ಸಿನ ಭಾವನೆಗೆ ನಿಲುಕಿರಲಿಲ್ಲವೇನೋ? ಎದುರಿಗೆ ಹರಡಿನಿಂತ ಹಸಿರುಗುಡ್ಡ ಗುಡ್ಡದಾಚೆಯಿಂದ ಇದೀಗ ಬರುತ್ತಿದ್ದೇನೆ ಎನ್ನುವಂತೆ ಇಣುಕಿ ಇಣುಕಿ ಬರುತ್ತಿರುವ ಸೂರ್ಯ. ಅವನ ಹಿಂದೆ ಅವನೇ ಹೆಗಲ ಮೇಲೆ ಹೊನ್ನಿನ ರೇಷ್ಮೆ ವಸ್ತ್ರವನ್ನು ಹೊದ್ದುಕೊಂಡು ಬಂದಂಥಹ ಬಂಗಾರದ ಕಿರಣ, ಆಕಾಶದುದ್ದಕ್ಕೂ ಬೆಳಗಿನ ಪ್ರಸನ್ನತೆಯನ್ನು ಸಾರುತ್ತ ತಮ್ಮದೇ ಕೊರಳಿನ ಇಂಪಿನಲ್ಲಿ ಹಾಡುತ್ತಾ, ಹಾರಾಡುತ್ತಾ ಹೊರಟ ಹಕ್ಕಿಗಳ ಸಾಲು. ನೋಡುತ್ತಾ ನೋಡುತ್ತಾ ಅವರ ಮನಸ್ಸು ಯಾಕೋ ಒಂದು ರೀತಿ ಎಂದೂ ಅನುಭವಿಸದ ಒಂದು ರೀತಿಯ ಉಲ್ಲಾಸವನ್ನು ಅನುಭವಿಸುತ್ತಿತ್ತು. ಆ ಉಲ್ಲಾಸದ ಹಿಂದೆ ಯಾವುದೋ ಹಿತವಾದ ಭಾವನೆ. ಆ ಸತ್ಯ ಜಗತ್ತಿನೊಡನೆ ತಾನು ಮಿಳಿತನಾಗಿದ್ದೇನೆ ಎನ್ನುವ ಹಗುರ ಭಾವನೆ ಬಟ್ಟೆಯನ್ನು ಹಿಂಡಿಡುತ್ತ ಯೋಚಿಸುತ್ತಿದ್ದಾರೆ ಅವರು.

"ಯಾಕೆ ಇವತ್ತಿನ ಮುಂಜಾನೆ ಯಾಕಿಷ್ಟು ಛೆಂದ ಅನಿಸ್ತದೆ; ಎನು ಪರಮಾತ್ಮನ ಲೀಲಾ. ನಿರ್ಜೀವ ವಸ್ತುದೊಳಗೂ ಸುದ್ದೆ ಜೀವಾ ತುಂಬಾನೇನೋ ಅನಸ್ತದ. ಯಾವತ್ತು ತನಗ ಹಿಂಗ ಅನಿಸಿರಲೇ ಇಲ್ಲಾ. ಹೆಣ್ಣು– ಹೆಂಗಸು ತಾನು. ತನ್ನ ಪ್ರಪಂಚ ಅಂದ್ರ ಅಡಗಿಮನಿ, ನಡುಮನಿ, ಉಡಸಾರಣಿ, ಉಪಗಾರಣಿ ತೊಳೆಯೋದು, ದೇವರ ಪೂಜಾಕ್ಕ ತಯಾರಿ ಮಾಡೂದು, ಬಾಗಲಕೋಟಿಗೆ ಬಂದ ಮ್ಯಾಲೆ ಹಿರೇ ಆಚಾರಂತ ನಾಕ ಮಂದಿ ಇವರನ್ನು ಕರದು ಆಕಳಾದಾನಾಕೊಟ್ಟಿದ್ರು. ಹಂಗಾಗಿ ದನದ ಗ್ವಾದ್ಲಿಕೆಲಸ. ಹಾಲು ಹಿಂಡೂದು, ಗ್ವಾದ್ಲಿ ಸ್ವಚ್ಛಮಾಡೂದು ಬ್ಹಾಳ ಆತಂದ್ರ ಅರಬಿ ಒಗೆಯೋಣ ಅಂತ ನದಿಗೆ ಬರೂದು, ಇಲ್ಲಾ ಸಂಜೆ ಆತಂದ್ರೆ ಕೊತ್ಲಪ್ಪನ ಗುಡಿಗೆ ಹೋಗುದು, ಹಬ್ಬ– ಹರಿದಿನ ಬಂತಂದ್ರ ಲಕ್ಷ್ಮೀಹಾಡು, ಭಜನಿ, ದೇವರುಹಾಡು ಅಂತ ನಾಕಮಂದಿ ಮನೆಗ ಹೋಗುದು ಬಿಟ್ರ ಬ್ಯಾರೆ ಪ್ರಪಂಚದ ಜ್ಞಾನ ಇಲ್ಲ ತನಗೆ; ಆದರ ಮನಸಿಗೆ ತಂಪು ಕೊಡುವಂಥ ಇಂಥಾದ್ದೂ ಒಂದು ಮುಂಜಾನೆ ಇರ್ತದಂತ ತನಗೆ ಗೊತ್ತೇ ಇರ್ಲಿಲ್ಲ. ಹೂಂ. ಹೊತ್ತು ಎರ್ತದ ಇನ್ನ ಸೂರ್ಯ ಹೊರಗ ಬಂದದ್ದಾತು. ಇವ್ರು ಪುರಾಣ ಹೇಳಿ ಬರ್ತಿರ್ತಾರೋ ಏನೋ" ಎನ್ನುತ್ತಾ ಸೆಳೆದ ಧೋತರ, ಪಂಜಾ ಹಿಂಡಿ ಸುರುಳಿ ಮಾಡಿ ಕಲ್ಲಿನ ಮೇಲಿಟ್ಟಳು ಅಷ್ಟರಲ್ಲೆ. ಬಾಜೂ ಮನಿ ಸೀತಕ್ಕ ಬಟ್ಟೆಯ ಗಂಟನ್ನು ಕೆಳಗಿಳಿಸಿ ತಾವು ನೀರಲ್ಲಿ ಕಾಲಿಟ್ಟು,



"ಯಾಕ್ರೆ ಲಕ್ಷುಂಬಾಯರ ಲಗೂ ಬಂದ್ಹಂಗ ಕಾಣಸ್ತದ ಒಗೊಣಕ್ಕ, ಆತೇನು ಒಗೆಯೂದು" ಎಂದರು.

"ಇಲ್ರಿ ಇನ್ನು ಒಂದೆರಡು ಅವೆ. ನಮ್ಮ ರಾಘುನ್ನು ಲಂಗೋಟಿ ಪಂಜಾ ಒಗಿಬೇಕು"

"ಇವತ್ತೇನು, ಇಷ್ಟೊ ಲಗೂ ಮನಿ ಕೆಲಸ ಆಗಿತ್ತ? ನೀವೇನು ಬಿಡ್ರಿ. ನಸುಕು ಹರಿಯೊದ್ರಾಗ ಥಳಿ ರಂಗೋಲಿ ಆಕಳಾ ಹಿಂಡೂದು, ದೇವರ ಮನಿ ಕಸಾ ಅಂತ ಮುಗಿಸೇ ಬಿಟ್ಟರ್ತೀರಿ" ಎನ್ನುತ್ತ ಸೀತಕ್ಕೆ ತಮ್ಮ ಬಟ್ಟೆಯ ಗಂಟುಬಿಚ್ಚಿ. ಒಂದೊಂದಾಗಿ ಬಟ್ಟೆಯನ್ನು ನೀರಿನಲ್ಲಿ ಅದ್ದಿ, ಕಲ್ಲಿನ ಮೇಲಿಡುತ್ತಿದ್ದಳು.

"ಕೆಲ್ಸ ಆಗೇದ ಬಿಡ್ರಿ. ಯಾಕೋ ಲಗೂ ಎಚ್ಚರಾತು, ನಸಿಕ್ಲೆ ನಾಕಕ್ಕಂದ್ರ ನಮ್ಮನಿಯವ್ರು ಎದ್ದು ಜಪಕ್ಕ ಕೂಡ್ತಾರ. ನಾನು ಎದ್ದು ಲಗೂ ಕೆಲಸ ಮುಗಿಸಿರತೀನಿ. ನದ್ಯಾಗ ಗದ್ಲ ಆಗೂದ್ರಾಗ ನಾಕಬಟ್ಟೆ ಒಕ್ಕೋಂಡು ಹೋಗೋಣಂತ ಲಗೂ ಬಂದೆ. ನಮ್ಮನಿಯವರು ದೇಸಾಯರ ಮನ್ಯಾಗ ಭಾಗವತ ಸಪ್ತಾಹ ಹೇಳಿಕ್ಕೆ ಹತ್ಯಾರ. ಅವ್ರು ಬರೂದ್ರಾಗ ಹೋಗಿ ಮೈ ತೊಳಕೊಂಡು ಪೂಜೆಗೆ ತಯಾರಿ ಮಾಡ್ಬೇಕು. ಅವ್ವಯ್ಯಾ ಯಾಕೋ ಒಂತರ ಆಗಲಿಕ್ಕೆ ಹತ್ತೈದ" ಎನ್ನುತ್ತ ಲಕ್ಷ್ಮೀಬಾಯಿ ಅದೇ ಬಂಡೆಗೆ ಕೂತು ಅಂಗೈ ಊರಿ ಕಣ್ಣು ಮುಚ್ಚಿದರು.

"ಯಾಕವ್ವ, ಎನಾತು? ಒಮ್ಮೇಲೆಗೆ" ಎಂದು ಸೀತಕ್ಕ ಹತ್ತಿರ ಬಂದು ಆರಾಮಿದ್ದಿಯಿಲ್ಲೋ ಮತ್ತೆ?" ಎಂದರು.

"ಎನಿಲ್ರಿ ಯಾಕೋ ಒಮ್ಮೊಂದೊಮ್ಮೆಲೆಗೆ ಕಣ್ಣು ಕತ್ತಲಿಟ್ಟಂಗ ತಿರುಗಿದಂಗಾತು. ಹೊಟ್ಯಾಗ ಒಂತರ ಮಳ ಮಳಸ್ತದ"

"ಯಾಕೆ, ಪಿತ್ತ–ಗಿತ್ತ ಎನssರ ಆಗೇದೇನು?"

"ಇರಲಿಕ್ಕಿಲ್ಲ ಸೀತಕ್ಕ ಯಾಕೋ ಎಂಟು ದಿನದಿಂದ ಹಿಂಗ ಕಾಡ್ತದೆ. ನಾನು ಮೊದಲ ಹಂಗ ಅನ್ಕೊಂಡಿದ್ದೆ" ಅವರ ಮಾತು ಕೇಳುತ್ತ ಸೀತಕ್ಕ ಒಂದು ಗಳಿಗೆ ಹುಳು–ಹುಳು ಅವರ ಮುಖ ನೋಡಿದರು. ಯಾಕೋ ಲಕ್ಷ್ಮೀಬಾಯಿ ಮುಖದ ಕಳೆಯೇ ಬೇರೆಯಾಗಿದೆ. ಯಾವತ್ತೂ ಇಲ್ಲದ ತೇಜಸ್ಸು ಮುಖದ ಮೇಲಿದೆ. ಇದೇ ಈಗ ಸೂರ್ಯನ ಕಿರಣ ಸೋಕಿ ಹೊಳೆಯುವ ಘಟಪ್ರಭೆಯಂತೆ ಒಳಗಿನದೆಲ್ಲೊ ಬೆಳಕು ಲಕ್ಷೀಬಾಯಿಯ ದೇಹದ ಸುತ್ತ ಹರಡಿದ ಪ್ರಭಾವಲಯದಂತೆ.

"ಪಿತ್ತದ್ದೆಲ್ಲಾ ಅಂದ್ರ – ಹಂಗರಾ ಇನ್ನೇನೋ ಇರ್ಬೇಕು ಲಕ್ಷ್ಮಿ ನಿನ್ನ ಮುಖದ ಕಳೆ ನೋಡಿದ್ರ ಬ್ಯಾರೇದ ಅನಸ್ತದ"

"ಅಂದ್ರ?"

"ಹುಚ್ಚಿ ಒಬ್ಬ ಮಗನನ್ನು ಹಡದಿ, ಇನ್ನು ತಿಳೀಲಿಲ್ಲ. ರಾಘುಗೆ ತಮ್ಮ, ತಂಗಿ ಎನssರ ಬರ್ತಾರೇನು ಮತ್ತೆ?"

"ಇಲ್ರೀ ಇರಲಿಕ್ಕಿಲ್ಲ. . .ಬಿಡ್ರಿ. ಇನ್ನೊಂದು ನಾಕೈದು ವರ್ಷ ಹೋದ್ರೆ, ನಮ್ಮ ರಾಘುಗೆ ಲಗ್ನದ ವಯಸ್ಸು ಆಗ್ತದ" ಯಾವುದೋ ಒಂದು ಆತಂಕದ, ಸಂಕೋಚದ ಧ್ವನಿಯಲ್ಲಿ ಲಕ್ಷ್ಮೀಬಾಯಿ ಹೇಳಿದರು.

"ಹಂಗ ನೀ ಅಂತಿಯವ್ವಾ. ಆದ್ರ ದೇವರ ಲೆಕ್ಕ ಎನ್ತಿರದೋ ಯಾರಿಗ್ಗೊತ್ತು? ಆದ್ರss ಆಗಲೇಳು. ಒಬ್ಬ ಮಗಾ ಮಗಾ ಅಲ್ಲಂತ ಒಂದು ಕಣ್ಣು ಕಣ್ಣಲ್ಲಂತ. ಮತ್ತೆ ನಿಮ್ಮ ಅಂಗಳಕ್ಕ ಕೂಸಿನ ಅಳು, ನಗು ಆಟ ಪಾಟಾ ಅಂತ ಜೀವ ತುಂಬಲಿ"

"ಬ್ಯಾಡ ಸೀತಕ್ಕ. ಹಂಗೇನಾದ್ರೂ ಆದ್ರ ಅದೂ ಈ ವಯಸ್ಸಿನನ್ಯಾಗ. ನಾಳೇ ಕಿಲ್ಲೇದಾಗ ನಾಕುಮಂದಿ ಮುಂದ ಅಡ್ಡಾಡಲಿಕ್ಕೆ ನಾಚಗಿ ಆಗ್ತೇದ"

"ಹುಚ್ಚಿ, ಯಾಕ ಮುಖ ಸಣ್ಣದ ಮಾಡ್ಕೋತಿ. ಇದರಾಗೇನು ತಪ್ಪು. ಗಂಡ–ಹೆಂಡ್ತಿ ಸಂಸಾರಾ. ಮಕ್ಕಳು ಅಂದ ಮ್ಯಾಲೆ ಇರೂದ ಇವೆಲ್ಲ. ದೇವರ ಮನಸಿಗೆ ಬಂದ್ರ ಯಾವ ವಯಸ್ಸೇನು? ಬ್ಯಾಡಂದ್ರ ಅವನ ಲೆಕ್ಕಾಚಾರ ತಪ್ಪ ಆಗ್ತದೆ. ನಡೀ ನೀ ಮ್ಯಾಲೆ ನಡಿ. ಅವಂದೆರಡು ಅರಬಿ ನಾ ಒಗದು ಹಿಂಡಿಕೊಡ್ತೇನಿ. ನೀ ಸಾವಕಾಶ ಮನಿಗೆ ಹೊಗಿ ರಾಘುನ ಕಳಸು. ಅವನ ಕೈಯಾಗ ಅರಬಿ ಕೊಟ್ಟು ಕಳಸ್ತೀನಿ" ಎಂದರು ಸೀತಕ್ಕ. ಅನನ್ಯ ಅಂತಃಕರಣದಿಂದ ಯಾಕೋ ಅವರ ಮಾತೇ ಕೇಳೇ, ತಾನು ದೇಹದಲ್ಲಿ ಶಕ್ತಿ ಕಳೆದುಕೊಳ್ಳುತ್ತಿದ್ದೇನೆ ಎನಿಸಿತು ಲಕ್ಷ್ಮೀಬಾಯಿಗೆ. ಹೀಗೆ ಕಲ್ಲು ಬಂಡೆ ಮೇಲೆ ಒಂದು ಗಳಿಗೆ ಕೈಯೂರಿ ಕುಳಿತಳು. ನೀರಲ್ಲಿಯ ನೆಲ ಕಾಣದಂತೆ ತನ್ನ ಪರಿಸ್ಥಿತಿ ಕೂಡ ಎನು ಎನ್ನುವುದು ಗೊತ್ತಾ ಗುತ್ತಿಲ್ಲ. ದೇವರ ಯಾಕೆ ಈ ಪರಿಕ್ಷಾ.

"ಯಾಕ ಕೂತಿ ಎಳವ್ವಾ – ಮ್ಯಾಲೆನಡಿ" ಎಂದರು ಸೀತಕ್ಕ ಮತ್ತೆ

"ಇಲ್ರಿ, ಇವಂದೆರಡು ಬಟ್ಟಿ ನಾನು ಹಿಂಡಿಕೊಂಡು ಬಿಡ್ತೇನಿ" ಎಂದು ಕೂತಲ್ಲಿಂದ ಎದ್ದು, ಸೀರೆ ನೀರಿನ ಸೆಳೆವಿಗೆ ಬಿಟ್ಟು ಝಾಲಿಸಿ ಮತ್ತೆ ಸೆಳೆದು ಹಿಂಡಿ ಸುರುಳಿಮಾಡಿ ಹಿಂಡಿದ ಬಟ್ಟೆಯನ್ನು ಒಂದರ ಮೇಲೊಂದು ಇಡುತ್ತಿದ್ದಳು. ಯಾಕೋ ಮನಸ್ಸು ಕೂಡ ಇದರಂತೆ ಎಲ್ಲೆಲ್ಲಿಯೋ ಸುತ್ತಿ ಸುರುಳಿಯಾಗಿ ಬಿಡಿಸಲಾರದ ಕಗ್ಗಂಟಾಗುತ್ತಿದೆ ಎನೋ ಎನಿಸುತ್ತಿತ್ತು. ಮನಸ್ಸು ಮೈ ಕೈ ಎಲ್ಲ ಹೈರಾಣವಾಗಿ ದಿಕ್ಕು ತೋಚದೆ. . .ಸೀತಕ್ಕ ಹೇಳಿದಂತೆ ಹಂಗೇನಾದರೂ ಆಗಿದ್ದರೇ. . ?

ಈ ವಯಸ್ಸಿಗೆ ಕೂಸನ್ನು ಹೊತ್ತು, ಹಡೆದು, ಬೆಳೆಸಿ ದೇವರೇ ಈ ಬಡತನಕ್ಕೆ ಯಾಕ ನಮ್ಮನ್ನ ಮತ್ತೆ ಪರೀಕ್ಷಾ ಮಾಡ್ತಿ.

"ಯಾಕವ್ವ, ಲಕ್ಷ್ಮೀಬಾಯಿ ಯಾಕ ಮುಖ ಒಮ್ಮೆಲೆಗೆ ಇಳೀತಲ್ಲ?" ಎಂದರು ಸೀತಕ್ಕ. ಬೆನ್ನ ಮೇಲೆ ಕೈಯಿಟ್ಟು ಸಮಾಧಾನಿಸುವವರಂತೆ.

"ಸೀತಕ್ಕ ಈ ವಯಸ್ಸಿನ್ನಾಗ ಯಾಕ ದೇವರು ಹಿಂಗ ನಮ್ಮನ್ನ ಪರೀಕ್ಷಾ ಮಾಡ್ತಾನೆ ಅನಸ್ತು. ಎಲ್ಲಾದಕ್ಕೂ ಒಂದು ಕಾಲಾ – ಮಾನಾ ಅಂತ ಇರ್ತದಲ್ಲ.



"ಹುಚ್ಚಿ, ಮನಶ್ಯಾರ ಲೆಕ್ಕದಾಗ ಕಾಲಾ–ಮಾನಾ ಅಂತ ಇರ್ತದ. ಆದ್ರ ದೇವರ ಲೆಕ್ಕದಾಗ? ಎನು ಮಾಡಿದ್ರೂ ನಮ್ಮ ಛಲೋದಕ್ಕ ಮಾಡ್ತಾನ ಆ ಭಗವಂತ. ನಮ್ಮ ಕೈಯಾಗ ಎನssದ ಹೇಳು ಲಕ್ಷ್ಮೀ ನೋಡಿದಿಲ್ಲೊ ಮೂಲಿಮನಿ ರಾಧಕ್ಕ ಹತ್ತು ವರ್ಷದಿಂದ ಮಕ್ಳು ಬೇಕು ಅಂತ, ದೇವರು ದಿಂಡರು, ಗುಡಿ–ಗುಂಡಾರಾ ಅಂತ ಸುತ್ತು ಹಾಕೇ ಹಾಕ್ತಾಳ ಆದುವೇನು? ಇಲ್ಲಾ. ಅಂದ ಮೇಲೆ ಅವನ ಇಚ್ಛಾಕ ಎನssದ ಅಂವಾ ಮಾಡ್ತಾನ. ನಡಿ ವಿಚಾರಾ ಮಾಡೂದು ಬಿಡು. ನಂದು ಒಗೂಣು ಆತು ಹಿಂಡಿಕೊಂಡು, ಸುರುಳಿ ಸುತಗೊಂಡು ಬರ್ತೀನಿ" ಎಂದು ಸೀತಕ್ಕ ಹಿಂಡಿದ ಬಟ್ಟೆಯನ್ನು ಸುರುಳಿ ಮಾಡಿ, ಇಬ್ಬರೂ ಸಿಂಬಿ ಮಾಡಿಕೊಂಡಂತೆ ಬಟ್ಟೆಯ ಗಂಟನ್ನು, ತಲೆಮೇಲೆ ಹೊತ್ತುಕೊಂಡು, ಕಲ್ಲಿನ ಸಾರು ದಾಟಿ, ನದಿಯ ಕಾಲುಹಾದಿಯಲ್ಲಿ ಹೊರಟು ಅಗಸೆಯ ಬಾಗಿಲು ದಾಟಿ ಕಿಲ್ಲೇಯ ಅಂಚಿಗೆ ಬಂದು ತಮ್ಮ ತಮ್ಮ ಮನೆಯತ್ತ ಹೆಜ್ಜೆ ಹಾಕಿದರು.

ಯಾಕೋ ಸೀತಕ್ಕ ಹೇಳಿದ ಸಮಾಧಾನ ಮಾತುಗಳನ್ನು ಕೇಳಿದರೂ ಲಕ್ಷ್ಮೀಬಾಯಿಗೆ ಮನಸ್ಸಿನ ತಳ–ಮಳ ತಪ್ಪಲಿಲ್ಲ ಇದು ಪಿತ್ತದ ಪರಿಣಾಮ ಅಲ್ಲ, ಸೀತಕ್ಕ ಹೇಳಿದಂತೆ ಬ್ಯಾರೇನೇ ಇದೆ ಎಂದು ತನಗೂ ನಾಕು ದಿನದಿಂದ ಅನಿಸಿದೆ. ಹಗಲು ರಾತ್ರಿ ಯಾವದೋ ಗುಂಗುಹಿಡಿದಂತೆ. ಆತಂಕದ ಭಾವ ಮೈ ಮನಸ್ಸನ್ನು ಹಿಂಡಿ, ಹೈರಾಣ ಮಾಡುತ್ತಿದೆ. ಮನಸ್ಸಿನ ಗೊಂದಲ ತಳಮಳ, ಹೋರಾಟ ಎಲ್ಲದರ ನಡುವೆ, ಮನಸ್ಸಿನ ಅಶಾಂತಿ ಕೂಡ ಹೆಚ್ಚಾಗಿ, ಲಕ್ಷ್ಮೀಬಾಯಿ ಮನೆಗೆ ಬಂದು ಬಟ್ಟೆಯ ಗಂಟನ್ನು ಅಂಗಳದ ಕಟ್ಟೆಗೆ ಇಟ್ಟು, ಒಳನಡೆದಾಗ ಗಂಡ ಸ್ನಾನಕ್ಕೆ ಹೋಗುವ ತಯಾರಿಯಲ್ಲಿದ್ದರು. ಒಳಬಂದ ಹೆಂಡತಿಯನ್ನು ನೋಡಿ.

"ಬಂದೇನು ಲಕ್ಷ್ಮೀ, ನಾನು ಸ್ನಾನ ಮಾಡಿ ಬರ್ತೀನಿ, ಪೂಜೆ ತಯಾರಿ ಮಾಡಿಬಿಡು. ರಾಘು ಗುರುಕುಲಕ್ಕೆ ಹೋದಾಂವಾ. ಇನ್ನು ಬಂದಿಲ್ಲ ಕಾಣಸ್ತದ" ಗಂಡನ ಮಾತು ಲಕ್ಷ್ಮೀಬಾಯಿಗೆ ಕೇಳಿಸಲಿಲ್ಲವೋ ಏನೋ ಇಲ್ಲಾ ಅವಳ ಚಿಂತೆಯ ಗೂಡಾದ ಮನಸ್ಸಿಗೆ ತಟ್ಟಲಿಲ್ಲವೊ? ಒಂದು ನಿಡಿದಾದ ಉಸಿರು ಬಿಟ್ಟು ಆಕೆ ತನ್ನ ಕೆಲಸ ಮಾಡುತ್ತಲೇ ಇದ್ದಾಳೆ. ತನ್ನ ಮಾತಿನ ಕಡೆ ಲಕ್ಷ್ಯವಿಲ್ಲದೆ, ಮಾತಿಗೆ ಉತ್ತರ ಕೊಡದೆ ಇದ್ದ ಹೆಂಡತಿಯ ಕಡೆ ನೋಡಿದರು ನರಸಪ್ಪಯ್ಯ. ಯಾಕೋ ಹೆಂಡತಿ ಎಂದಿನಂತಿಲ್ಲ ಎನಿಸಿತು. ಯಾವದೋ ಮೋಡ ಮುಸುಕಿದಂತೆ. ಚಿಂತೆಯ ನೆರಳು ಅವಳನ್ನು ಕವಿದುಕೊಂಡಿದೆ ಎನಿಸಿತು.

"ಯಾಕ ಲಕ್ಷ್ಮೀ ಹಿಗ್ಯಾಕಿದ್ದಿ? ನಾ ಮಾತಾಡಿದ್ದು ಕೇಳಿಸಲಿಲ್ಲೇನು?"

"ಎನು ಹೇಳಿದ್ರಿ ನೀವು" ಎಂದಳಾಕೆ ನಿರ್ವಿಣ್ಣ್ಯವಾದ ಧ್ವನಿಯಲ್ಲಿ

"ಹಾಂ, ಹೌದು ಹಂಗಾರ ಖರೇನ ನಿನ್ನ ಮನಸಿನ್ನಾಗ ಎನೋ ಚಿಂತಿ ಕೊರಿಲಿಕ್ಕೆ ಹತ್ತೆದ ಎನದು?"

"ಎನಿಲ್ಲ, ನೀವು ಸ್ನಾನಕ ಹೋಗ್ರಿ. ನಾ ದೇವರ ಮುಂದ ಪೂಜೆಗೆ ತಯಾರಿ ಮಾಡ್ತೀನಿ" ಎನ್ನುತ್ತ ಆಕೆ ಅದೇ ಸಪ್ಪಗಿನ ಧ್ವನಿಯಲ್ಲಿ ಹೇಳುತ್ತ ಒಳಹೋದಳು. ಯಾಕೋ ಅವಳ ನಡಿಗೆಯಲ್ಲಿ ಅವಳ ನುಡಿಯಲ್ಲಿ, ಭಾವದಲ್ಲಿ ದಿನದ ಜೀವಂತಿಕೆಯಿರಲಿಲ್ಲ.

ನರಸಪ್ಪಯ್ಯ ದಿನದಂತೆ ಪೂಜೆ ನೈವೇದ್ಯ ಎಲ್ಲ ಮುಗಿಸಿದರು. ಮಗನಿಗೆ ಗಂಡನಿಗೆ ಊಟ ಬಡಿಸಿ, ಅವರಿಬ್ಬರದು ಊಟಾದ ಮೇಲೆ ತನಗೆ ಎಲೆ ಹಾಕಿಕೊಂಡು ಬಡಿಸಿಕೊಂಡು, ಎಲೆ ಮುಂದೆ ಕೂತರೆ ಅನ್ನ ನೋಡಿದರೆ, ಯಾಕೋ ಹೊಟ್ಟೆಯಲ್ಲಿದ್ದುದೆಲ್ಲ ಹೊರಗೆ ಬಂದಂತೆ ಎರಡು ತುತ್ತು ಜುಲುಮೆಯಿಂದ ಉಂಡರೂ ಅನ್ನ ಹೊಟ್ಟೆಗೆ ಹೋದೊಡನೆ ಆಕೆ ಬಾಯಿಗೆ ಕೈಯಿಟ್ಟುಕೊಂಡು ಬಚ್ಚಲಕ್ಕೆ ಹೋಗಿ ಬಂದಾಗ ನರಸಪ್ಪಯ್ಯ ಪಡಸಾಲೆ ಕಟ್ಟೆಗೆ ಕೂತು ಪಂಚಾಂಗ ನೋಡುತ್ತಿದ್ದರು. ಹೆಂಡತಿ ಬಚ್ಚಲು ಮನೆಯಿಂದ, ಸೆರಗಿನಿಂದ ಬಾಯಿ, ಮುಖ ಒರೆಸಿಕೊಳ್ಳುತ್ತ ಹೊರಬಂದಾಗ ಯಾಕೋ ಅವಳ ಮುಖ ಎಂದಿನಂತಿಲ್ಲ ಎನಿಸಿತು.

"ಲಕ್ಷ್ಮೀ ಬಾ ಇಲ್ಲಿ" ಎಂದರಾತ. ಆಕೆ ಬಂದು ಪಡಸಾಲೆಯ ಗೋಡೆಗೆ ಒರಗಿ ನಿಂತಳು.

"ಮುಂಜಾನಿಂದ ನೋಡ್ಲಿಕ್ಹತ್ತೀನಿ. . .ಯಾಕೋ ಒಂತ್ಹರ ಇದ್ದೀಯಲ್ಲ ಎನಾತು? ಎಲ್ಲಾ ಭಲೋ ನಡದದಲ್ಲಾ?"

"ಎಲ್ಲಾ ಭಲೋ ನಡದದ ಇಲ್ಲಂತೆ ಎಲ್ಲೆಂದೆ? ಆದ್ರ ಎಲ್ಲೋ ಎನೋ ತಪ್ಪೇದ ಅನಸ್ತದ"

"ತಪ್ಪು ಎಂಥಾ ತಪ್ಪು, ಲಕ್ಷ್ಮೀ ಈ ಊರಿಗೆ ಬಂದಮ್ಯಾಲೆ ದೇವರ ದಯದಿಂದ ಧರ್ಮ, ಕರ್ಮ ಎಲ್ಲಾ ಭಲೋ ನಡದದಲ್ಲಾ ರಾಘುಗ ವೇದಾಧ್ಯಯನಕ್ಕೆ ಎಲ್ಲಾ ರೀತಿ ಅನಕೂಲ ಆಗೇದ, ಹೇಳಿ ಕೇಳಿ ಪಂಡಿತರ ಊರು ಇದು ದೇವರು ದಿಂಡರು, ಪುರಾಣ, ಪುಣ್ಯಕಥಿ, ಹರಿಕಥಿ ಶ್ರವಣಾ ಅಂತು ಎಲ್ಲಾ ರೀತಿಯಿಂದ ಆತ್ಮೋದ್ಧಾರಕ್ಕೆ ವೇಂಕಪ್ಪ. ಹಾದಿ ಮಾಡಿಕೊಟ್ಟಾನ, ಆದ್ರ ನಿನ್ನೆ ಚಿಂತಿ ಯಾವದು ಹೇಳು?"

ಗಂಡನ ಮಾತು ಖರೇ, ಕಾಖಂಡಕಿ ಬಿಟ್ಟು ಈ ಊರಿಗೆ ಬಂದದ್ದೆ ಧರ್ಮ–ಕರ್ಮ ಉಳಿಸಿಗೊಳ್ಳಕ್ಕೆ ಅಂತ. ಅದಕ್ಕ ಒಂದು ರೀತಿಯಿಂದ ಕಟ್ಟಿ ಗೋವಿಂದಾಚಾರ್ಯರು ಕಾರಣ ಆಗಿದ್ದು, ಅವರ ಸಹವಾಸದ ಪ್ರಭಾವದಿಂದ ಗಂಡನಿಗೂ ಈ ಊರಿನ ಸೆಳೆತವಿತ್ತು. ತಮ್ಮ ಅನ್ನದ ಋಣ. ಭೂಮಿಯ ಋಣ ಎನ್ನುತ್ತಾರಲ್ಲ. ಅದೇ ತಮ್ಮನ್ನು ಇಲ್ಲಿ ಎಳೆದು ತಂದಿರ ಬೇಕೇ, ಬಾಗಲಕೋಟೆ ಎಂದರೇನೆ ಪಂಡಿತರ ಊರು ಎನ್ನುತ್ತಿದ್ದರು. ಈ ಊರಿಗೆ ಬಂದ ಮೇಲೆ ಬದುಕುವ ಹಾದಿ ಕೂಡ ಸರಳವಾಗಿತ್ತು.

"ನೆನಪದ ಎನು ಲಕ್ಷ್ಮೀ ನಿನಗ ನಾವು ಈ ಊರಿನ ಹಾದಿ ಹುಡುಕ್ಕೊಡು ಬಂದದ್ದು, ಕಾಖಂಡಕಿಯೊಳಗ ಎಂಥಾ ಪರಿಸ್ಥಿತಿಯೊಳಗ ಇದ್ವಿ"

"ಹೌದು, ನನೆಪದ. . " ನೆನಪಿಸಿಕೊಂಡಳಾಕೆ, ಇಂಥದೆ ಒಂದು ಮಧ್ಯಾನ್ಹ ನೆನಪಿಲ್ಲದೆ ಎನು? ಹೀಗೆ ಇಬ್ಬರ ಮನಸ್ಸು ಕ್ಷೋಭೆಗೊಂಡಿತ್ತು. ಅದಕ್ಕೆ ಮನೆ ಪರಿಸ್ಥಿತಿ ಕಾರಣವಿರಲಿಲ್ಲ. ಸುತ್ತಲಿನ ಪರಿಸರ, ಊರ ವಾತಾವರಣ, ಎಂಥಹ ಅತಂತ್ರದಲ್ಲಿ ನಿಂತಿದ್ದೇವು ತಾವೆಲ್ಲ ಧರ್ಮ ನಾಶವಾಗುತ್ತಿದೆ ಎನ್ನುತ್ತಿದ್ದರು. ಊರ ಜನ ಯಾರೋ ಮೊಗಲರಂತೆ ಜಾತಿ – ಧರ್ಮದ ಮಾತು, ವೈದಿಕ ಧರ್ಮವನ್ನು ನಾಶಮಾಡಲೆಂದೇ ಎಲ್ಲ ಕಡೆ ದಾಳಿ ಮಾಡುತ್ತಿದ್ದರಂತೆ



ಅಂದಮೇಲೆ ಊರಲ್ಲಿ ಧರ್ಮ – ಕರ್ಮ ಎಲ್ಲಿ ಉಳಿದೀತು. ಧರ್ಮ ನಾಶವಾದರೇ ನಾವು ನಾಶವಾಗುತ್ತೇವೆ. ಭಗವಂತ ಹಾದಿ ತೋರಿಸು ಎನ್ನುತ್ತಿದ್ದರು. ಪಂಡಿತ ಜನ ಒಂದು ರೀತಿಯಿಂದ ತಮ್ಮ ಬದುಕು ಕೂಡ ಕ್ಷೋಭೆಗೊಂಡು ನರಳುತ್ತಿತ್ತು. ಅದಕ್ಕೂ ಮೊದಲು ಮಹಿಪತಿದಾಸರಂಥ ಮಹಾಮಹಿಮರೇ. ಕಾಖಂಡಕಿ ಬಿಟ್ಟು ಹೋಗಿ ಕೃಷ್ಣಾ ತೀರದ ಊರಿಗೆ ಸೇರಿದರೆಂದು ಅನ್ನುತ್ತಿತ್ತು. ಊರ ಜನ ಇನ್ನು ತಮ್ಮಂಥವರ ಪಾಡೇನು? ತಮಗಿದ್ದುದು ಕೂಡ ಪಾಂಡಿತ್ಯ, ವೇದ, ಪುರಾಣ ಎಂದೇ ನಡೆಯುತ್ತಿತ್ತು ಬದುಕು. ಅದನ್ನು ನಂಬಿಕೊಂಡೆ ಬಾಳಬೇಕಿತ್ತು. ತಾವು ಬಾಳುತ್ತಿದ್ದೇವು ಕೂಡ. ಗಂಡ ಕೂಡ ಪಾಂಡಿತ್ಯದಲ್ಲಿ ಕಡಿಮೆಯೆ? "ನರಸಪ್ಪಯ್ಯ ನಿಮ್ಮ ನಾಲಗಿಯೊಳಗೆ ಸರಸ್ವತಿ ಕೂತು. ಶೃತಿ ನುಡಸ್ತಾಳಾ, ಎಲ್ಲ ಪುರಾಣಾ ವೇದ ಉಪನಿಷತ್ತು ನಿಮ್ಮ ಬಾಯಾಗ ಅದ ಅಂತಿದ್ದರು. ಅದರಿಂದಲೇ ಬದುಕು ಕೂಡ ಸಾರ್ಥಕ ಎಂದು ತಿಳಿದವರು ತಾವು. ಇದ್ದ ಒಬ್ಬ ಮಗ ರಾಘವೇಂದ್ರ ಇನ್ನು ಹುಡುಗ ಅವನು ಕೂಡ ತಂದೆಯಂತೆ ವೇದಪುರಾಣ ಕಲಿತು ಎಲ್ಲದರಲ್ಲೂ ಪಾಂಡಿತ್ಯ ಸಾಧಿಸಬೇಕೆಂಬ ಹಂಬಲ ಕೂಡ ತಮ್ಮದಿತ್ತು.

ಆದರೆ ಊರಿನ ವಾತಾವರಣ, ಎಲ್ಲ ಜನ ಜೀವನ, ಬದುಕು, ಧರ್ಮ, ಕರ್ಮ ಅಲ್ಲೋಲ ಕಲ್ಲೋಲವಾಗುವಂತೆ ನವಾಬನ ಕಡೆಯವರು. ದಾಳಿ ಮಾಡಿ ಅಲ್ಲಲ್ಲಿ ಗುಡಿ–ಗುಂಡಾರಗಳನ್ನು ಒಡೆದು ಹಾಕುತ್ತಿದ್ದಾರೆ ಎನ್ನುತ್ತಿದ್ದರು. ಯಾರೂ ವೇದ ಓದುವ ಹಾಗಿಲ್ಲ. ಮಂತ್ರ ಹೇಳುವ ಹಾಗಿಲ್ಲ. ಪೂಜೆಮಾಡುವ ಹಾಗಿಲ್ಲ ಇದೆಂಥಹ ಭಂಡ ಬದುಕು ಎನ್ನುತ್ತಿದ್ದ ಗಂಡ.

ಅದರ ಮೇಲೆ ಮಳೆ ಬೆಳೆ ಇಲ್ಲದೆ, ಬದುಕು, ದುಸ್ತರವಾಗುತ್ತಿತ್ತು. ಅಂಥದೆ ದಿನಗಳಲ್ಲಿ ಅಲ್ಲವೇ ಬಾಗಲಕೋಟೆಯಿಂದ ಗೋವಿಂದಾಚಾರ್ಯರು ಬಂದ ಸಂದರ್ಭ. ಅವರು ಬಾಗಲಕೋಟೆಯಿಂದ ಕಾಖಂಡಕಿಗೆ ಬರುವದು ಹೊಸದೇನಲ್ಲ ನರಸಪ್ಪಯ್ಯ ಅವರು ಕೂಡೇ ವಿಜಾಪುರದಲ್ಲಿ ಗುರುಕುಲದಲ್ಲಿ ಅಧ್ಯಯನ ಮಾಡಿದವರಂತೆ. ಮುಂದೆ ಮದುವೆ, ಸಂಸಾರ ಎಂದು ಆಗಿ ಅವರು ಹೆಣ್ಣು ಕೊಟ್ಟ ಮಾವನ ಮನೆಯಲ್ಲಿ ಬಾಗಲಕೋಟೆಯಲ್ಲಿ ಇದ್ದವರು. ಆದರೆ ಇಬ್ಬರ ಸ್ನೇಹ ಮಾತ್ರ ಉಳಿದುಕೊಂಡೆ ಬಂದಿತ್ತು. ಆಗಾಗ ವೇದಶಾಸ್ತ್ರಗಳ ಬಗ್ಗೆ ಇಬ್ಬರೂ ಚರ್ಚೆ ಮಾಡುತ್ತಿದ್ದರು. ಸಂಸಾರದ ಸುಖ–ದುಃಖಗಳನ್ನು ಹೇಳಿಕೊಳ್ಳುತ್ತಿದ್ದರು.

ಇಂಥದೆ ಒಂದು ಮಧ್ಯಾಹ್ನ ಊಟ ಮುಗಿಸಿ ಪಡಸಾಲೆ ಕಟ್ಟೆಗೆ ಕುಳಿತು ಪಂಚಾಂಗ ನೋಡುತ್ತಿದ್ದರು ನರಸಪ್ಪಯ್ಯ. ಯಾಕೋ ಮನಸ್ಸು ಕೂಡ ಹೇಳಿಕೊಳ್ಳದ ತೊಳಲಾಟದಲ್ಲಿ ಸಿಕ್ಕಿ ಹಾಕಿಕೊಂಡಿತ್ತು. ಈಗಿನ ಅತಂತ್ರ ಸ್ಥಿತಿಯ ಬಗ್ಗೆ ಹಗಲು–ರಾತ್ರಿ ಯೋಚನೆಯಾಗಿತ್ತು. ವಿಜಾಪುರದಲ್ಲಿ ಮೊಗಲರ ದಾಳಿಯಿಂದ ಧರ್ಮದ ಪತನವಾಗುತ್ತಿದೆ. ಆದಿಲ್‌ಶಹನ ಕಾಲ ಅದು, ಯಾಕೋ ಎನೋ ತಮ್ಮಂಥವರಿಗೆ, ಕೈಹಿಡಿದ ಬದುಕಿನ ಬೇರು ಅಲುಗಾಡುತ್ತಿದೆ ಎನೋ ಎನ್ನುವಷ್ಟು ಅತಂತ್ರಸ್ಥಿತಿ.

ಪೂರ್ವಜರಿಂದ ಸನಾತನ ಧರ್ಮ ಸಂಸ್ಕೃತಿಯನ್ನು ನಂಬಿಕೊಂಡು ಬಂದವರು ತಾವು. ವೇದಾಧ್ಯಯನ ಪುರಾಣ, ಶಾಸ್ತ್ರಗಳು ನಿತ್ಯಕರ್ಮಗಳು, ಧರ್ಮದ ಮಧ್ವ ಸಿದ್ಧಾಂತದ

ಮೂಲತತ್ವಗಳು ತಮ್ಮ ಬದುಕಿಗೆ ಉಸಿರಿನಂತೆ ಸದಾ ಹಿಂದೆ ನಿಂತು ಮುಕ್ತಿಮಾರ್ಗಕ್ಕೆ ಹಚ್ಚುವಂತಿತ್ತು. ಅಂಥಹ ತಮಗೆ ಬರ ಬರುತ್ತೆ. ತಾವು ನಂಬಿದ ತತ್ವ ಧರ್ಮ ಎಲ್ಲ ಬಿರುಗಾಳಿಗೆ ಸಿಕ್ಕು ನಲುಗಿ ಬಿಡುತ್ತವೆ ಎನೋ ಎನ್ನುವಷ್ಟು ಪ್ರಲೋಭನೆಗೊಂಡಿತ್ತು. ತಮ್ಮ ಕಾಲವಾದ ಮೇಲೆ ಮುಂದೆ ಮಗನ ಬದುಕು ಕೂಡ ಅದೇ ಮೂಲತತ್ವಗಳನ್ನು ನಂಬಿ ಬದುಕಬೇಕು ಮಗ. ಧರ್ಮದಲ್ಲಿ, ವೇದಶಾಸ್ತ್ರಗಳಲ್ಲಿ ಪರಿಣತಿಯನ್ನು ಪಡೆದು ಪಂಡಿತನಾಗಬೇಕು. ಈ ಆಸೆ ಯಾವ ತಂದೆ–ತಾಯಿಗಿರುವುದಿಲ್ಲ. ಹಾಗೇ ತಮಗೂ ಇತ್ತು. ಆದರೆ ಈಗ ಕಾಖಂಡಕಿಯಲ್ಲಿ ರಾಜಕೀಯ ಪರಿಸ್ಥಿತಿ ನೋಡಿದರೆ, ಮೊಗಲರ ದಾಳಿಗೆ ತುತ್ತಾಗಿ, ತಾವು ಕಂಡ ಭವಿಷ್ಯದ ಕನಸು ಚೂರಾಗಿ ಬಿಡಬಹುದು.

ಇಂಥಹದೆ ಮನಸ್ಸಿನ ತೊಳಲಾಟ ಬೇಗುದಿಯಲ್ಲಿ ಮನಸ್ಸು ಬೇಯುತ್ತಿರುವಾಗ, ಅದಕ್ಕೆ ನೀರೆರೆದು ಶಾಂತವಾಗುವಂತೆ ಮಾಡಲೆಂದೇ ಬಂದಿರಬೇಕು. ಗೋವಿಂದಾಚಾರ್ಯರು ಬಂದಾಗ ಪಂಚಾಂಗ ನೋಡುತ್ತಿದ್ದ ಗಂಡ ಅದನ್ನು ಬಾಜೂ ಇಟ್ಟು ಆಚಾರ್ಯರ ಮುಖ ನೋಡಿದರು ಮತ್ತೆ ಮಾತನಾಡಲಾರದೆ ಉಸಿರುಗರೆದರು.

“ಯಾಕ ನರಸಪ್ಪಯ್ಯ ಮುಖ ನೋಡಿದ್ರ ಬ್ಯಾಳ ಚಿಂತಿ ಹತ್ತೇದಂತ ಕಾಣಸ್ತದ” ಎಂದಿದ್ದರು. ಎಷ್ಟೆಂದರೂ ಅಂತರಂಗ ಸ್ನೇಹಿತ. ಮನಸ್ಸಿನ ಬೇಗುದಿ ಬಿಚ್ಚಿಟ್ಟರು “ಈಗ ಕಾಖಂಡಕಿಯೊಳಗೆ ಜೀವನಂದ್ರ ಉಸುಕಿನ ಗುಪ್ಪಿ ಆಗೇದ ಗೋವಿಂದ ಯಾವಾಗ, ಯಾವ ನೀರಿನ ಸೆಲಿ ಬಂದು ಕೊಚ್ಚಿಗೊಂಡು ಹೋಗ್ತದೋs ನಿನಗೆ ಗೊತ್ತೆ ನಾನು ವಿದ್ಯಾಕ ಎಷ್ಟು ಬೆಲಿ ಕೊಡ್ತೀನಿ ಅಂತ. ಈಗಿನ ಇಲ್ಲಿ ಪರಿಸ್ಥಿತಿಗೂ ನಿನಗೆ ಗೊತ್ತದೆ. ಇಂಥಾ ಪರಿಸ್ಥಿತಿಯೊಳಗ ಅವನ ವೇದಾಧ್ಯಯನ ನಡೆದೀತೆ. ಪಾಂಡಿತ್ಯ ಅನ್ನೂದು ನನ್ನ ತಲಿಗೆ ಮುಗಿಬಾರ್ದು” ಎಂದಿದ್ದರೂ ಒಂದು ಗಳಿಗೆ ಗೋವಿಂದಾಚಾರ್ಯರು ಎನು ಮಾತಾಡಲಿಲ್ಲ. ಅಂಗಳದ ಕಟ್ಟೆಗೆ ಎರಿ ಬರುತ್ತಿರುವ ಬಿಸಿಲನ್ನೇ ನೊಡುತ್ತಿದ್ದರು. ಮತ್ತೆ ತಲೆ ಎತ್ತಿ ಇವರ ಮುಖ ನೋಡಿದ್ದರು.

“ನನ್ನ ಮಾತು ಕೇಳ್ತಿ ಎನು ನೀನು?”

“ಹೇಳು”

ಗೋವಿಂದಾಚಾರ್ಯರು ಹೇಳಿದ್ದು ಒಂದೇ ಮಾತು. ಅದು ತಮ್ಮ ಬದುಕನ್ನು ಮುನ್ನಡೆಸುವ ಮಾತು. ಬಾಗಲಕೋಟೆಗೆ ಬಂದು ಬಿಡು. ನಿನಗೆ ಗೊತ್ತಲ್ಲ ಅಲ್ಲಿ ಮಹಾಮಹಿಮ ಪಂಡಿತರಿದ್ದಾರೆ. ರಾಘೂಗೂ ಅಧ್ಯಯನ ಮಾಡ್ಲಿಕ್ಕೆ ಗುರುಕುಲ ಅದ. ಅರವತ್ತೋಣಿ ಎಪ್ಪತ್ತೋಣಿ ಎಂದರೆ ಸಾಮಾನ್ಯ ಓಣಿಗಳಲ್ಲ. ಅಷ್ಟು ಜನ ವೇದಾಧ್ಯಯನ ಮಾಡಿದವ್ರು ಇದ್ದಾರ ನೀ ಎನು ಸಾಮಾನ್ಯ ಅಲ್ಲ. ವೇದ, ಶಾಸ್ತ್ರ, ಪುರಾಣ ಎಲ್ಲ ಅರೆದು ಕುಡಿದವ. ನಿನ್ನಂಥವ ಒಬ್ಬ ಬಾಗಲಕೋಟಿಗೊ ಬೇಕಾಗ್ಯದ. ನಿನ್ನ ಬದುಕು, ನಿನ್ನ ಕೈಹಿಡದು ನಡೆಸ್ತದ” ಎಂದರು. ಕಾಖಂಡಕಿ ಯೊಳಗೆ ನಮ್ಮಂಥವ್ರು ಎಂಥಾ ಪಡಿ ಪಾಟಲು ಪಡ್ಲಿಕ್ಕೆ ಹತ್ಯಾರ ಅಂತ ನಾನು ನೋಡೀನಿ ಈಕಾ ಇರೂ ನೆಲಿಚಿಂತಿ ಮಾಡಿಬ್ಯಾಡಾ. ಕಿಲ್ಲೇದಾಗ ನದಿ ಅಂಚಿಗೆ ನಂದ ಒಂದು ಜಾಗ ಅದು ತಗೋ ಮನಿ ಮಾಡು” ಎಂದಿದ್ದರು.



ಆಯಿತು, ಕಾಖಂಡಕಿಯ ಮನೆ ತೆಗೆದು ಸಂಸಾರ ಕಟ್ಟಿಕೊಂಡು ಬಾಗಲಕೋಟೆಗೆ ಬಂದದ್ದಾಯ್ತು. ಹೊಸ ಜಾಗ, ಹೊಸ ಪರಿಸರ, ಹೊಸ ಸ್ನೇಹ, ಸಂಂಧಗಳು, ಗೋವಿಂದಯ್ಯ ಹೇಳಿದಂತೆ ಕಿಲ್ಲೇ ಅಂಚಿಗೆ ಮನೆ ಮನೆಯಿಂದ, ತುಸುದೂರದಲ್ಲಿ ಕೆಳಗಿಳಿದರೆ ನದಿಯ ಹಾದಿ, ಜೀವ ಚೈತನ್ಯವಾಗಿ ಹರಿಯುತ್ತಿದ್ದಾಳೆ ಘಟಪ್ರಭೆ. ನಿಸರ್ಗ ಮೈ ಎತ್ತಿ ಬಂದಂತೆ ನದಿಯಾಚೆ ಗುಡ್ಡ.

ಓಣಿಯ ಜನ ಹೊಸಬರಾದರೂ ಬಂದ ಕೆಲದಿನಗಳ್ಲೇ ಅಂತಃಕರಣ ತೋರಿ ತಮ್ಮೊಳಗೆ ಒಂದಾಗಿ ಬಿಟ್ಟರು. ಇದೇ ಎದುರುಮನೆ ಸೀತಕ್ಕ ಹಿರಿಯಕ್ಕನಂತೆ. ಎಲ್ಲದಕ್ಕೂ ಕೈಹಿಡಿದು ನಡೆಸಿದಳು. ಹಬ್ಬ, ಹರಿದಿನ, ನವರಾತ್ರಿ, ಶ್ರಾವಣಮಾಸ, ವರಮಹಾಲಕ್ಷ್ಮೀ ಎಂದು ವ್ರತ, ನೇಮ, ಪುರಾಣಗಳಲ್ಲಿ ದಿನಗಳು ಎಷ್ಟು ಸಂತೋಷವಾಗಿ ಕಳೆಯುತ್ತಿದ್ದವು. ಗಂಡನಿಗೆ ಅವರ ಪಾಂಡಿತ್ಯ ಕಂಡೇ ಅಲ್ಲಲ್ಲಿ ಪೂಜೆ, ಪುರಾಣ, ಭಾಗವತ ಸಪ್ತಾಹ ಎಂದರೆ ಎಲ್ಲಾದಕ್ಕೂ ಕರೆಯುತ್ತಿದ್ದರು. ಹೀಗಾಗಿ ಬದುಕು ಎಷ್ಟು ನಿಶ್ಚಿಂತತೆಯಿಂದ ಕಳೆಯುತ್ತಿತ್ತು. ಸದ್ಬ್ರಾಮಣ ಎಂದು ಕರೆದು, ನಾಕಾರು ಮನೆಯವರು, ಆಕಳುದಾನ ಕೊಟ್ಟು, ಪಾವನವಾದೇವು ಎಂದುಕೊಂಡರು. ರಾಘುನ ಅಧ್ಯಯನ ಯಾವ ಅಡೆ–ತಡೆಯಿಲ್ಲದೆ ನಡೆಯುತ್ತಿತ್ತು. ತಮಗೂ ಸತ್ಸಂಗ, ಪುರಾಣ, ಪುಣ್ಯಕಥೆಯೆಂದು, ಜನ್ಮ ಪಾವನವಾಗುವಷ್ಟು ಮುಕ್ತಿ ಚಿಂತನೆಗೆ ಹಾದಿಯಾಗಿತ್ತು.

ನಿಟ್ಟುಸಿರು ಬಿಟ್ಟು, ಬಂದ ಹಾದಿ ನೆನಸಿಕೊಂಡಳಾಕೆ. ಈಗ ಎದುರು ಕುಳಿತು ಗಂಡ ಕೇಳುತ್ತಿದ್ದಾರೆ.

“ಹೇಳು ಲಕ್ಷ್ಮೀ, ಎಲ್ಲಾ ಛಲೋ ನಡೆದದಲ್ಲಾ ಯಾಕ ಚಿಂತಿ ಮಾಡುವಂಥಾದ್ದು ಎನssದ” ಅಂತ

“ಹೌದು, ನೀವನ್ನೋದು ಖರೇ. . ದೇವರು ನಮಗೆ ಇಲ್ಲೆ ಕರ್‍ಕೊಂಡು ಬಂದು ಬದುಕು ಹಾದಿ ತೋರಿಸಿದ. ಬದುಕಿನ ಜೋಡಿ. ಮುಕ್ತಿ ಹಾದಿಗೆ ಅನುಕೂಲ ಮಾಡಿದ. ಆದ್ರ ಆದ್ರ. . .ಈ ವಯಸ್ಸಿನ್ಯಾಗ ನಮಗ ಇದು ಬೇಕಾಗಿರಲಿಲ್ಲ. ಅಲ್ಲ? ಯಾಕ ದೇವರು ನಮ್ಮನ್ನು ಹಿಂಗ ಪರೀಕ್ಷಾ ಮಾಡ್ಲಿಕ್ಕ ಹತ್ಯಾನ ಅನಸ್ತು” ಆಕೆಯ ಧ್ವನಿಯಲ್ಲಿ ಜೀವಂತಿಕೆ ಇಲ್ಲ ಎನಿಸಿತು ಅವರಿಗೆ. ತನ್ನ ಕೈಹಿಡಿದು ಬಂದು ಈ ಸಂಸಾರಕ್ಕೆ ಕಾಲಿಟ್ಟ ಮೇಲೆ ಯಾವತ್ತೂ ಇಂಥಹ ಬದುಕಿನ ಬಗ್ಗೆ ನಿಸ್ಸಾರವಾಗಿ ಮಾತನಾಡದೆ ಸಾಧ್ವಿಯಾಕೆ. ಎಂಥ ಕಷ್ಟ ಬಂದರೂ “ಬರ್‍ಲಿ ಬಿಡ್ರಿ. ಎದುರಿಸಲಿಕ್ಕೆ ಗಟ್ಟಿಯಾಗಿ ನಿಂದ್ರೂಣು” ಅನ್ನುತ್ತಿದ್ದಳು ಅಂಥಾದ್ದರಲ್ಲಿ.

“ಯಾಕ ಲಕ್ಷ್ಮೀ, ಎನಾಗ್ಯದ ದೇವರು, ಪರೀಕ್ಷಾ ಅನ್ನು ಮಾತಾಡ್ತೀ ಎನಾತು?”

ಹೇಳಲೋ? ಬೇಡವೋ? ಎನ್ನುವ ತೊಳಲಾಟ. ಹೇಳದಿದ್ದರೇ ಹೇಗೆ? ಸಂಸಾರದ ವಿಷಯ.

“ದೇವರು ಪರೀಕ್ಷಾ ಮಾಡಿದ್ರ ಎಲ್ಲಾದಕ್ಕೂ ಗಟ್ಟಿಯಾಗಿ ನಿಂದ್ರೂಣು ಅಂತಿದ್ದೇಲ್ಲಾ. . .ಹೇಳು ಎನಂಥ ಪ್ರಸಂಗ ಬಂದದ”

ಉಸಿರು, ನಿಂತು ನಿಂತು ಬಂದಂತೆ ಒಂದೊಂದೇ ಶಬ್ದವನ್ನು ಹೇಳಿದಳು. "ಈ ಭೂಮಿ ಋಣ ಮುಗಿಸು. ಹಾದಿ ಬ್ಹಾಳ ದೂರಿಲ್ಲ ಅನ್ನೋ ಕಾಲಕ್ಕ ಮತ್ತೆ ಈ ಮನಿಗೆ ಇನ್ನೊಂದು ಜೀವ ಬರೂದಂದ್ರ?"

"ಇನ್ನೊಂದು ಜೀವ" ತಮ್ಮೊಳಗೆ ಮಾತನಾಡಿಕೊಳ್ಳುತ್ತ, ಈಕೆ ಮಾತಾಡೂ ಹಿಂದಿನ ಅರ್ಥ ಏನು? ಅವರ ಒಂದೊಂದೇ ಮಾತುಗಳನ್ನು ತಿರುವಿಹಾಕಿ ನೆನಸಿಕೊಂಡು ಅರ್ಥವಾದಂತೆಲ್ಲ ಒಂದು ಗಳಿಗೆ ಏನೂ ಮಾತನಾಡಲಿಲ್ಲ ನರಸಪ್ಪಯ್ಯ, ಎದುರಿನ ಅಂಗಳದಲ್ಲಿ ಬಿದ್ದ ಬಿಸಿಲನ್ನೇ ನೋಡುತ್ತಾ ಕೂತವರು ಮೃದುವಾಗಿ ಹೇಳಿದರು.

"ಇದು ದೇವರ ಪರೀಕ್ಷಾ ಅಲ್ಲ ಲಕ್ಷ್ಮೀ. ಆ ದೇವರು ಯಾವದೋ ಒಂದು ಕಾರಣಕ್ಕ ಈ ಜೀವಾನ ನಮ್ಮ ಮನಿಗೆ ಕಳಸ್ತಿರಬೇಕು. ಅವನ ಇಚ್ಛಾ ಇಲ್ಲದ ಒಂದು ಹುಲ್ಲುಕಡ್ಡಿ ಸುದ್ದೆ ಅಲಗಾಡಂಗಿಲ್ಲಂತ. ಅಂಥಾದ್ದೊ ಒಂದು ಜೀವದ ಸೃಷ್ಟಿಯಾಗಬೇಕೆಂದ್ರ ಯಾವದೋ ಒಂದು ಕಾರಣ ಇರ್ಬೇಕು ಅದು ಏನಂತ ಅಂವಗೆ ಗೊತ್ತು ಇಲ್ಲಾದ್ರ ಇಷ್ಟು ವರ್ಷಬಿಟ್ಟು ಈ ವಯಸ್ಸಿನ್ನಾಗ, ಒಂದು ಹೊಸಾ ಜೀವ ಸೃಷ್ಟಿಯಾಗ್ತದಂದ್ರ. . .ಆ ಸೃಷ್ಟಿ ಹಿಂದ ಅಂವಂದು ಏನೋ ತರ್ಕ ಇರ್ಬೇಕು. ಅವನ ಚಿತ್ತಕ್ಕ ಏನ ಬಂದದೋ ಯಾರಿಗ್ಗೊತ್ತು"

ಹೆಂಡತಿ ಮಾತನಾಡಲಿಲ್ಲ. ಅವಳ ನಿಟ್ಟುಸುರು ಮಾತ್ರ ಪಡಸಾಲೆ ತುಂಬ ಹರಡಿ ನಿಂತಿತ್ತು. ಅಂಗಳದಲ್ಲಿ ಬಿಸಿಲು ನೆರಳಿನ ಆಟ ನಡೆದೇ ಇತ್ತು. ನಿಲ್ಲಿಸಿದ ಮಾತನ್ನು ಮತ್ತೆ ಮುಂದುವರೆಸಿದರು ಗಂಡ.

"ಲಕ್ಷ್ಮಿ, ಇಷ್ಟು ವರ್ಷಾತು. ಅಂವಾ ಏನು ಕೊಡ್ತಾನೋ ಅದಕ್ಕೆ ಕೈ ಒಡ್ಡಿಗೋತ ತಗೋಂಡಿವಿ. ಈಗೂ ಅಂವಾ ಕೊಡುದನ್ನು ಕೈಒಡ್ಡಿ ತಗೋಳ್ಳುಣು. ಕಾಖಂಡಕಿಯೊಳಗ ಇದ್ದಾಗ ನೀ ಯಾವಾಗ್ಲೂ ಅಂತೀದ್ದಿ. ರಾಘು ಒಬ್ನ ಮಗಾ ಅದಾ. ಒಬ್ಬ ಮಗಾ ಮಗಾ ಅಲ್ಲ ಒಂದು ಕಣ್ಣು ಕಣ್ಣಲ್ಲ ಅಂತಾ."

"ಖರೇ ಆವಾಗ ಹಂಗ ಅನಸೂ ವಯಸ್ಸಿತ್ತು ಅನಸೂದು ಸಹಜೀಕ ಇತ್ತು. ಅದಕೂ ಒಂದು ಕಾಲ ಇರ್ತದ"

"ಹುಚ್ಚಿ, ಈಗ್ಯಾಕ ಹಿಂಗ ನಿವೀಣ್ಯಾ ಆಗ್ತಿ. . ದೇವರ ಲೆಕ್ಕದಾಗ, ಯಾವದು ಕಾಲ, ಯಾವದು ಅಕಾಲ. ಅದೆಲ್ಲ ಅಂವಗ ಗೊತ್ತು. ಅಷ್ಟಕ್ಕೂ ಆ ಜೀವಕ್ಕೆ. ಈ ಭೂಮಿ ಋಣಾ. ಯಾವಾಗ ಶುರು ಆಗ್ಬೇಕಂತ ಇರ್ತದೋ ಆವಾಗ ಆಗ್ತದ. ನಮ್ಮ ಕೈಯಾಗ ಏನದ ಹೇಳು; ಹೋಗು ನಿಶ್ಚಿಂತತೆಯಿಂದ ಎಲ್ಲ ಭಗವಂತ ಮ್ಯಾಲೆ ಹಾಕಿ ಇರೂಣಂತ. ಸ್ವಲ್ಪ ಹೊತ್ತು ಮಲಗಿ ಏಳು. ಮನಸು ಶಾಂತ ಆಗ್ತದ ಅಂವಾ ಮಾಡಿದ್ದನ್ನ ಯಾಕ ಹಿಂಗಾತು ಅಂತ ಕೇಳೂ ಅಧಿಕಾರ ನಮಗಿಲ್ಲ. ಅಲ್ಲ? ಹೋಗು ಸ್ವಲ್ಪ ಅಡ್ಡಾಗೆದ್ದು ನಾನೂ ನಾರಾಯಣ ದೇವರ ಗುಡಿಗೆ ಹೋಗಿ ಬರ್ತೀನಿ" ಎಂದು. ಎದ್ದು ನರಸಪ್ಪಯ್ಯ ಪಡಸಾಲೆಯಲ್ಲೆ ಚಾಪೆ ಹಾಸಿಕೊಂಡು ಅಡ್ಡಾದರು.

ಗಂಡನ ವೇದಾಂತದ ಮಾತು ತತ್ವ. ಅವಳಿಗೆ ಅರ್ಥವಾದರೂ ಮನಸ್ಸು ಯಾವ



ತರ್ಕಕ್ಕೂ ಸಿಗದೆ ಲಕ್ಷ್ಮಿ ಬಾಯಿಗೆ ಯಾಕೋ ಹೈರಾಣವಾದರಂತೆ ಅನಿಸಿ, ಮೊಳಕೈಯನ್ನು ದಿಂಬಾಗಿಟ್ಟುಕೊಂಡು ಅಲ್ಲಿಯೇ ಒರಗಿ ಕಣ್ಮುಚ್ಚಿದಳು.

ಮಧ್ಯಾನ್ಹ ಸಂಜೆ ಸರಿದು ನಿಧಾನವಾಗಿ ಕತ್ತಲಾಗುತ್ತಿತ್ತು. ಓಣಿಯ ಜನ ಸಂಜೆಯಾದರೇ ಕೊಟ್ಟಪ್ಪನ ಗುಡಿಗೆ ಹೋಗುವುದುಂಟು. ಪುರಾಣ ಪ್ರವಚನ ಎಂದು ಹೋಗುವ ಜನ. ಕಿಲ್ಲೇಯಲ್ಲಿ ರಸ್ತೆಯಲ್ಲಿ ಹೋಗುವವರು ಮಾತು. ಒಳಗೆ ಏನೋ ಧೇನಿಸುತ್ತಾ ಕೂತಿದ್ದರೂ ಕೇಳಿಸುತ್ತಲೇ ಇವೆ. ಮನಸ್ಸು ಯಾವದೇ ಕ್ಷೋಭೆಗೆ ಒಳಗಾದರೂ ದಿನಚರಿ ನಿಲ್ಲುವಂತಿರಲಿಲ್ಲ.

ನರಸಪ್ಪಯ್ಯ ಸಂಜೆಯ ಸಂಧ್ಯಾವಂದನೆ ಮುಗಿಸಿ ರಾತ್ರಿಯ ಫಲಾಹಾರ ಮಾಡಿ ನಡುಮನೆಯಲ್ಲೇ ಚಾಪೆ ಹಾಸಿಕೊಂಡು, ನಾರಾಯಣ ಗೋವಿಂದ, ನಿನ್ನ ಇಚ್ಛಾನಪಾ" ಎಂದು ಮಲಗಿದರು. ಎದುರು ಗೋಡೆಯ ಬದಿ ಚಾಪೆ ಹಾಸಿಕೊಂಡು ಹೆಂಡತಿ ಕೂಡ ಮಲಗಿದ್ದಾಳೆ. ನೋಡಿದರೆ ನಿದ್ರೆ ಹತ್ತಿದಯೆಲ್ಲ. ನಡುಮನೆಯ ಬೆಳಕಿಂಡಿಯಿಂದ ಬಂದ ಬೆಳದಿಂಗಳ ಬೆಳಕು ನೆಲದ ತುಂಬೆಲ್ಲ ಹರಡಿ ಯಾರದೋ ಸ್ವಾಗತಕ್ಕೆ ಸಿದ್ಧಾದಂತಿದೆ. ಅದರಾಚೆ ಕತ್ತಲಿನಂತೆ ಅವಳ ಮನಸ್ಸು ಮಾತ್ರ ಕಂಗೆಟ್ಟಿದೆ ಎನಿಸಿತು.

ಮಧ್ಯಾನ್ಹ ತಾನು ಹೇಳಿದ್ದೆ ಒಂದು ತರ್ಕದ ಮಾತು. "ದೇವರ ನಿಯಮವನ್ನು ನಾವು ಪ್ರಶ್ನಿಸುವಂತಿಲ್ಲ ಲಕ್ಷ್ಮೀ" ಎಂದು ಅದರ ಹಿಂದೆ ಯಾವದೋ ತತ್ವ ಕೂಡ ಅಡಗಿದೆ ಎಂದಿದ್ದೆ. ಸಾಧ್ವಿ ಅವಳು. ಅರ್ಥಮಾಡಿಕೊಂಡಿರಬಹುದು. ಈ ಸಂಸಾರಕ್ಕೆ ಬಂದ ಮೇಲೆ ತನ್ನ ಸತಿಧರ್ಮವನ್ನು ಚಾಚೂ ತಪ್ಪದಂತೆ ನಡೆದುಕೊಂಡು ಬಂದವಳು. ಕಾಖಂಡಕಿಯಲ್ಲಿ ಕೆಲವು ದಿನ ಉಪವಾಸ ವನವಾಸವೆಂದು ಕಳೆದದ್ದುಂಟು.

"ದೇವರು ನಮಗ ಎಷ್ಟು ಕೊಟ್ಟಾನ ಅದಕ್ಕಷ್ಟೂ ಬದ್ಧರಾಗ್ಬೇಕು" ಎಂದು ನೀರು ಕುಡಿದು ಮಲಗಿದ ದಿನಗಳಿದ್ದವು.

ಆದರೆ ಗೋವಿಂದನ ಮಾತಿನಂತೆ ಬದುಕನ್ನರಸಿ ಬಾಗಲಕೋಟೆಗೆ ಬಂದದ್ದಂತೂ, ನಿಜ ಆದರೆ ಅದರ ಹಿಂದೆ ಬದುಕಿಗೆ ಮಾತ್ರ ಇಲ್ಲ ಬದುಕುವುದಕ್ಕಾಗಿ ಎಂಬ ಸೀಮೀತ ಮಾತ್ರವಿರಲಿಲ್ಲ. ಇದು ದೊಡ್ಡ ಊರು, ಅದಕ್ಕಿಂತ ಜಾಸ್ತಿ, ತಮ್ಮ ಪಾಂಡಿತ್ಯಕ್ಕೆ, ರಾಘೂನ ವೇದಾಧ್ಯಯನಕ್ಕೆ ದೊಡ್ಡ ದೊಡ್ಡ ಪಂಡಿತರ ಸಹವಾಸಕ್ಕಾಗಿ ಹಂಬಲಿಸಿ ಬಂದದ್ದುಂಟು. ಇದು ಕೂಡ ಭಗವಂತನ ಪ್ರೇರಣೆ. ಅವನೇ ತೋರಿದ ಹಾದಿ ಎಂದು ಬಂದದ್ದು ಖರೆ. ಇಲ್ಲೇ ಕಿಲ್ಲೇಯಲ್ಲಿ ಮನೆಮಾಡಿ, ಇಲ್ಲಿಯ ನೆಲಕ್ಕೆ, ಜಲಕ್ಕೆ, ಜನಕ್ಕೆ ಹೊಂದಿಕೊಂಡುಬಿಟ್ಟೆವು. ನದಿಯಂಚಿನಲ್ಲಿ ಮನೆ. ಓಣಿಯ ರಸ್ತೆಯಂಚಿನಲ್ಲಿ ಅಗಸೆ ದಾಟಿ ಕಾಲುಹಾದಿಯಲ್ಲಿ ಹೋದರೆ, ಪೂರ್ವಾಭಿಮುಖವಾಗಿ ಹರಿಯುವ ಪ್ರಭೆ ಜೀವನಕ್ಕಾಗಲೀ, ಧರ್ಮಾಚರಣೆಗಾಗಲೀ, ಮೋಸವಿಲ್ಲದಂತೆ ಜೀವನ ನಡೆಯುತ್ತಿತ್ತು.

ಆದರೆ ಇದೀಗ ಹೆಂಡತಿ ಹೇಳಿದ ಹೊಸಜೀವನದ ಸೃಷ್ಟಿಯ ಆಗಮನ ಅವಳು ಹೇಳಿದಂತೆ ಈ ವಯಸ್ಸಿನಲ್ಲಿ ಮತ್ತೆ ಯಾವ ಬಂಧನ ತಮ್ಮನ್ನು ಈ ಜಗತ್ತಿಗೆ ಎಳೆದು ತರುತ್ತದೆ. ಇಷ್ಟು ವರ್ಷ ಇಲ್ಲದ ಈ ಸೃಷ್ಟಿಯ ಆಗಮನದ ಹಿನ್ನೆಲೆ ಏನು? ನರಸಪ್ಪಯ್ಯ ನಿಟ್ಟುಸಿರು ಬಿಟ್ಟು ಕಣ್ಣು ತೆಗೆದು ನೋಡಿದರು. ತಿಂಗಳದ ಬೆಳ್ಳಿಯ ಬೆಳಕು ನಡುಮನೆಯ

ಬೆಳಕಿಂಡಿಯಿಂದ ಸೋತ್ತಲೆಲ್ಲ ಹರಡಿ ಬೆಳಕಿನ ಹೊಂಡವನ್ನೇ ತುಂಬಿ ನಿಂತಿದೆ. ಸೃಷ್ಟಿ, ಲಯ ಇದು ಜಗತ್ತಿನ ನಿಯಮ. ಇದನ್ನು ಮೀರಲು ಯಾರಿಗೂ ಸಾಧ್ಯವಿಲ್ಲ ಎನ್ನುವಂತೆ.

ದೇವರೇ ಯಾಕೆ ಈ ವಯಸ್ಸಿನಲ್ಲಿ ಮತ್ತೆ ಈ ಮೋಹ ಎಳೆತಕ್ಕೆ ನಮ್ಮನ್ನು ಸಿಕ್ಕಿಸುತ್ತಿ. ಎಲ್ಲ ಲೌಕಿಕ ವಿಚಾರಗಳನ್ನು ಮೀರಿ ನಿಂತು ನಿನ್ನದೇ ಧ್ಯಾನದಲ್ಲಿ ಅನಂತ ವಿರಕ್ತಿ ಮೂಡಿಸುವ ಕಾಲವಿದು. ಅಂಥದರಲ್ಲಿ ಮತ್ತೊಂದು ಎಳೆಜೀವ ಈ ಮನೆಗೆ ಬಂದು ಅದರ ಬಾಲ್ಯದ, ಬೆಳೆಸುವುದು, ಭವಿಷ್ಯ?

ಯಾಕೋ ಮೈತುಂಬ ಬೆವರಿ ಸೆಖೆಯಾದಂತೆನಿಸಿ ನರಸಪ್ಪಯ್ಯ ಎದ್ದು ಕೂತು, ಪಂಚೆಯಿಂದ ಗಾಳಿ ಹಾಕಿಕೊಂಡರು. ಮೇಲೆ ಬೆಳಕಿಂಡಿಯಿಂದ ಬಂದ ಬೆಳದಿಂಗಳ ಬೆಳಕಿನಲ್ಲಿ ಹೆಂಡತಿಯ ಮುಖ ಸ್ಪಷ್ಟವಾಗಿ ಕಾಣುತ್ತಿದೆ. ನಿದ್ದೆಯಲ್ಲೂ ಅವಳ ಮುಖದ ಮೇಲೆ ಚಿಂತೆಯ ನೋವಿನ ಗೆರೆಗಳು ಸ್ಪಷ್ಟವಾಗಿ ಕಾಣತ್ತಿವೆ. ಸಂದರ್ಭವನ್ನು ಹ್ಯಾಗೆ ಎದುರಿಸಲಿ ಎನ್ನುವಂತೆ.

ನರಸಪ್ಪಯ್ಯ ನೋಡುತ್ತಲೇ ಇದ್ದವರು ಒಂದು ಗಳಿಗೆ ದಿಗ್ಭ್ರಮೆಗೊಂಡರು. ಏನಿದು? ಇಡಿ ಬೆಳದಿಂಗಳೇ ಬೆಳಕಾಗಿ ಎಲ್ಲಿಂದಲೋ ನಡೆದು ಬಂದಂತೆ. ಬೆಳಕಿನ ಉಂಡೆಯಾಗಿ ಮುಗ್ಧವಾಗಿ ಮಲಗಿದ್ದ ಹೆಂಡತಿಯ ಮಡಿಲು ಸೇರಿದಂತೆ ಯಾವುದೋ ಒಂದು ಬೆಳಕಿನ ಪ್ರಭಾವಲಯ ಅವಳನ್ನು ಸುತ್ತುವರಿದಂತೆ.

ಭಗವಂತಾ ! ಈಗ ನಿಜವಾಗಿಯೂ ತಾನು ಬೆವರುತ್ತಿದ್ದೇನೆ. ಕೈಕಾಲು ಅಸ್ಥಿರವಾದಂತೆ ನಡಗುತ್ತಿದ್ದೇನೆ ಎನಿಸಿತು. ಮತ್ತೆ ಒಂದು ಗಳಿಗೆಯಲ್ಲಿ ಅದೆಲ್ಲ ಮಾಯವಾಗಿ ಬರೀ ತಾನು ಹೆಂಡತಿ ಬೆಳದಿಂಗಳು ಅಷ್ಟೆ. ಹಾಸಿಗೆಯಲ್ಲಿ ಮಲಗಿದರೂ ಅದೇ ಭಾವ. ಅದೇ ದೃಶ್ಯ ಮತ್ತೆ ಮತ್ತೆ ಕಣ್ಮುಂದೆ ಬರುತ್ತಿದೆ. ಇದು ಕನಸೋ ಇಲ್ಲಾ ಭ್ರಮೆಯೋ? ಇಲ್ಲಾ ಯಾವುದಾದರೂ ಭವಿಷ್ಯದ ಸೂಚನೆಯೋ ದೇವರೇ ! ಏನಿದು ಯಾವುದದು ನಡೆದುಬಂದ ಬೆಳಕು. ಅದು ಹೆಂಡತಿಯ ಮಡಿಲನ್ನು ಸೇರಿ ಈ ಮನೆಯ ಭವಿಷ್ಯದ ಬೆಳಕಿನ ಭಂಡಾರವಾಗಲಿದೆಯೇ?

ಮಿಂಚಿನಂತೆ ಒಂದು ಭಾವ ತಟ್ಟೆಬ್ಬಿಸಿತು ಅವರನ್ನು. ಹಾಗಾದರೆ ದೇವರ ಸೃಷ್ಟಿಯ ಹಿನ್ನೆಲೆ ಸಾಧಾರಣವಲ್ಲ. ಹರಿಚಿತ್ತಕ್ಕೆ ಬಂದದ್ದು ಹೆಂಡತಿಯ ಮಡಿಲಲ್ಲಿ ಸೇರಿದ ಈ ಬೆಳಕು. ಜಗತ್ತನ್ನು ಬೆಳಗುವ ಚೈತನ್ಯವಾಗಬಹುದು. ನಾಲ್ಕು ಜನಕ್ಕೆ ಬೆಳಕನ್ನೀಯುವ ನಂದಾದೀಪವಾಗಬಹುದು.

ಸೃಷ್ಟಿಯ ಅನಂತತೆಯನ್ನು ಪ್ರಶ್ನೆ ಮಾಡುವ ನಾವೇಷ್ಟೂ ಸಣ್ಣವರು. ಎಲ್ಲ ಜೀವ ಚೈತನ್ಯಗಳ ಹಿಂದೆ ಪರಮಾತ್ಮನ ಚಾಲನೆಯಿದೆ. ಎಲ್ಲದಕ್ಕೂ ಸೂತ್ರಧಾರ ಅವನು. ಅವನು ಆಡಿಸುವ ಪಾತ್ರಧಾರಿಗಳು ಮಾತ್ರ ನಾವು ಎಂದು ಯಾಕೆ ತಿಳಿಯುವುದಿಲ್ಲ. ನಿರ್ಜೀವ ವಸ್ತುವಿನಲ್ಲೂ ಚಲನೆಯ ಚೈತನ್ಯ ತುಂಬಬೇಕಾದರೆ ಅವನ ಕರುಣೆ ಬೇಕು. ಅವನಿಲ್ಲದೆ ನಡೆಯಲಾರದ ಜಗತ್ತಿನಲ್ಲಿ ಒಂದು ಜೀವ ಸೃಷ್ಟಿಯ ಚಲನೆ ಕೂಡ ಅವನ ಇಚ್ಛೆಗೆ ಬಂದದ್ದು.

ಭಗವಂತ ನಿನ್ನಾಟ ನಮ್ಮಂಥ ಮೂಢರಿಗೇನು ತಿಳಿದೀತು ಎಲ್ಲ ನಿನ್ನ ಕರುಣೆಗೆ



ಸೇರಿದ್ದು ತಂದೆ ಎಂದು ನರಸಪ್ಪಯ್ಯ ಮುಖದ ಬೆವರನ್ನೊರಿಸಿಕೊಂಡು ಮತ್ತೆ ಕಣ್ಮುಚ್ಚಿ ದೇವರನ್ನೇ ಧ್ಯಾನಿಸುತ್ತ ಕುಳಿತಿರು.

ಎಂದಿನಂತೆ ಬೆಳಗಾಯಿತು. ದಿನದ ಆನ್ಹೈಕಗಳನ್ನೆಲ್ಲಾ ಮುಗಿಸಿ, ನರಸಪ್ಪಯ್ಯ ಭಾಗವತ ಸಪ್ತಾಹವನ್ನು ದೇಸಾಯರ ಮನೆಯಲ್ಲಿ ಹೇಳಿ ಮನೆಗೆ ಬರುವುದರಲ್ಲಿ ಹೆಂಡತಿ ಸ್ನಾನ ಮುಗಿಸಿ, ದೇವರ ಪೂಜೆಗೆ ತಯಾರಿಮಾಡಿ. ಅಡಿಗೆಗೆಂದು ಒಲೆ ಹೊತ್ತಿಸುತ್ತಿದ್ದಾಳೆ. ಮಗ ಗುರುಕುಲಕ್ಕೆ ಹೋಗಿರಬಹುದು. ನರಸಪ್ಪಯ್ಯ ಸ್ನಾನ ಮುಗಿಸಿ ಪೂಜೆಗೆ ಕುಳಿತರು.

ವಾಯುಸ್ತುತಿ ಅನ್ನುತ್ತಾ ಪ್ರಾಣದೇವರ ಮೂರ್ತಿಗೆ ಅಭಿಷೇಕ ಮಾಡುತ್ತಿದ್ದರೆ ಮನಸ್ಸು ಎಷ್ಟು ಪ್ರಫುಲ್ಲವೆನಿಸುತ್ತಿದೆ. ದಿನವೂ ಅಷ್ಟೆ, ಪೂಜೆಗೆ ಕುಳಿತರೆ ಮನಸ್ಸಿನ ಎಲ್ಲ ಅಂತರಂಗದ ಕದಗಳು ತೆರೆದು ಹರಿಯನ್ನು ಅಲ್ಲಿ ಪ್ರತಿಷ್ಠಾಪಿಸುವಂತೆ, ವಾಯುಸ್ತುತಿ ಅನ್ನುತ್ತಿದ್ದರೇ ವಾಯುದೇವರ ಮೂರ್ತಿಯಲ್ಲಿ ಇವತ್ತು ಏನೋ ಅಭೂತಪೂರ್ವ ದೃಶ್ಯ ಕಾಣಿಸುತ್ತಿದೆ ಏನೋ ಎನಿಸುತ್ತಿದೆ. ಎಲ್ಲ ಮೂರ್ತಿಗಳಲ್ಲಿ ಜೀವ ತುಂಬಿದಂತೆ, ತಮ್ಮನ್ನು ಹರಿಸಿದಂತೆ, ನೀನು ಉದ್ಧಾರವಾಗುವ ದಿನಗಳು ಬಂದಿವೆ. ನರಸಪ್ಪಯ್ಯ ಎನ್ನುವಂತೆ ಇದೆಲ್ಲ ತನ್ನ ಮನಸ್ಸಿನ ಭಾವನೆಗಳ ರೂಪ, ನಿನ್ನೆ ತಾನು ಕಂಡ ದೃಶ್ಯ. ಎಲ್ಲಿಯದೋ ದೇವರ ವಾಣಿ ಕೇಳಿದಂತೆ "ಕಾಳಜಿ ಮಾಡಬ್ಯಾಡಿ ನಾ ಇದೀನಿ" ಎನ್ನುವಂತೆ ಇದು ಯಾವ ಯಾರ ಉದ್ಧಾರದ ಸಂಕೇತ.

ಹೆಂಡತಿ ವೈಶ್ವ ದೇವಕ್ಕಾಗಿ ಅನ್ನದ ಪಾತೇಲಿ ತಂದಿಟ್ಟಳು ಅಗಲೂ ಅವಳ ಮುಖ ಯಾಕೋ ಏನನ್ನು ಹೇಳುವ ದೈನಾಸ ಭಾವದಿಂದ ತುಂಬಿದೆ. ದೇವರ ಕಟ್ಟೆಯ ತುದಿಗೆ ವೈಶ್ವದೇವಕ್ಕಾಗಿ ಹಚ್ಚಿಟ್ಟ ತಾಮ್ರದ ಒಲೆ ಮಂದವಾಗಿ ದೈದೀಪ್ಯಮಾನವಾಗಿ ಉರಿಯುತ್ತಿರುವ ಕೆಂಡದಲ್ಲೂ ಎಂಥದೋ ಒಂದು ಪ್ರಭೆಯ ಬೆಳಕು, ಆ ಬೆಳಕು ಗೋಡೆಗೆ ಒರಗಿ ನಿಂತ ಅವಳ ಮುಖದ ಮೇಲೆ ಬಿದ್ದು ಎಂಥದೋ ಅಭೂತಪೂರ್ವ ತೇಜಸ್ಸು ಹೊಳೆಯುತ್ತಿದೆ.

ವೈಶ್ವದೇವಮಂತ್ರ ಹೇಳುತ್ತಿದ್ದಾರೆ. ಎಷ್ಟು ಸ್ಫುಟವಾಗಿ ನರಸಪ್ಪಯ್ಯನವರ ಕಣ್ಣುಗಳು ಮಂದವಾಗಿ ಉರಿಯುವ ಒಲೆಯನ್ನು ನೋಡುತ್ತಿವೆ. ಒಂದೊಂದೆ ಬೆರಳಿನ ತುದಿಯಲ್ಲಿ ಅಗ್ನಿಗೆ ಅನ್ನ ಹಾಕುತ್ತಿದ್ದಾರೆ. ಅದರ ಸುವಾಸನೆಯ ಹೊಗೆ ಎಲ್ಲಕಡೆ ಹರಡುತ್ತಿದೆ.

ಎಷ್ಟು ದಿವ್ಯವಾಗಿದೆ ಈ ಸುವಾಸನೆ

ಎಷ್ಟು ಹಿತವಾಗಿ ಆ ಸುವಾಸನೆಯನ್ನು ಹೆಂಡತಿ ಅನುಭವಿಸುತ್ತಿದ್ದಾಳೆ. ನಿನ್ನೆಯಿಂದ ಎಂಥದೋ ಅಲೌಕಿಕ ತೇಜಸ್ಸು ಅವಳ ಮುಖದಲ್ಲಿದೆ. ಆದರೂ ಚಿಂತೆಯ ಗೆರೆಗಳು ಮಾತ್ರ ಗಳಿಗೆಗೊಂದು ಬಾರಿ ಮೂಡಿ ನಿಟ್ಟುಸಿರು ಬಿಡುತ್ತಿದ್ದಾಳೆ. ಈಗ ಬಂದ ಸಂದರ್ಭವನ್ನು ಹ್ಯಾಗೆ ಎದುರಿಸಲಿ ಎನ್ನುವಂತೆ.

ಪೂಜೆ ಮುಗಿಸಿ ದೇವರನ್ನು ಭುಜಂಗಿಸುತ್ತ ತಮ್ಮೊಳಗೆ ಸಣ್ಣ ಧ್ವನಿಯಿಂದ ಹಾಡಿಕೊಳ್ಳುತ್ತಿದ್ದಾರೆ ಅವರು "ಚಿಂತ್ಯಾಕ ಮಾಡ್ತೀದಿ ಚಿನ್ಮಯನಿದ್ದಾನೆ. ಚಿಂತಾರತ್ನನೆಂಬ ಅನಂತನಿದ್ದಾನೆ" ಹಾಡುತ್ತ ಹೆಂಡತಿಯ ಮುಖ ನೋಡಿದರೇ ಅದೇ ವ್ಯಾಕುಲತೆ ತುಂಬಿದೆ.

“ಹಾಡು ಕೇಳಿದೀಲ್ಲೊ ಲಕ್ಷ್ಮೀ . . ಅನಂತನೆಂಬ ಬ್ರಹ್ಮಾಂಡ ಅವನು ನಮ್ಮನ್ನೆಲ್ಲ ಅವನ ಕಾಯಾಂವಾ. ಅವನ ಸಂಕಲ್ಪ ಎನssದ ಅದ ಆಗ್ತದ “ನಿನ್ನ ಮುಖನೋಡಿದ್ರ ಇನ್ನೂ ಅದ ಚಿಂತಿಯೊಳಗ ಇದ್ದಿ ಕಾಣಸ್ತದ.

ಮಾತನಾಡಲಿಲ್ಲ ಹೆಂಡತಿ.

“ಚಿಂತಿ ಮಾಡಾವ್ರು, ನಾವು ಯಾರು ಹೇಳು? ಎಲ್ಲ ಭಗವಂತನ ಇಚ್ಛಾ ಅಲ್ಲ?

“ಹಂಗಂತ ಮನಸ್ಸಿಗೆ ಹ್ಯಾಂಗ ಸಮಾಧಾನ ಮಾಡ್ಕೋಳ್ಳುದು” “ಚಿಂತಿ ಅಸಮಾಧಾನ ಮಾಡ್ಕೊಳ್ಳುವಂಥ ಸಂದರ್ಭ ಅಲ್ಲ ಇದು. ಮನಸ್ಸಿಗೆ ಒಂತ್ಥರ ಆನಂದ ಅನಸ್ತದ. ಇಕಾ ತೀರ್ಥ ತಗೋ, ಒಂದು ಮಾತು ಹೇಳ್ತೀನಿ ಲಕ್ಷ್ಮೀ. ಅದನ್ನು ಗಟ್ಟಿಯಾಗಿ ಹಿಡದು ಎಲ್ಲ ಆ ಭಗವಂತ ಇಚ್ಛಾಕ ಬಿಟ್ಟು ನಿಶ್ಚಿಂತ ಇಂದ ಇರು. ತಗೋ ತೀರ್ಥ ಎನ್ನುತ್ತ, ಅಂಗೈಯೊಡ್ಡಿದ ಹೆಂಡತಿಯ ಕೈಗೆ ಪ್ರಥಮ ಕಾಯ ಸಿದ್ಧ್ಯರ್ಥಂ, ದ್ವಿತೀಯಂ ಧರ್ಮಸಾಧನಂ ತೃತೀಯಂ ಮೋಕ್ಷಮಾಪ್ನೋತಿ ಎವಂ ತಿರ್ಥಂ ತ್ರಿದಾತಿಬೇತ್” ಎಂದು ಹೇಳುತ್ತ ತೀರ್ಥ ಹೂವು ಕೊಟ್ರು ನಸರಪ್ಪಯ್ಯ ನಿಧಾನವಾಗಿ ಹೇಳಿದರು.

“ಲಕ್ಷ್ಮೀ, ಇದು ಯಾಕ ಹಿಂಗಾತು ಅಂತ ನೀ ಚಿಂತಿಮಾಡ್ತಿ? ಆದ್ರ. ಭಗವಂತ ಈ ಮನಿಗೆ, ಜಗತ್ತಿಗೆ, ಬೆಳಕು ಕೊಡುವಂಥಾ ಜೀವ ಚೈತನ್ಯಾನ ನಿನ್ನ ಗರ್ಭದೊಳಗೆ ಇಟ್ಟಾನ. ಅದು ಸಾಮಾನ್ಯ ಜೀವ ಅಲ್ಲಂತ ಅಂವಾ ಸೂಚನಾನೂ ಕೊಟ್ಟಾನ. ನಿಂದು ಪುಣ್ಯದ ಗರ್ಭ ಲಕ್ಷ್ಮೀ . .ಯಾವ ಶ್ರೇಷ್ಠ ಜೀವ ನಿನ್ನಿಂದ ಈ ಭೂಮಿಗೆ ಬರ್ತದೊ? ಪುಣ್ಯ ಪುರುಷನೇ ಹುಟ್ಟಿ ಬರ್ತಿರಬೇಕು, ಹಂಗಂತ ನನ್ನ ಅಂತರಾತ್ಮ ಹೇಳ್ತದ” ಎಂದು ನರಸಪ್ಪಯ್ಯ. ಹಿಂದಿನ ದಿನ ತಾವು ಕಂಡ ಒಂದು ಅಗೋಚರ ಬೆಳಕಿನ ಬಗ್ಗೆ. ಅದು ಹೆಂಡತಿಯ ಮಡಲು ಸೇರಿದ ಬಗೆ. ತಾವು ದಿಗ್ಭ್ರಮೆಗೊಂಡು ಕುಳಿತ ಬಗ್ಗೆ ಹೇಳುತ್ತ “ಇನ್ನ ನೀನು ನಿಶ್ಚಿಂತಿಯಿಂದ ಇರು. ನಡಿ, ರಾಘು ಬಂದಿದ್ರ ಊಟಕ್ಕೆ ಎಲಿ ಹಾಕು. ನಮಗೂ ಬಡಿಸಿ ನೀನು ಕೂಡು. ನೀ ಇನ್ನ ಹೆಚ್ಚು ಮನಸಿಗೆ ತ್ರಾಸ ಆಗಲಿ ದೇಹಕ್ಕೆ ಆಯಾಸ ಅಗಲಿ ಮಾಡ್ಕೋಬ್ಯಾಡಾ. ಆದಷ್ಟು ಮನಸು ಶಾಂತ ಇಟಗೊ, ಸಂತೋಷಗೆ ಇಟಗೋ ದಿನಾ ಸಂಜೀಕ ಒಂತಾಸು ಭಾಗವತ ಓತ್ತೀನಿ. ಕೃಷ್ಣನ ಬಾಲಲೀಲಾ ಓತ್ತೀನಿ, ಕೇಳು ಸದಾ ಭಗವಂತನ ನಾಮಸ್ಮರಣೆ ಮಾಡು. ಅಂವಾ ಎಲ್ಲ ಹಾದಿ ತೋರಸ್ತಾನ ಎಂದು ದೇವರ ಕಟ್ಟೆ ಇಳಿದು ಅಡಿಗೆ ಮನೆಗೆ ಬಂದರು.

ಗಂಡ ಹೇಳಿದ ಮಾತನ್ನೇ ಎಷ್ಟೋ ಹೊತ್ತು ಧೇನಿಸುತ್ತಾ ಕುಳಿತಿದ್ದಳು ಆಕೆ, ಖರೇ. ಭಗವಂತನ ಸೃಷ್ಟಿ ಕಾರ್ಯಾನ ಪ್ರಶ್ನೆ ಮಾಡು ಹಕ್ಕು ನಮಗೆಲ್ಲಿ ಅದ? ಅದು ಅವನ ಚಿತ್ತ ಗಂಡ ಹೇಳಿದ್ಹಂಗೆ, ಯಾವುದೋ ಒಂದು ಶ್ರೇಷ್ಠ ಕಾರ್ಯಕ್ಕೆ ಈ ಜೀವ ಹುಟ್ಟಿ ಬರಬಹುದು. ತಾ ಇದಕ ನಿಮಿತ್ತ ಮಾತ್ರ ಎಲ್ಲಾನೂ ಕೈ ಹಿಡದು ನಡಸಾಂವಾ ಪರಮಾತ್ಮ. ಅವನ ಇಚ್ಛಾ ಇರದಿದ್ರ ಒಂದು ಹುಲ್ಲುಕಡ್ಡಿ ಸುದೆ ಅಲುಗಾಡಂಗಿಲ್ಲಂತ. ಇಲ್ಲಾದ್ರ ಇಷ್ಟು ವರ್ಷದ ಮ್ಯಾಲೆ ಹಿಂಗ್ಯಾಕಾತು? ಅದನ್ನ ಕೇಳು ಅಧಿಕಾರ ನಮಗೆಲ್ಲಿ ಅದು? ಅದು ಅವನ ಚಿತ್ತ ಎನ್ನುವ ಗಂಡನ ಮಾತು ಖರೆ. ಇದೆಲ್ಲ ತನಗೇನು ತಿಳೀದೀತು? ಹೆಣ್ಣು–ಹೆಂಗಸು ತಾನು ಸಂಸಾರಕ್ಕೆ ಹೆಗಲು ಕೊಟ್ಟು ನಡೆಯೋದೊಂದೆ ತನಗೆ ಗೊತ್ತು ವಯಸ್ಸಾಗಿ ಬಸರಾದದ್ದು ಸರಳಗ ಮೈ



ಇಳದ್ರ ಸಾಕು. ಗಂಡ ಹೇಳಿದ್ಹಂಗೆ ಭಲೋ ಧೇನಿಸಬೇಕು. ಪರಮಾತ್ಮನ ನಾಮಸ್ಮರಣೆ ಮಾಡ್ಬೇಕು. ಪುರಾಣ, ಪುಣ್ಯಕಥೆ ಕೃಷ್ಣನ ಬಾಲಲೀಲಾ ಕೇಳ್ಬೇಕು. ಇದು ಬಿಟ್ಟು ತನಗೇನು ಗೊತ್ತು” ಎನ್ನುತ್ತಾ ಲಕ್ಷ್ಮೀಬಾಯಿ ಗಂಡ ಮಗನಿಗೆ ಊಟ ಬಡಿಸಿ, ತಾನು ಊಟ ಮಾಡಿ ಅಲ್ಲೇ ಪಡಸಾಲೆಯಲ್ಲಿ ಚಾಪೆ ಹಾಸಿಕೊಂಡು ಅಡ್ಡಾದಳು.

ಒಂದರ ಮೇಲೊಂದು ಉರುಳಿದ ದಿನಗಳು. ತಿಂಗಳುಗಳು ಉರುಳುತ್ತಿದ್ದವು. ಇತ್ತೀಚೆಗೆ ಎದ್ದು ಅಡಿಗೆ ಮಾಡಲು ತನ್ನ ಕೈಲಿ ಆಗುತ್ತಿರಲಿಲ್ಲ. ಎದುರು ಮನೆ ಸೀತಕ್ಕ ಹಿರಿಯಕ್ಕನಂತೆ ನಿಂತು ತನ್ನ ಬೇಕು – ಬೇಡುಗಳನ್ನು ಕೇಳುತ್ತಿದ್ದರು. ಬಿಸಿ ಬಿಸಿ ಎನಾದರೂ ಮಾಡಿ ತಂದುಕೊಡುತ್ತಿದ್ದರು. ಈಗೀಗ ಹೊಟ್ಟೆಯಲ್ಲಿದ್ದ ಜೀವ ಅಲುಗಾಡಿದಂತಾಗುತ್ತಿತ್ತು. ಹಿಂದಿನ ಚಿಂತೆ ಮರೆತು, ಈಗ ಲಕ್ಷ್ಮೀಬಾಯಿಯ ಮನಸ್ಸು ಸದಾ ಪ್ರಸನ್ನವಾಗಿರುತ್ತಿತ್ತು. ಸದಾ ಭಗವಂತನನ್ನೇ ಚಿಂತಿಸುತ್ತಿತ್ತು. ನೋಡಿದರೆ ಅವನ ಮೂರುತಿಯನ್ನೇ ನೋಡಬೇಕು. ಹಾಡಿದರೇ ಅವನ ಕೀರ್ತನೆಯನ್ನೇ ಹಾಡಬೇಕು. ಕೇಳಿದರೆ ಅವನ ಹರಿಕಥೆಯನ್ನೇ ಶ್ರವಣ ಮಾಡಬೇಕು. ಮನಸ್ಸಿನ ಯಾವದೋ ಒಂದು ಬಿಂದುವಿನಲ್ಲಿ ಭಗವಂತ ಕೂತು ಸದಾ ತನ್ನನ್ನೇ ಧೇನಿಸುವಂತೆ ಮಾಡುತ್ತಿದ್ದಾನೆ. ಎಷ್ಟು ಉಲ್ಲಾಸವಾಗುತ್ತದೆ ಮನಸ್ಸು, ಅವನ ಧ್ಯಾನವನ್ನೇ ಮಾಡುತ್ತಿದ್ದರೇ ಇದ್ಯಾವ ಭವಿಷ್ಯದ ಅಧ್ಯಾಯದ ಪೀಠಿಕೆ ಇರಬಹುದು ಎನ್ನುವದು ಅವಳಿಗಾದರೊ ಎನು ತಿಳಿದೀತು?

ನಸುಕು ಹರಿದರೇ ಸಾಕು. ಎದ್ದು ದೇವರ ಮನೆ, ಅಡಿಗೆಮನೆ, ಪಡಸಾಲೆ, ಅಂಗಳ ಎಂದು ಎಲ್ಲ ಮನೆ ಕಸ ಉಡುಗಿ, ಬಾಗಿಲ ಮುಂದೆ ಥಳಿ, ರಂಗೋಲಿ, ಹಾಕಿ ದನದ ಕೊಟ್ಟಿಗೆ ಕಸ ಉಡಗಿ, ಸ್ವಚ್ಛಮಾಡಿ, ಬಟ್ಟೆಯ ಗಂಟು ಹಿಡಿದುಕೊಂಡು ನದಿಗೆ ಹೋದರೆ ಸಾಕು. ಅವಳ ಮನಸ್ಸು ನಿಸರ್ಗದಲ್ಲಿ ಲೀನವಾಗಿಬಿಡುತ್ತಿತ್ತು. ಎಂಥಹ ಆನಂದವಿದೆ ಈ ನಿಸರ್ಗದಲ್ಲಿ, ಹರಿಯುವ ನೀರಿನಲ್ಲಿ, ವಿಶಾಲವಾಗಿ ಹರಡಿ ನಿಂತ ಈ ಹಸಿರುಗುಡ್ಡದಲ್ಲಿ, ಬೀಸುವ ನದಿಯ ಮೇಲಿನ ತಂಗಾಳಿಯಲ್ಲಿ ಸ್ವಚ್ಛವಾಗಿ ನಿಂತ ಅನಂತ ಆಕಾಶದಲ್ಲಿ, ಹಾರಾಡುತ್ತ ಹೋಗುವ ಪಕ್ಷಿ ಸಂಕುಲದಲ್ಲಿ ಇದು ದೇವರ ಒಂದು ರೂಪವೆ ಇರಬೇಕು. ದೇವರೆ ಎನು ನಿನ್ನ ಸೃಷ್ಠಿ. ಅಗಾಧಲೀಲೆ ಎನಿಸುತ್ತಿತ್ತು. ಹುಚ್ಚೆ ತಾನು, ಈ ಜಗತ್ತಿನ ಕ್ರಿಯಾಶಕ್ತಿ, ನಿಸರ್ಗ, ಹಸಿರು ಎಂದು ತನಗೇನು ತಿಳಿದೀತು?” ಎಂದು ಬಟ್ಟೆ ಗಂಟು ಹೊತ್ತುಕೊಂಡು ಮನಗೆ ಬರುವದಿತ್ತು ಆಕೆ.

ಸದಾ ಗಂಡನಿಂದ ಭಾರತ – ಭಾಗವತ ಎಂದು ಹರಿಕಥೆ ಶ್ರವಣ ಮಾಡುವದಿತ್ತು. ಹರಿಕಥೆ ಕೇಳುತ್ತಾ ಕೇಳುತ್ತಾ ಭಾವತುಂಬಿ ಮನಸ್ಸು ತುಂಬಿ ಅವನನ್ನು ಕಾಣಬೇಕೆಂಬ ತಹ–ತಹಿಕೆಮನಸ್ಸಿನ ತುಂಬ ಆವರಿಸಿದಾಗಲೆಲ್ಲ ಆಕೆ ಗಂಡನಿಗೆ ಹೇಳುವದುಂಟು.

“ಯಾಕೋ ಇತ್ತಿತ್ತಲಾಗ ನಮ್ಮಪ್ಪ ಆ ತಿರುಪತಿ ವೇಂಕಪ್ಪನ ದರ್ಶನ ಮಾಡ್ಬೇಕಂತೆ, ಬ್ಹಾಳ ಇಚ್ಛಾ ಆಗ್ತದ. . ಆದ್ರ ಸಾಧ್ಯ ಅದ ಎನು?”

ನರಸಪ್ಪಯ್ಯ ಮೃದುವಾಗಿ ನಗುತ್ತಿದ್ದರು.

“ನಿನ್ನ ಇಚ್ಛಾ ಸಹಜೀಕ ಅದ ಲಕ್ಷ್ಮೀ. ಆದ್ರ ನೀ ತುಂಬಿದ ಬಸುರಿ, ಈ ಸ್ಥಿತಿಯೊಳಗೆ,

ನಮಗ ಹೋಗಲಿಕ್ಕೆ ಆಗ್ತದೇನು? ಅಂವಗ ಯಾವಾಗ ದರ್ಶನ ಕೊಡಬೇಕಂತ ಇಚ್ಛಾ ಬರ್ತಾದೋ ಆವಾಗ ಕೊಡ್ತಾನ ಬಿಡು”

“ಹೌದು ಖರೇ ಅದ. ಅಸಾಧ್ಯ ಆದದ್ದನ್ನ ಹ್ಯಾಂಗ ಸಾಧ್ಯ ಮಾಡ್ಲಿಕ್ಕೆ ಆಗ್ತದ ಗಂಡ ಹೇಳಿದ್ಹಂಗ ತುಂಬಿದ ಬಸುರಿ ಹೋಗಲಿಕ್ಕೆ ಸಾಧ್ಯ ಇಲ್ಲ. ಭಗವಂತ ನಿನಗೆ ಇಲ್ಲೆ ಇದ್ದಲ್ಲೆ ಕೈ ಮುಗಿಲೆನಪ್ಪಾ” ಎಂದು ಅನನ್ಯ ಭಕ್ತಿಯಿಂದ ಅವನ ನಾಮಸ್ಮರಣೆ ಮಾಡುತ್ತಿದ್ದಳು. ಮನಸ್ಸಿಗೆ ಸಂತೋಷವಾಗುವಂತೆ ದಾಸರ ಹಾಡುಗಳನ್ನು ಹಾಡಿಕೊಳ್ಳುತ್ತಿದ್ದಳು. ನರಸಪ್ಪಯ್ಯ ಯಾವಾಗಲೂ ಹೇಳುತ್ತಿದ್ದರು.

“ಲಕ್ಷ್ಮೀ ನಮ್ಮ ಮ್ಯಾಲೆ ದೇವರ ಕೃಪಾ ಅದ. ಅದಕ್ಕೆ ಈ ನೆಲಕ್ಕೆ ತಂದು ಬಿಟ್ಟ. ಈ ಭೂಮಿ ಋಣಾ ನಮ್ಮನ್ನ ಉದ್ಧಾರ ಮಾಡ್ಲಿಕೆ ತಂದು ಬಿಟ್ಟಿರಬೇಕು. ಇಲ್ಲಾದ್ರ ಎನಿತ್ತು ಹೇಳು? ಕಾಖಂಡಕಿಯೊಳಗೆ ಇದ್ದಾಗ ಎಂಥೆಂಥಾ ಪರಿಸ್ಥಿತಿ ಎದುರಿಸಿದ್ವಿ. ಜೀವನಂದ್ರ ಕೊಳ್ಳಿಗೆ ಕಟ್ಟಿದ ಹೆಬ್ಬಂಡಿ ಆಗಿತ್ತು. ಹೋರ್ಲಿಕ್ಕೆ ಆಗ್ತಿರಲಿಲ್ಲ. ಇಳಸು ತಾಕತ್ತು ಇರಲಿಲ್ಲ. ಮೊಗಲರ ದಾಳಿಗೆ ಅಲ್ಲಿ ಎಲ್ಲಾರ ಜೀವನಾನೇ ಅಲ್ಲೋಲ–ಕಲ್ಲೋಲ ಆಗುಹಂಗಿತ್ತು. ಗೋವಿಂದನ ಪುಣ್ಯ ಅವನ ಮಾತು ಕೇಳಿ ಇಲ್ಲಿ ಬಂಧ್ವಿ ಅಲ್ಲೆ ನಮ್ಮ ನೆಲದಾಗ ನಾವು ಹೆಜ್ಜೆಯೂರಿ ನಿಲ್ಲು ತಾಕತ್ತು ಇರಲಿಲ್ಲ. ವೈದಿಕ ವೃತ್ತಿ ಮಾಡಿ ಬದುಕು ನಮ್ಮಂಥವರ ಸ್ಥಿತಿ ಎನಾಗ್ಬೇಡ? ಎರಡು ಹೊತ್ತಿನ ಊಟಕ್ಕೂ ಗತಿ ಇರಲಿಲ್ಲ. ಊಟದ್ದು ಬಿಡು. ಆದ್ರ ನಾವು ನಂಬಿದ ಧರ್ಮ? ಧರ್ಮದ ಕುತಿಗ್ಗೆ ಬಂದದ ಅಂದ ಮ್ಯಾಲೆ ನಮ್ಮ ಕುತಗಿ ಎನುಳಿತ್ತಿತ್ತು. ದೇವರು ಹಾದಿ ತೋರಿಸಿದ ಈ ನೆಲ, ಘಟಪ್ರಭಾ, ಪಂಡಿತರ ಓಣಿ ಆರಿಸಿಕೊಂಡು ಬಂದ್ವಿ”

ಹೆಂಡತಿ ನಿಟ್ಟುಸಿರುಬಿಟ್ಟಳು. “ಹೌದು ನೀವನ್ನೋದು ಖರೇ. ಯಾವ ನಿಮಿತ್ತಕ್ಕ ದೇವರು ನಮ್ಮನ್ನಿಲ್ಲಿ ಕರ್ಕೊಂಡು ಬಂದ್ನೋ ಗೊತ್ತಿಲ್ಲ. ಹಳೇ ಬದುಕಿನ ಜೋಡಿ. ಹೊಸ ಜೀವನದ ನಂಟು ಸುರುವಾತು. ಅದು ಸುದ್ದೆ ಯಾವ ನಿಮಿತ್ತಕ್ಕ ತಿಳಿಲಿಲ್ಲ. ಅವನ ಆಟ ಕಂಡವರ್‍ಯಾರು. ಅಂವಾ ಕೊಟ್ಟದ್ದನ್ನೇ ಬೊಗಸೆ ಒಡ್ಡಿ ತಗೊಂಡೀವಿ’ ಎನ್ನುವ ಅವಳ ಮಾತುಗಳು ಕತ್ತಲಿನಲ್ಲಿಯೂ ಬೆಳಕಿನ ಸುರಂಗ ಕೊರೆದು ಬಂದಂತಿತ್ತು.

“ಮಹಿಪತಿ ದಾಸರಂಥ ದಾಸರೇ ಕಾಖಂಡಕಿ ಬಿಟ್ಟು ಕೃಷ್ಣಾ ದಂಡಿ ಸೇರಿದ್ರು. ಎಲ್ಲಾರ ಜೀವನಕ್ಕೂ ಒಂದು ಗುರಿ ಇರ್ತದೆ, ಗತಿ ಇರ್ತದ. ಒಂದು ಹಳ್ಳಕ್ಕ ಒಂದು ನದಿ ಗತಿ ಇದ್ಹಂಗೆ ಆ ಗತಿ ತಪ್ಪೀತಂದ್ರ ಬಾಳಿನ ಬಂಡೀನೂ ಅಲ್ಲೋಲ–ಕಲ್ಲೋಲ ಆಗ್ತದ. ಈಗ ನೋಡು, ಇಲ್ಲಿ ಬಂದ್ವಿ. ನದಿ ಅಂಚಿಗೆ ಒಂದು ಮನಿ ಅಂತ ಆತು. ಓಣ್ಯಾಗಿನ ಆಚಾರ್ಯ, ಸತ್ಪಾತ್ರರು, ಪಂಡಿತರು ರಾಮಾಚಾರ್ಯರು, ಶೀನಪ್ಪಚಾರ್ಯರಯ ಅಂದ್ರ ಜ್ಞಾನದ ಭಂಡಾರಾನ ಅವರ ವೇದಾಧ್ಯಯನ ಉಪನಿಷತ್ ಧರ್ಮ, ಕರ್ಮದ ಸಿದ್ಧಾಂತ. ಅವರು ಹೇಳು ವೇದಪಾಠಾ. ಜೀವನ ಧನ್ಯ ಆತು ಲಕ್ಷ್ಮೀ. ಇಂಥಾ ಭಕ್ತಿ, ಧರ್ಮ, ಜ್ಞಾನಾ ಅನ್ನೋ ಈ ನೆಲದ ಭಂಡಾರದಾಗ. ನಮ್ಮ ರಾಘಣ್ಣ ಆಗ್ಲಿ, ಬರೂ ಮುಂದಿನ ಕೂಸು ಆಗ್ಲಿ ಅವರ ಕೈಯಾಗ ಕಡದ ಮೂರ್ತಿ ಆಗ್ತಾರ”



“ಹೌದು, ಆದ್ರ, ನೀವ್ಽಽರ ಎನು ಕಡಿಮಿ. ಇದ್ದಿರೇನು? ಧರ್ಮ, ಶಾಸ್ತ್ರ, ವೇದ, ಪುರಾಣ ಅಂತ ಓದಿಕೊಂಡವ್ರು. ಭಾರತ–ಭಾಗವತ ಅಂತೂ ನಿಮ್ಮ ಬಾಯಾಗ ಅದ. ಅದಕ ಓಣಿ ಮಂದಿ ಊರು ಮಂದಿ, ಸುತ್ತಲೂ ಹಳ್ಳಿಯವ್ರು ಸುದ್ದೇ, ಪುರಾಣ, ಪುಣ್ಯಕಥಿ ಹೇಳ್ರಿ ಅಂತ ಕರಿತಾರ. ನಿಮ್ಮ ಕೈಯಿಂದ ತಮ್ಮ ದೇವರ ಪೂಜೆ ಪುನಸ್ಕಾರ ಆಗ್ಲಿ ಅಂತಾರ. ನೀವು ಹೇಳಿದ್ಹಂಗ ಈ ನೆಲಕ ಬಂದು ಸೇರ್ಲಿಕ್ಕೆ. ನಮ್ಮ ಪೂರ್ವಜನ್ಮದ ಪುಣ್ಯಾನೇ ಇರ್ಬೇಕು ನಮ್ಮ ಮಕ್ಕಳು ಸುದ್ದೇ. ಇಂಥಾ ಪುಣ್ಯದ ನೆಲದಾಗ ಬೆಳೀಲಿ, ನೋಡಿರಿಲ್ಲೊ, ನಮ್ಮ ರಾಘಣ್ಣ ಎಷ್ಟು ಸುಧಾರಸ್ಯಾನ. ಗುರುಕುಲಕ ಹೋದ ಮ್ಯಾಲೆ ಎಷ್ಟು ಸಂಸ್ಕೃತ ಪಾಠ ಕಲಿತಾನ.

“ಹೌದು, ರಾಮಾಚಾರ್ಯರು ಹೇಳ್ತಿದ್ರು. ನಿಮ್ಮ ರಾಘು ಈಗ ವೇದಾಧ್ಯಯನ ಸುರು ಮಾಡ್ಯಾನ. ಸಂಸ್ಕೃತ ಮಂತ್ರ ಅಂತೂ ಎಷ್ಟು ಸ್ಪಷ್ಟ ಉಚ್ಛಾರ ಮಾಡ್ತಾನ ಅಂತ, ನಂಗಂತೂ ವಯಸ್ಸು ಆಗ್ಲೀಕ್ಹತ್ತು. ಮುಂದೆ ಇವನ ಹುಟ್ಟಿ ಬರೂ ಕೂಸಿಗೆ ಹಾದಿಯಾಗ್ಬೇಕು ಅಲ್ಲ?”

ಯಾಕೋ ಗಂಡನ ಮಾತು ಕೇಳುತ್ತ ಕೇಳುತ್ತ ಮನಸ್ಸು ತೀರ ಹೈರಾಣವಾದಂತೆನಿಸಿತು ಅವಳಿಗೆ. “ಹಂಗಾರ ಗಂಡ ಹೇಳಿದ್ಹಂಗ ಈ ಜೀವ ಹುಟ್ಟಿ ಬಂದು ದೊಡ್ಡದಾಗುತನಕ ತಮಗ ಈ ಪ್ರಪಂಚದ ಋಣ ಎಷ್ಟಿರ್ತದೋ? ಹಿಂದಿನ ಕೆಲವು ದಿನಗಳ ಹಿಂದಷ್ಟೇ ತಮಗೂ ವಯಸ್ಸಾಯ್ತು. ರಾಘುನೂ ದೊಡ್ಡವನಾಗುತ್ತಿದ್ದಾನೆ. ಅವನ ಅಧ್ಯಯನ ಮುಗಿಬೇಕಂದ್ರ ಇನ್ನು ನಾಕಾರು ವರ್ಷ ಬೇಕು. ಅಂವನೂ ಒಂದು ವೃತ್ತಿಯೊಳಗ ತೊಡಗಿದನಂದ್ರ. ಒಂದು ಲಗ್ನಂತ ಆಗ್ತದ. ತಾವಿನ್ನ ಕಡಿ ಹಾದಿಯೊಳಗ ಹೆಜ್ಜೆ ಹಾಕಲಿಕ್ಕೆ ಹತ್ತೀವಿ. ತಮ್ಮ ಹಾದಿ ಅಂಚು ಯಾವಾಗ ಮುಗಿತದೋ ಮುಗಿತದ. ಅಷ್ಟರಾಗ ಜೀವನದ ಸಾಧನಾ ಮಾಡ್ಕೋಬೇಕು ಅಂತ ಮುಕ್ತಿ ಹಾದಿ ಹುಡುಕು ವಯಸ್ಸಿನ್ನಾಗ ಇದ್ವಿ. ಆದ್ರ ಎಷ್ಟು ವಿಚಿತ್ರ ಈಗ ಮತ್ತೆ ಇನ್ನು ಇಷ್ಟು ವರ್ಷ ಬದುಕಬೇಕು. ಹುಟ್ಟಿ ಬರೂ ಜೀವದ್ದು ಬಾಲ್ಯ ಹರೇ ನೋಡ್ಬೇಕು. ಅದರ ಬದುಕಿನ ಹಾದಿ ಹ್ಯಾಂಗ ಇರ್ತದ. ಅದಕೊಂದು ಆಧಾರಕ್ಕ ಹಾದಿ ಮಾಡಿಕೊಡಬೇಕು ಅನ್ನು ಅನಂತ ಆಶಾ ಹಂಬಲ ಹುಟ್ಟಲಿಕ್ಕೆ ಹತ್ತೇದ ದೇವರ ಹಚ್ಚು ಮಾಯ ಮೋಹ ಅಂದ್ರ ಇದೇ ಇರ್ಬೇಕು.

ಆದ್ರ ಹ್ಯಾಂಗ ಸಾಧ್ಯ ಆದೀತು? ಮನಸ್ಸು ಹಿಂದ ಸರದ್ಹಂಗ ವಯಸ್ಸು ಹಿಂದೆ ಸರಿಬೇಕಲ್ಲ. ಪ್ರಪಂಚ ಇಷ್ಟು ಲಗು ಬಿಟ್ಟು ಹೋಗ್ಬೇಕ ಅನ್ನು ಒದ್ದಾಟ. ಮತ್ತೆ ಮತ್ತೆ ಯಾಕ? ಬ್ಯಾಡಾ ಇಂಥಾದ್ದೆಲ್ಲ ತಾ ವಿಚಾರ ಮಾಡಬಾರ್ದು. ತುಂಬಿದ ಬಸುರಿ ಮನಸ್ಸಿಗೆ, ಎನೇನೋ ಹಚಗೊಂಡು ಒದ್ದಾಡಬಾರ್ದು ಅಂವಾ ಕರುಣಿಸಿ ಕೊಟ್ಟಾನ. ಅವನೇ ಕೈ ಹಿಡಿತಾನ. ಸರ್ವಂತರ್ಯಾಮಿ ಅಂವಾ ಎನು ಮಾಡ್ಬೇಕು ಅನ್ನೂದು ಅಂವಗ ಗೊತ್ತು ಇರ್ತದ ಎಲ್ಲಾ ಅವನ ಪದರಾಗ ಹಾಕಿ ನಿಶ್ಚಿಂತಿಯಿಂದ ಇರ್ಬೇಕು ತಾನು.

“ಅವ್ವಯ್ಯಾ ಎಷ್ಟು ಲಗೂ ಕತ್ತಲಾತು. ದೇವರ ಮುಂದ ದೀಪಾ ಹಚ್ಚಬೇಕು. ಇವ್ರು ರಾಘು, ಸಂಜಿ ಸಂಧ್ಯಾನಾ ಮಾಡು ಹೊತ್ತಾತು. ಈಗ ಸೀತಕ್ಕ ಬಂದ್ರ ಬಂದ್ರ, ಲಕ್ಷ್ಮೀ ಕೋತ್ಲಪ್ಪಗ ಹೋಗೋಣಂತ ಬಾ. ಇದೊಂದು ಸರಳಗ ಮೈ ಇಳಿದು ಛಲೋ ಗಂಡಸ ಮಗಾ ಹುಟ್ಟಿದ್ರ ಸಾಕು” ಎನ್ನುತ್ತಾರೆ. ಎಷ್ಟು ಅಂತಃಕರುಣಿ ಹೆಣ್ಣು ಸೀತಕ್ಕ. ಬೆನ್ನ ಹಿಂದ

ಅವರಿದ್ದಾರೆಂದೆ ತನಗೂ ಬಸಿರು ಬಯಕೆಯ ಯಾವ ಚಿಂತೆಯೂ ಆಗಲಿಲ್ಲ. ತನಗೆ ಮಕ್ಕಳಿಲ್ಲದಿದ್ದರೂ ಓಣಿಯ ಹೆಣ್ಣು ಮಕ್ಕಳ ಬಸಿರು ಬಯಕೆಗಳನ್ನು ತೀರಿಸುವದರಲ್ಲಿಯೇ ಇರುತ್ತಾರೆ. ಎಷ್ಟು ಅಂತಃಕರಣದಿಂದ ತನಗೂ ಹೇಳಿದ್ರು "ನೀನು ಕಾಳಜಿ ಮಾಡಬ್ಯಾಡಾ ಲಕ್ಷ್ಮೀ. ಬಾಣಂತನ ನಾ ಮಾಡ್ತೀನಿ. ನೀನು ನನ್ನ ಬೆನ್ನಿಗೆ ಬಿದ್ದ ತಂಗಿ ಅಂತ ತಿಳ್ಕೊಂಡಿನಿ" ಅಂದಿದ್ದರು. ಗಂಡ ಹೇಳಿದ್ದು ಖರೇ ಕಾಖಂಡಕಿಯಲ್ಲಿ ಜೀವನ ಬೇಗುದಿಯಲ್ಲಿ ಬಿದ್ದಾಗ ಇಲ್ಲಿಯ ನೆಲದ ಋಣ. ತಮ್ಮನ್ನು ಕೈ ಹಿಡಿದು ಕರೆತಂದಿತ್ತು. ಪ್ರಭೆಯ ನೀರಿನಂತೆ ಅವಳ ಶಾಂತತೆಯಂತೆ ಓಣಿಯ ಜನರ ನಡುವಳಿಕೆ ಕೂಡ ಎಷ್ಟು ಸ್ವಚ್ಛ. ಇದು ಬರಿ ಓಣಿಯಲ್ಲ. ಓಣಿಯವರೆಲ್ಲ ಒಂದೇ ಮನೆಯವರಂತೆ ಇದ್ದಾರೆ. ಒಬ್ಬರ ಕಷ್ಟ ಸುಖಗಳನ್ನು ಮತ್ತೊಬ್ಬರು ತಮ್ಮದೇ ಎನ್ನುವಂತೆ ಹಂಚಿಕೊಂಡು ಬಾಳುತ್ತಾರೆ.

ಲಕ್ಷ್ಮೀಬಾಯಿಯ ಮನಸ್ಸು ಕೂಡ ಈಗ ಹಗುರಾಗಿತ್ತು. ಜೀವನ ಸಂಧ್ಯೆಯಲ್ಲಿ ಯಾರೋ ಹಗಲುದೀಪವನ್ನು ಹಿಡಿದುಕೊಂಡು ತಮಗೆ ಬೆಳಕು ತೋರುತ್ತಿದ್ದಾರೇನೋ ಎನಿಸುತ್ತಿತ್ತು.

"ಅವ್ವಾ ಎಲ್ಲಿದ್ದೀಯ?" ಎಂದು. ರಾಘು ಅಂಗಳದ ಕಟ್ಟೆ ಏರಿಬಂದ.

"ಯಾಕಪ್ಪಾ"

"ಏನಿಲ್ಲ ಸಂಧ್ಯಾನಾ ಮುಗಿಸಿ. ನಾರಾಯಣನ ಮನಿಗೆ ಹೋಗ್ಬೇಕು"

"ಆತಪ್ಪಾ ಬಾ ನಾನು ಒಂದು ಖೋಡಿನ ಕಂದೀಲ ಹಚ್ಚಿ ತುಳಸಿ ಕಟ್ಟಿ ಮುಂದ ದೀಪಾ ಇಡ್ಬೇಕು. ರಾಘು ಒಂಚೂರು ದನಕ್ಕೆ ಮೇವು ಹಾಕಿ ಬಿಡಪ್ಪಾ. ಅಂಬಾ ಅಂತ ಒದರಲಿಕ್ಕೆ ಹತ್ತ್ಯಾಳ ನೋಡು ತುಂಗಾ. . .ನಾನು ಬಂದು ಏನೇನೋ ವಿಚಾರಾ ಮಡ್ಕೋತ ಹಂಗೆ ಕೂತಿನಿ" ಎಂದು ಎದ್ದು ದೇವರ ಮನೆ ಕಡೆ ನಡೆದಳು.

* * *

ಲಕ್ಷ್ಮೀಬಾಯಿ ಈಗ ಒಂಬತ್ತು ತಿಂಗಳು ತುಂಬಿದ ಬಸುರಿ ಹೊಟ್ಟೆಯೊಳಗಿನ ಜೀವ ಚಲಿಸಿ "ಅವ್ವಾ ನಾ ಈಗ ಇನ್ನೊಂದು ಗಳಿಗೆಗೆ ಬರ್ತೀನಿ" ಎನ್ನುತ್ತಿತ್ತು. ಮನುಷ್ಯ ಜೀವನದ ಜೀವನ ಸಂಕುಲ ಸೃಷ್ಟಿಯಲ್ಲಿ ಹೆಣ್ಣಿನದು ಎಂಥಹ ಆಗಮ್ಯ ಪಾತ್ರ. ಇದು ಹೆಣ್ಣಿಗೆ ದೇವರು ಕೊಟ್ಟ ವರವೇ ಸರಿ. ಅಂತಲೇ ಎಂಥೆಂಥಹ ಮಹಾಪುರುಷರನ್ನು, ಮಹಾಪುಣ್ಯ ಚೈತನ್ಯಗಳನ್ನು ಹೊಟ್ಟೆಯಲ್ಲಿ ಹೊತ್ತು ಭೂಮಿಗೆ ತರುವದೆಂದರೆ? ತುಂಬಿದ ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡರೆ ಅನನ್ಯ ಭಾವವಿರುತ್ತಿತ್ತು. ಆ ಸ್ಪರ್ಶದಲ್ಲಿ, ನಿಜವಾಗಿಯೂ ತನ್ನದೊಂದು ಪುಣ್ಯಗರ್ಭವೆಂದು ತಿಳಿದಿರಲಿಕ್ಕಿಲ್ಲ ಆಕೆಗೆ. ಆದರೆ ಮನಸ್ಸಿನ ಬಯಕೆ ಮಾತ್ರ ಸದಾ ಸರ್ವದಾ ಹರಿಯುವ ಶಾಂತ ಹಳ್ಳದಂತೆ. ಭಗವಂತನ ಕಡೆಗೆ ಹರಿಯುತ್ತಿತ್ತು. ಆ ಭಗವಂತ ಪುಣ್ಯಕಥನ ಶ್ರವಣ ಮಾಡಬೇಕು ಎನಿಸುತ್ತಿತ್ತು. ಇಂಥಹ ಯಾವದೋ ಒಂದು ಅಲೌಕಿಕ ಭಾವ ಅವಳ ಮನಸ್ಸನ್ನು ಯಾವಾಗಲೂ ಆವರಿಸಿ "ದೇವರೇ, ನೀನು ಕೊಟ್ಟ ಜೀವವಿದು. ಇದನ್ನು ಕಾಪಾಡುವ ಜವಾಬ್ದಾರಿ ಕೂಡ ನಿನ್ನದೇ ಎಂಬ ಅರ್ಪಣಾಭಾವದಲ್ಲಿ ಮನಸ್ಸನ್ನು ಹಗುರ ಮಾಡಿಕೊಳ್ಳುತ್ತಿದ್ದಳು.





ಒಂದೊಂದಾಗಿ ಉರುಳಿದ ದಿನಗಳಲ್ಲಿ ಕಾಲನಿರ್ಣಯಗಳನ್ನೆಲ್ಲ ತನ್ನ ಕೈಯಲ್ಲೆ ಇಟ್ಟುಕೊಂಡು ಜೀವ ಚೈತನ್ಯವನ್ನು ಎಲ್ಲ ಕಡೆ ತುಂಬುವಂತೆ ಹುಟ್ಟಿ ಬಂದ ಅವಳ ಮಗ.

ಲಕ್ಷ್ಮೀಬಾಯಿಗೆ ಇನ್ನು ನೆನಪಿದೆ ಅವತ್ತು ಸಂಜೆ ದೀಪ ಹಚ್ಚುವ ಹೊತ್ತು. ರಾಘು ಪಡಸಾಲೆಯಲ್ಲಿ ಏನೋ ಓದುತ್ತ ಕುಳಿತಿದ್ದ. ಗಂಡ ಕೋತ್ತಪ್ಪನ ಗುಡಿಗೆ ಹೋದವರು ಇನ್ನು ಬಂದಿರಲಿಲ್ಲ. ಎಂಥಹ ಆಹ್ಲಾದವಾದ ಸಂಜೆ ಎನಿಸುತ್ತಿತ್ತು. ಸೂರ್ಯ ಮುಳುಗಿ ಕತ್ತಲಾದರೂ ಆ ಕತ್ತಲ ಹಿಂದೆ ಎಷ್ಟೊಂದ ಬೆಳಕಿನ ಕಿರಣಗಳು ಹೊಂಬಣ್ಣದಂತೆ ಆವರಿಸಿ ಪರಿಸರವೆಲ್ಲ ಹೊನ್ನ ಪರದೆ ಇಳಿಬಿಟ್ಟಂತೆ ತುಸು ತಂಪಾದ ಗಾಳಿಗೆ ಎಲ್ಲಿಯದೋ ಹೂವಿನ ಸುವಾಸನೆ ಬಂದು ಹರಡಿದಂತಿದೆ. ಕೊಟ್ಟಿಗೆಯಲ್ಲಿ ದನಗಳು ಅಂಬಾ ಎಂದು ಒದರುತ್ತಿವೆ. ಯಾರದೋ ಆಗಮನದ ಸೂಚನೆ ಯಾಕೋ ಮೈ ಕೈ ಹೈರಾಣವಾದಂತಾಗಿ ಹೊಟ್ಟೆಯಲ್ಲಿ ಜಗ್ಗಿದಂತಾಗುತ್ತಿತ್ತು. ಪಕ್ಕಡಿಯಲ್ಲಿ ನೋವು ಸಣ್ಣದಾಗಿ ಒದ್ದುಕೊಂಡು ಬರುತ್ತಿತ್ತು. ಇದು ಇಂಥಹದೇ ನೋವು ಎಂದು ಅರಿವಾದಾಗ ರಾಘು ನನ್ನ ಕಳಿಸಿ ಸೀತಕ್ಕನನ್ನು ಕರೆಸಿಕೊಂಡಿದ್ದೆ. ಎಷ್ಟು ಅನನ್ಯ ಅಂತಃಕರಣದಿಂದ ಧಾವಿಸಿ ಬಂದಳಾಕೆ.

"ಯಾಕವಾ ಸುರುವಾತೇನು ಬ್ಯಾನಿ" ಎನ್ನುತ್ತ ತನ್ನ ಮುಖನೋಡಿ "ಆಯಾಸ ಮಾಡ್ಕೋಬ್ಯಾಡಾ ಬಾ ಇಲ್ಲ ಸಣ್ಣ ಖೋಲ್ಯಾಗ ಹಾಸಗಿ ಹಾಸತೀನಿ" ಎಂದು ಚಾಪೆ ಹಾಸಿ ಮಲಗಿಸಿದರು. ಮತ್ತೆ ತನ್ನ ಮುಖ ನೋಡಿ "ಮುಖ ಎಲ್ಲ ಇಳದ ಬಿಟ್ಟದ ಲಕ್ಷ್ಮೀ. ಇನ್ನ ಬ್ಹಾಳೋತ್ತು ಆಗಂಗಿಲ್ಲ ತಗೋ" ಎಂದು ತಮಗೆ ಮಕ್ಕಳಿಲ್ಲದಿದ್ದರೂ, ಹತ್ತು ಹಡೆದವರಂತೆ ಎಲ್ಲ ಸಿದ್ಧತೆ ಮಾಡಿಕೊಂಡು ತನಗೆ ಬ್ಯಾನಿ ಹೆಚ್ಚಾಗಿ, ಅವರು ತನ್ನ ಹೊಟ್ಟೆ ನೀವಿ, ಅನಾಯಾಸವಾಗಿ ಕೂಸನ್ನು ಹೊರತೆಗೆದು ಸ್ವಚ್ಛಮಾಡಿ, ಅಂಗೈಯಲ್ಲಿ ಎತ್ತಿ ಹಿಡಿದು ಎರಡು ಗಳಿಗೆ ಕೂಸಿನ ಮುಖ ನೋಡಿದರು.

"ಲಕ್ಷ್ಮೀ ಕೂಸಿನ ಮುಖಾ ನೋಡ್ದೇನ? ಇದು ಅಂಥಾ ಇಂಥಾ ಜೀವೆಲ್ಲ ಅನಸ್ತದ. ಅಪರೂಪದ್ದೆ. ಬ್ಹಾಳ ಅಪರೂಪದ್ದು" ಎಂದಿದ್ದರು ಹಡೆದ ಆಯಾಸದಲ್ಲಿ ಎಚ್ಚರವಿರಲಿಲ್ಲ ತನಗೆ. ಮುಂದೆ ಏನೇನೋ ಆರೈಕೆ ಉಪಚಾರ ಎಂದು ಮೂರು ತಿಂಗಳು ಮುಗಿಯುವ ತನಕ ಬಾಣಂತನ ಮಾಡಿದವರು ಅವರೇ. ಓಣಿಯವರೆಲ್ಲ ಪಾಳಿಯಂತೆ ತನ್ನನ್ನು ನೋಡಿಕೊಂಡರು.

ಎಷ್ಟು ಲಗೂ ಕಳೆದು ಹೋದುವು ದಿನಗಳು ಮೂರು ತಿಂಗಳ ಕೂಸು. ಆರು ತಿಂಗಳಾಗಿ, ಅಂಬೆಗಾಲಿಕ್ಕಿ ಅಂಗಳ ತುಂಬೆಲ್ಲ ಓಡಾಡುತ್ತಿತ್ತು. ಅಣ್ಣನ ಹೆಗಲ ಮೇಲೆ ಕೂತು, ಓಣಿ ತುಂಬ ಊರ ತುಂಬ ಓಡಾಡಿ ಬರುತ್ತಿತ್ತು. ಇವನು ಹುಟ್ಟುವ ಮೊದಲು ಎಷ್ಟೊಂದು ಮೈತುಂಬ ಯೋಚನೆಗಳಿದ್ದವು. ಆದರೆ ಇವನು ಹುಟ್ಟಿಬಂದ ಮೇಲೆ, ಮನೆಯ ಪರಿಸರವೇ ಬದಲಾಯಿತಲ್ಲ. ಅವತ್ತು ದೇವರ ಕಟ್ಟೆ ಮೇಲೆ ಕೂತು ದೇವರನ್ನು ಭುಜಂಗಿಸುತ್ತ ಗಂಡ ಹೇಳಿದ್ದರು.

"ಲಕ್ಷ್ಮೀ ಕೂಸಿಗೆ ವೆಂಕಟೇಶನ ಹೆಸರಿಟ್ಟದ್ದನ್ನು ಸಾರ್ಥಕ ಆತು ನೋಡು. ದೇವರ ಮನಿಗೆ ಬಂದ್ರ, ಏನೋ ಅಪರೂಪದ್ದು ನೋಡು ಹಂಗ ಪಿಳಿ–ಪಿಳಿ ದೇವರ ಮೂರ್ತಿ ನೋಡ್ಕೋತ ನಿಂದ್ರತದ, ಹೌದು. ಈ ಜೀವವನ್ನು ಹೊಟ್ಟೆಯಲ್ಲಿ ಹೊತ್ತಾಗಿನಿಂದ ತನಗೆ ವೇಂಕಪ್ಪನ ನಾಮಸ್ಮರಣೆಯೇ ದಿನಚರಿಯಾಗಿಬಿಟ್ಟಿತ್ತು. ಈಗ ಮಗನಿಗೂ ಸುದ್ದೆ ಅದೇ ಹೆಸರಿಟ್ಟು ದಿನಪೂರ್ತಿ ಅದನ್ನೇ ಜಪಿಸುವಂತಾಗಿತ್ತು.

ವೇಂಕಪ್ಪ ಬೆಳೆಯುತ್ತಿದ್ದ ಕಾಲವನ್ನು ಹಿಂದೂಡಿ ಮುಂದೆ ಓಡುವಂತೆ, ಹುಡುಗ ಗೋಡೆ ಹಿಡಿದುಕೊಂಡು ನಡುಮನೆ, ಪಡಸಾಲೆ ಅಂಗಳ ಎಲ್ಲ ಕಡೆ ಓಡಾಡುತ್ತಿದ್ದ.

ಆದರೆ ತನಗೆ? ಯಾಕೋ ವೆಂಕಣ್ಣ ಹುಟ್ಟಿದ ಮೇಲೆ ಮೊದಲಿನ ಶಕ್ತಿ ಉಳಿದಿಲ್ಲ ಎನಿಸುತ್ತಿತ್ತು. ಮೈಯಲ್ಲಿಯ ಎಲ್ಲ ಶಕ್ತಿ ಸೋರಿ ಹೋಗುತ್ತಿದೆ. ತನ್ನ ಆಯುಷ್ಯದಲ್ಲಿ ಒಂದೊಂದೇ ದಿನ ಹಿಂದೆ ಸರಿಯುತ್ತಿದ್ದೇನೆ. ಬದುಕು ತನ್ನನ್ನು ಹಿಂದೆ ನೂಕುತ್ತಿದೆ. ಸಾವು ತನ್ನನ್ನು ಹತ್ತಿರ ಕರೆದುಕೊಳ್ಳುತ್ತಿದೆ. ಎನ್ನುವಷ್ಟರ ಮಟ್ಟಿಗೆ, ಮನಸ್ಸಿನ ಕ್ಷೋಭೆ ಹೆಚ್ಚುತ್ತಿತ್ತು. ಖರೇ ತಮಗೂ ವಯಸ್ಸಾಯ್ತು. ಇಬ್ಬರಿಗೂ ಬದುಕಿನ ಆಯುಷ್ಯದ ಕೊನೆ ಇವತ್ತೋ, ನಾಳೆಯೋ ಬರಬಹುದು ಜೀವನದ ರೀತಿ–ನೀತಿಯ ಬಗ್ಗೆ ಇಷ್ಟೊಂದು ತಿಳಿದುಕೊಂಡವರು ತಾವು. ಲೋಕದ ರೀತಿ–ನೀತಿಗೆ ಬದ್ಧರಾಗಿರಬೇಕು. ಹುಟ್ಟು–ಸಾವು ತಮ್ಮ ಕೈಯಲ್ಲಿಲ್ಲ. ಅದು ಭಗವಂತನ ಇಚ್ಛೆ ಎನ್ನುವುದು ಖರೇ. ಇಂಥ ಜೀವನದ ಮರ್ಮವನ್ನು ಅರಿತರೂ ಯಾಕೆ ಮನಸ್ಸು ಮತ್ತೆ ಮತ್ತೆ ಲೌಕಿಕದ ಕಡೆ ಎಳೆಯುತ್ತಿದೆ. ಮತ್ತೆ ಬದುಕಬೇಕೆಂಬ ಆಯಸ್ಸನ್ನು ಹೆಚ್ಚಿಸಿಕೊಳ್ಳಬೇಕೆಂಬ ವಾಂಛೆ ತನ್ನನ್ನು ಸುತ್ತಿಕೊಳ್ಳುತ್ತಿದೆಯಲ್ಲ. ಈ ಕಳವಳ ಅವಳಲ್ಲಿ ಹೆಚ್ಚುತ್ತಿದ್ದಂತೆ ಅವಳ ಮನಸ್ಸಿಗೆ ತಟ್ಟನೆ ಆ ಭಾವನೆಯ ಮೂಲ ಅರಿವಾಗುತ್ತಿತ್ತು ಇದು ತನಗಾಗಿ ಬದುಕುವ ವಾಂಛೆ ಅಲ್ಲ, ತನ್ನ ಮನಸ್ಸು ಎಳೆಯುತ್ತಿದ್ದುದು ಲೌಕಿಕದ ಕಡೆಗಲ್ಲ. ತನ್ನದು ಎಷ್ಟೆಂದರೂ ತಾಯಿ ಹೃದಯ. ವೇಂಕಣ್ಣ ಇನ್ನೂ ಸಣ್ಣವ. ಹಾಲುಗಲ್ಲದ ಹಸುಳೆಯಾಗಿ ಬೆಳೆದು ಈಗ ನಾಲ್ಕು ಹೆಜ್ಜೆ ಮನೆ ತುಂಬ ಓಡಾಡಿ ಈ ತಾಯಿ ಹೃದಯಕ್ಕೆ ಸಂತಸ ಕೊಟ್ಟವ "ಅವ್ವಾ" ಎನ್ನುತ್ತ ಪುಟ್ಟ ಕೈಗಳಿಂದ ತನ್ನನ್ನು ಅಪ್ಪಿಕೊಳ್ಳುವವ. ಗಳಿಗೆ ತಾನು ಕೆಲಸದಲ್ಲಿ ಎಲ್ಲಿಯಾದರೂ ಕಣ್ಮರೆಯಾದರೆ ಸಾಕು "ಅವ್ವಾ ನನ್ನ ಬಿಟ್ಟು ಎಲ್ಲೂ ಹೋಗಬ್ಯಾಡವ್ವಾ" ಎನ್ನುತ್ತ ಓಡಿಬಂದು ಅಪ್ಪುತ್ತಿದ್ದ. ಆದರೆ ಮಗನ ಲೌಕಿಕ ಬಂಧನ ತನ್ನನ್ನು ಸುತ್ತಿಕೊಳ್ಳುತ್ತಿದ್ದರೇ ತಾನು ಹೇಗೆ ಮನೆಯನ್ನು, ಗಂಡನನ್ನು, ಮಕ್ಕಳನ್ನು. . .ದೇವರೆ ಯಾಕೆ ಹೆಣ್ಣು ಮನಸ್ಸಿಗೆ ಇಂಥ ಬಂಧನ. ವ್ಯಾಮೋಹಗಳನ್ನು ಹಾಕಿ ಕರುಗಿಸುತ್ತಿ ತನ್ನ ತಾಯ್ತನವನ್ನೆಲ್ಲಾ ಬಸಿದು ಹುಟ್ಟಿದ ಮಗ. ಆದರೆ ತನ್ನಲ್ಲಿ ಬಸಿದು ಹೋದ ಸತ್ವ ಮತ್ತೆ ತುಂಬಿಕೊಳ್ಳಲಿಲ್ಲ.

ದಿನೇ ದಿನೇ ಒಳಗೊಳಗೇ ಸವಿಯುತ್ತ, ಒಂದು ದಿನ ತಾನು ಕಣ್ಮುಚ್ಚಿ ಈ ಲೋಕ ತೊರೆದುಹೋಗುವುದು ಖರೇ ಎನಿಸುತ್ತಿರುವಾಗ ಗಂಡನನ್ನು ಹತ್ತಿರ ಕರೆದು ಕೂಡಿಸಿ ಹೇಳಿದ್ದಳು.

"ನಾ ಒಂದು ಮಾತು ಹೇಳ್ತೀನಿ. ಕೇಳ್ತೀರೇನು ನೀವು" ನರಸಪ್ಪಯ್ಯ ಅವಳ ಹಾಸಿಗೆ ಹತ್ತಿರ ಕೂತು ಅವಳ ನಿರ್ಬಲವಾದ ಕೈ ಹಿಡಿದರು.



"ಯಾಕ ಲಕ್ಷ್ಮೀ ನೀ ಇತ್ತಿತ್ತಲಾಗ ಬ್ಹಾಳ ಹಣ್ಣಾಗಬಿಟ್ಟಿ, ನಿನ್ನ ನೋಡಿದ್ರ ಕರುಳು ಕಿತ್ತಿ ಬರ್ತದ. ಒಂದೊಂದು ಹೆಜ್ಜಿ ಹಿಂದ ಹೋಗಿ ಎಲ್ಲಿ ಈ ಮನಿಯಿಂದ ನಮ್ಮಿಂದ ದೂರಾಗಿ ಮಟಾ ಮಾಯಾ ಆಗಿಬಿಡ್ತೀಯೋ ಅನಸ್ತದ. ಯಾಕ ಬದುಕು ಇಚ್ಛಾ ಇಲ್ಲೇನು ನಿನಗ?"

ಶಕ್ತಿ ಕುಂದಿ ಹಣ್ಣಾಗಿದ್ದರೂ ಹಣ್ಣಿನಂಥಹ ಪಕ್ವತೆ ಇತ್ತು ಅವಳ ಮುಖದಲ್ಲಿ.

"ಎಲ್ಲ ತಿಳಿದವ್ರು ನೀವು ಹಿಂಗಂದ್ರ ಹ್ಯಾಂಗ. ಈ ಭೂಮಿ ಮ್ಯಾಲೆ ಇನ್ನ ಎಷ್ಟು ದಿನಾ ನನ್ನ ಋಣಾ ಅದೆನೋ ಗೊತ್ತಿಲ್ಲ. ನೀವು ಪುರಾಣಾ ಹೇಳೂ ಮುಂದ ಜೀವದ ಸೃಷ್ಟಿ–ಲಯದ ಬಗ್ಗೆ ಹೇಳ್ತೀರಿ. ಹುಟ್ಟು ಮುಂದ ಜೀವಾ ಸಾವಿನ ನೆರಳು ಹಿಂದಕ್ಕೆ ಕೈಗೊಂಡೆ ಬಂದೀರ್ತದ ಅಂತ ಹೇಳ್ತಿರ್ತೀರಿ. ಇಷ್ಟು ಗೊತ್ತಿದ್ದೂ ಮತ್ತೆ ನನಗೆ ಬದುಕು ಇಚ್ಛಾ ಇಲ್ಲೇನು? ಅಂತ ಕೇಳ್ತೀರಲ್ಲಾ"

"ಖರೇ ಲಕ್ಷ್ಮೀ, ಜೀವನ ನಶ್ವರ ಅಂದ್ರೂ ಲೌಕಿಕದ ವ್ಯಾಮೋಹ ಬಿಡಂಗಿಲ್ಲ ಅಲ್ಲ? ನೋಡು, ಬಂದ ನೋಡು ನಿನ್ನ ಮಗ. ಹಿಂಗೆ ಅನ್ನೋದ್ರಾಗ ಆರು ವರ್ಷ ಆದು. ಇವನಽ ಅಲ್ಲ? ಮತ್ತೆ ನಮ್ಮನ್ನು ಲೌಕಿಕಕ್ಕ ಎಳೆದು ತಂದಾವಾ. ಮುಗಿಸಬೇಕು ಅಂದ್ರ, ಮುಗಿಯಂಗಿಲ್ಲ ಲಕ್ಷ್ಮೀ ಈ ಜೀವದ ಮ್ಯಾಲಿನ ಮೋಹ. ಎಲಿ ಒಣಗಿ ಬಿದ್ದಂಗ ಕೆಳಗಿನ ಹಸಿರು ಮತ್ತೆ ಚಿಗುರು ಗಿಡದ ಗತೆ. ಎಲ್ಲೋ ಒಂದು ಕಡೆ ನಮ್ಮ ಅಂತರಾಳದೊಳಗ ಮತ್ತೆ ಮತ್ತೆ ಜೀವಿಸೂ ಆಶಾ ಹುಟ್ಟಿ ತೀರ್ತದ"

"ಹೌದು, ಆ ಆಶಾ ನನಗೂ ಅದ. ಆದ್ರ ದೇಹ ನಮ್ಮ ಮಾತು ಕೇಳಬೇಕಲ್ಲಾ? ಅದರ ಹುಟ್ಟಿದ ಹಣ್ಣಾಗಿ ಒಣಗಿ ಮತ್ತೆ ತೊಟ್ಟು ಕಳಚಿ ಬೀಳಬೇಕಲ್ಲ? ಆದ್ರ ಈಗ ನನಗೆ ಬ್ಹಾಳದಿನ ಬದಕಂಗಿಲ್ಲ ಅನಸ್ತದ." ಎನ್ನುತ್ತ ಹತ್ತಿರ ಬಂದು ಕುಳಿತ ವೆಂಕಣ್ಣನ ತಲೆ ಸವರಿ.

"ಎಲ್ಲಿ ಹೋಗಿದ್ದಪ್ಪಾ ಕೂಸು" ಅಂದಳು. ಅಭೋದ ವಯಸ್ಸು ಎಂಥ ಶಾಂತತೆ ತುಂಬಿದ ಮುಖದಲ್ಲಿ, ಮಲಗಿದ್ದ ಅವ್ವನ ಕೈ ಹಿಡಿದ.

"ನಾನು ಸೀತಕ್ಕಜ್ಜಿ ಮನಿಗೆ ಹೋಗಿದ್ದವಾ" ಅವರು ನನಗೆ ಬೆಲ್ಲಾ ಹಿಟ್ಟು ಕಲಿಸಿಕೊಟ್ರು. ರಾಮಣ್ಣಜ್ಜ ನನ್ನ ಕೂಡಸಿ ಎರಡು ಮಂತ್ರ ಹೇಳಿ ಕೊಟ್ರು. ದಿನಾ ಬಾ ಹೇಳಿಕೊಡ್ತೀನಿ ಅಂದಾರವ್ವಾ" ಅವ್ವಾ ಪೂಜೆ ಮಂತ್ರ ಅಂದ್ರ ನನಗೆ ಬ್ಹಾಳ ಸೇರ್ತದವ್ವಾ. ನಾನೂ ಅಪ್ಪನ ಗತೆ. ರಾಘಣ್ಣನ ಗತೆ ರಾಮಣ್ಣಜ್ಜನ ಗತೆ. ಸಂಧ್ಯಾನಾ ಮಾಡಬಹುದೇನವ್ವಾ"

"ಇಷ್ಟು ಸಣ್ಣ ವಯಸ್ಸಿಗೆ ಎಂಥಾ ತಿಳಿವಳಿಕೆ ವೇಂಕಣ್ಣ ನಿನಗ. ಮಾಡೀಕಂತಪಾ. ಮುಂದಿನ ವರ್ಷಂದ್ರ ನಿನಗು ಎಂಟು ವರ್ಷ ಆಗ್ತೇದಪ್ಪಾ. ಮುಂಜಿ ಮಾಡ್ತದಲ್ಲಾ ಆವಾಗ ಮಾಡಿಕಂತ ಆದ್ರ ಕೂಸು. ನಿನ್ನ ಮುಂಜಿ ತನ್ಕಾ, ನಾ ಇರ್ತೀನಿ ಇಲ್ಲೊ ? ಒಂದು ಹಿಡಿ ಮಾತೃಭಿಕ್ಷಾ ಹಾಕಿ ಕಣ್ಣು ಮುಚಗೊಂಡ್ರ ಛಲೋ ಇರ್ತದಪ್ಪಾ"

"ಯಾಕ ಲಕ್ಷ್ಮೀ ಹಿಂಗಂತಿ. ವರ್ಷ ಎನು ಆಡಾಡ್ತ ಬರ್ತದ ನೋಡು ಸಾಯೂ ಮಾತಾಡಬ್ಯಾಡಾ ನೀನು. ಹುಡುಗರ್ನ ಈ ಮನೀನ ನನ್ನ ಕೊಳ್ಳಿಗೆ ಹಾಕಾಕ ಇದ್ದಿಯೇನು? ನಡಿ. ಹಂಗರ ಇಬ್ರೂ ಕೂಡೇ ಈ ಭೂಮಿ ಋಣ ಮುಗಸುಣಾಂತ" ಎಂದು ನರಸಪ್ಪಯ್ಯ

ನೋವಿನ ಧ್ವನಿಯಲ್ಲಿ ಮಾತಾಡುತ್ತಿದ್ದರೆ, ಲಕ್ಷ್ಮಿ ಕಣ್ಣೀರು ತುಂಬಿದ ಮಸಕು ದೃಷ್ಟಿಯಲ್ಲಿ ಇಬ್ಬರೂ ಮಸಕಾಗಿ ಕಾಣುತ್ತಿದ್ದಾರೆ. ಗಂಡನ ನೋವು ತನಗೆ ಅರ್ಥವಾಗುತ್ತಿದೆ. ಆದರೆ ತನ್ನ ದೈಹಿಕ ಸ್ಥಿತಿ ಅವರಿಗೆ ಅರ್ಥವಾಗಿಲ್ಲವೆ? ಹೈರಾಣಭಾವದಲ್ಲಿಯೂ ಮೃದುವಾಗಿ ಹೇಳಿದಳಾಕೆ.

"ಹುಡುಗರಿಗೆ ಹಿಂದ ನಿಮ್ಮ ಆಸರ ಇರ್ತದಂತ ಮನಸ್ಸು ಗಟ್ಟಿಮಾಡಿ ಕೊಂಡೀನ್ರಿ ನಾನು, ಇಲ್ಲಾಂದ್ರ ಇಂಥ ಸಂಸಾರಾ ಬಿಟ್ಟು ಹೊಗ್ಲಿಕ್ಕೆ ನನಗssರ. ಇಚ್ಚಾ ಅದ ಎನು? ಈ ಜೀವ ಸೃಷ್ಟಿ ಕಾಪಾಡು ಭಾರ ಇಟ್ಗೊಂಡವ್ನೆ ಅಂವಾ. ನಾವು ಹುಲ್ಲುಕಡ್ಡಿ ಸಮಾನ ಅಂತ ನೀವ ಹೇಳ್ತೀರಿ. ಮುಂದ ಮಕ್ಕಳನ್ನು ಕಾಪಾಡೂ ಭಾರ ಅಂವಂದಲ್ಲ.

ಮಾತನಾಡದೆ ನರಸಪ್ಪಯ್ಯ ನೋವಿನಿಂದ ಎದ್ದು ಹೋದರು. ಹುಡುಗ ಅವ್ವನ ಹೊಟ್ಟೆಗಂಟಿಕೊಂಡು ಕುಳಿತೇ ಇದ್ದ. ಅವಳ ಕಣ್ಣು ಅವನನ್ನೇ ನೋಡುತ್ತಿದ್ದುವು, ತನ್ನ ಕಣ್ಣು ತುಂಬಿಕೊಳ್ಳುವಂತೆ. ಎಂಥ ಶಾಂತ ಸ್ವಭಾವದ ಹುಡುಗ. ಒಂದು ದಿನ ಅಳಲಿಲ್ಲ. ಹಟ ಮಾಡಲಿಲ್ಲ. ತನ್ನ ಕೆಲಸದಲ್ಲಿ ಅವನಿಗೆ ತಿನ್ನಲಿಕೆ ಕೊಡಲು ತಡವಾದರೂ ಅವ್ವಾ ಹಸಿವೆ ಎಂದು ಬರುತ್ತಿರಲಿಲ್ಲ. ತಾನೇ ಕರೆದು ಊಟ ಹಾಕಿದರೆ ಉಣ್ಣುತ್ತಿದ್ದ.

ನಸುಕಿನ ನಾಲ್ಕು ಗಂಟೆಗೆ ತಾನು ಎದ್ದೊಡನೆ ತನ್ನ ಸೆರಗಿಡಿದು ಎಳುತ್ತಿದ್ದ "ಇನ್ನು ನಸಕು ಹರಿದಿಲ್ಲ ಅನಕಾ ಮಲಕೊಪ್ಪ, ಸಣ್ಣ ಹುಡುಗ ಯಾಕ ನಿದ್ದೆಗೇಡತಿ" ಅಂದರೆ "ಇಲ್ಲವಾ ನೀ ಹಾಡ್ತೀಯಲ್ಲ ಅದನ್ನು ಕೇಳ್ಬೇಕು" ಎನ್ನುತ್ತಿದ್ದ. ದೇವರಮನೆ, ಕಸ ಉಡುಗುತ್ತ ತಾನು ಉದಯರಾಗ ಹಾಡುತ್ತಿದ್ದರೆ, "ಅವ್ವಾ ಹಂಗದ್ರೇನ ದೇವರನ್ನ ಅಂವಾ. ಅಷ್ಟ ಅಳಕೋತ ಯಾಕ ಕರಿತಾನ" ಎನ್ನುತ್ತಿತ್ತು.

"ಹೌದಪಾ, ಆ ದೇವರು ಅಂದ್ರ ಈ ಭೂಮಿಯ ಮೇಲಿನ ಜೀವಗೊಳಿಗೆ ತಂದೆತಾಯಿ ಇದ್ಧಂಗ. ಕಷ್ಟದಾಗ ಅವನ್ನ ದೈನಾಸ ಪಟ್ಟು ಕರದ್ರ ಅಂವಾ ಬಂದು ಕಾಪಾಡ್ತಾನಪಾ. ವೆಂಕಣ್ಣ ದಿನಾ ನಿಮ್ಮಪ್ಪ, ಭಾರತಾ ಓತ್ತಾರ ಕೇಳಿಯಿಲ್ಲಪಾ?

"ಹೂಂ ನವಾ, ಆದ್ರ ನನಗ ಎನು ತಿಳೀತದ?"

"ತಿಳಿಲಿಕ್ಕೆ ಕಲಿಬೇಕಪಾ, ಇನ್ನೊಂದು ವರ್ಷ ಅಂದ್ರ ನಿನಗೂ ಎಂಟು ವರ್ಷ ಆಗ್ತಾವ. ಮುಂಜಿ ಮಾಡೂ ವಯಸ್ಸು, ವೇದ ಮಂತ್ರ ಎಲ್ಲ ಕಲಿಬೇಕಪಾ."

"ಕಲೀತಿನವ್ವಾ, ಆದ್ರ ಮಹಾಭಾರತದ ಕಥಿ ಅಂದ್ಯಲ್ಲಾ ಎನೇನದ ಅದು."

"ಹೂಂ ಅದರಾಗ ಜಗತ್ತಿನ ರೀತಿ-ನೀತಿ ಎಲ್ಲಾ ತುಂಬೇದಪ್ಪಾ, ಪಾಂಡವರ ಧರ್ಮದ ಕಥಿ, ತನ್ನನ್ನು ನಂಬಿದವರ್ನ ಶ್ರೀ ಕೃಷ್ಣ ಪರಮಾತ್ಮ ಹ್ಯಾಗ ಕೈಹಿಡಿದು ಕಾಪಾಡ್ತಾನ ಅನ್ನು ಭಕ್ತಿ ಮಾರ್ಗ ಹೇಳು ಕಥಿ ಅದು. ಅದೇ ನಮಗ ಖರೇ ಹಾದಿ ತೋರಸು ಕಥಿ ಅಪಾ"

"ಅಂದ್ರ?"

"ಇದು ಭಗವಂತ ಕೊಟ್ಟ ಜನ್ಮ. ಅವನ ಪಾದ ಗಟ್ಟಿಯಾಗಿ ಹಿಡದು ನೀನುss ನನ್ನ ಅವ್ವಾ ಅಪ್ಪಾ ಅಂತ ಅನನ್ಯ ಭಕ್ತಿಯಿಂದ ಕರದ್ರ. ಅಂವಾ ಬಂದು ಕಾಪಾಡ್ತಾನಪಾ."



ಎಳು ವರ್ಷದ ಹುಡುಗ. ಭಕ್ತಿಯನ್ನು ಪರಮಾತ್ಮನ ಅಂತರಂಗಕ್ಕೆ ಹತ್ತಿರವಾಗುವ ಹಾದಿಯನ್ನು ಅವ್ವನ ಬಾಯಿಂದ ಕೇಳುತ್ತಿದ್ದರೂ, ಹುಡುಗತನದಲ್ಲಿ ಅವು ಅಂತರಂಗದ ಯಾವದೋ ಒಂದು ಮೂಲೆ ಸೇರಿ, ನಿಧಿಯಂತೆ ಅವಿತು ಕೊಂಡಿರಬೇಕು ಅವ್ವ ಹೇಳುವ ದೇವರ ಹಾಡುಗಳು. ಅವಳ ಹೇಳುವ ಭಗವಂತನ ರೂಪದ ವರ್ಣನೆ. ಅವ್ವ ಹೇಳುವ ಬದುಕಿನ ರೀತಿ ನೀತಿ ಅವ ಎಳೆಯ ಮನಸ್ಸಿನಲ್ಲಿ ಅಲ್ಲಲ್ಲಿ ನಟ್ಟು, ಎಲ್ಲೊ ಹುದುಗಿ ಹೋಗಿರಬೇಕು. ಮತ್ತೇ ಕಾಲ ಬಂದಾಗ ಹಸುರಿನಂತೆ ಚಿಗರೊಡೆದು ಅವನಿಗೆ ಬದುಕಿನ ಹಾದಿ ತೋರಿಸಬಹುದು.

ಲಕ್ಷ್ಮೀಬಾಯಿ ಮಲಗಿದಲ್ಲೇ ಹತ್ತಿರ ಕುಳಿತ ಮಗನ ತಲೆ ಮೇಲೆ ಕೈಯಾಡಿಸಿದಳು. "ಬಾಳಾ ದನಕ್ಕ ಮೇವು, ನೀರು ಕೊಟ್ಟೆನಪ್ಪಾ"

"ಹೂಂ ನವ್ವಾ, ಕೊಟ್ಟೀನಿ ಅವ್ವಾ, ಅವು ನನ್ನ ನೋಡಿದ ಕೂಡ್ಲೆ ಅಂಬಾ ಅಂತ ಹತ್ತಿರ ಬಂದು ನನ್ನ ಮೈ ನೆಕ್ಕತಾವ"

"ಹೌದಪ್ಪಾ ಅವು ತೋರಿಸು ಪ್ರೀತಿ ಅಂತಃಕರಣ ಅಂದ್ರ ಹಂಗ ಇರ್ತಾವ. ಮೂಕ ಪ್ರಾಣಿ ಅವು. ವೇಂಕಣ್ಣ ಆಕಳಾ ಅಂದ್ರ ದೇವರ ಇದ್ಧಂಗಪಾ ಅದರಾಗ ಮೂವತ್ಮೂರು ಕೋಟಿ ದೇವರು ಇರ್ತಾನ. ಕಾಮಧೇನು ಅವು ನಾ ಹೋದ್ಯಂದ್ರ, ದಿನಾ ಅವಕ ಮೇವು ಹಾಕೂದು, ನೀರು ಕೊಡುದು ಗೋಗ್ರಾಸ ಕೊಡುದು ತಪ್ಪಸಬ್ಯಾಡಾ ಕಂದಾ"

"ಇಲ್ಲವ್ವಾ ಕೊಡ್ತೀನಿ. ಅದ್ರ ನೀ ಎಲ್ಲೆ ಹೋಗ್ತಿಯೆವ್ವಾ, ನೀ ಎಲ್ಲೆ ಹೋದ್ರು ನನ್ನ ಕರ್ಕೊಂಡು ಹೋಗು ಬಿಟ್ಟು ಹೋಗಬ್ಯಾಡ ಮತ್ತ"

"ಹುಚ್ಚಾ ಹೋದಲ್ಲೆಲ್ಲಾ ಎಲ್ಲಿ ಕರ್ಕೊಂಡು ಹೋಗ್ಲಿಕೆ ಆಗ್ತದಪ್ಪಾ. ಮತ್ತ ಬರಬಾರ್ದ ಜಾಗಾಕ ಹೋಗು ಹಾದಿ ನಂದು. "ನಾ ಹೋಗುದ್ರಾಗ ನಿನ್ನ ಮುಂಜವಿ ಮಾಡಿಬಿಡು ಅಂತ ಹೇಳ್ಬೆಕಪಾ" ಎಂದು ಅವ್ವ ನಿಟ್ಟುಸುರು ಬಿಟ್ಟು, ಗೋಡೆ ತಿರುಗಿ ಕಣ್ಣೊರಿಸಿಕೊಂಡಳು. ಅವ್ವನ ಕಣ್ಣೀರನ್ನು ಮೌನವಾಗೇ ನೋಡುತ್ತಲೆ ಇದ್ದ ಅವನು.

ಅವ್ವ ಹಾಸಿಗೆ ಹಿಡಿದು ಮಲಗಿದ ಮೇಲೆ ಯಾಕೆ ತನಗೆ ನೆಲದ ಮೇಲೆ ಗಟ್ಟಿಯಾಗಿ ನಿಂತಂತೆ ಅನಿಸುವುದೇ ಇಲ್ಲ. ಆಕೆ ಹಾಸಿಗೆ ಹಿಡಿದು ಮಲಗಿದರೂ ಗಂಡ-ಮಕ್ಕಳಿಗಾಗಿ ಕೈಲಾಗದಿದ್ದರೂ, ಮಡಿಯಿಂದ ಅಡಿಗೆ ಮಾಡಿ, ನೈವೇದ್ಯಕ್ಕೆ ತಂದಿಡುತ್ತಾಳೆ. ದೇವರ ಪೂಜೆಗೆ ತಯಾರು ಮಾಡುತ್ತಾಳೆ. ತಾನು ಅವಳ ಹಿಂದೆ ಹಿಂದೆ ತಿರುಗಿ "ಅವ್ವಾ ನೀ ದಣಿಬ್ಯಾಡಾ. ನಾನು ನಿನ್ನ ಜೋಡಿ ಕೆಲಸ ಮಾಡ್ತೀನಿ" ಎನ್ನುತ್ತ ಅವಳ ಹಿಂದೆ, ಹಿಂದೆ ಓಡಾಡುತ್ತಾನೆ. ದೇವರ ಮನೆ ಕಸ, ಗ್ವಾಡ್ಲಿ ಕಸ ಎಂದು ಕೈ ಹಚ್ಚುತ್ತಾನೆ. "ಎಂಥಾ ಶ್ಯಾಣಾ ಕೂಸೋ ವೇಂಕಣ್ಣ ನೀನು" ಎಂದು ಅವ್ವ ನಗಲಾರದೆ ನಕ್ಕರೆ "ಹೋಗುವಾ ನಾ ಎಂಥಾ ಕೂಸು ನನಗೂ ಎಳು ವರ್ಷ ಆದು. ಮುಂಜವಿ ಮಾಡೂಣಂತಿ ಇನ್ನು ಮ್ಯಾಲೆ ಅಣ್ಣನ್ನ ಜೋಡಿ ಗುರುಕುಲಕ ಹೋಗಂತಿ" ಎಂದು ನಗುತ್ತಾನೆ. ಆದರೂ ಅವ್ವ, ಆವಾಗಾಗ ನಿರ್ವಿಣ್ಣವಾಗಿ ಉಶ್ಶೆಂದು ಮಲಗುತ್ತಾಳೆ. ಹತ್ತಿರ ಕುಳಿತ ಮಗನ ಮೈದಡವುತ್ತಾಳೆ. "ನೀ ಶ್ಯಾಣಾ ಆಗ್ಬೇಕಪಾ, ರಾಘಣ್ಣ ಗತೆ, ವೇದ, ಮಂತ್ರ, ಸಂಸ್ಕೃತ ಕಲೀಬೇಕು. ಜೀವನದ ರೀತಿ ನೀತಿ ಧರ್ಮ ಕಲಿಬೇಕು. ನಾಕ ಮಂದಿಗೆ ಉಪಯೋಗ ಆಗುಹಂಗ ಬದುಕ ಬೇಕು" ಎನ್ನುತ್ತಾಳೆ. ಮುಗ್ಧವಾಗಿ

ಪಿಳಿ–ಪಿಳಿ ತನ್ನ ಮುಖ ನೋಡುತ್ತಿದ್ದ ಮಗನ ಕೈಹಿಡಿದು, “ಈ ಕೈಯಿಂದ ನಾಕ ಜನಕ್ಕೆ, ಉಪಕಾರಾ ಆಗ್ಬೇಕು ಎನಪಾ” ಎನ್ನುತ್ತಾಳೆ. ಮತ್ತೆ ಮತ್ತೆ ತನ್ನತಾನೇ ಮಾತನಾಡುತ್ತಾಳೆ.

“ನೀ ನನ್ನ ಹೊಟ್ಟ್ಯಾಗಿದ್ದಾಗ ನಿಮ್ಮಪ್ಪ ಹೇಳ್ತಿದ್ರು ಕಂದ. . .ಲಕ್ಷ್ಮೀ. ಭಗವಂತಾ ಯಾವದೋ ಬೆಳಕಿನ ಚೈತನ್ಯಾನ. ನಿನ್ನ ಗರ್ಭದೊಳಗ ಇಟ್ಟಾನ. ಅದು ಸಾಮಾನ್ಯ ಜೀವಲ್ಲ ಅಂತಿದ್ರು ಆದರ ಕೂಸು. ಆ ಬೆಳಕು ಎಂಥಾದ್ದು ಅಂತ ನೋಡು ಪುಣ್ಯ ನನಗ ಕೊಟ್ಟಾನೋ ಇಲ್ಲೋ ದೇವರು” ಎನ್ನುತ್ತ, ಮತ್ತೆ ಹಸುವಿನಂಥೆ ಸೌಮ್ಯ ಮುಖ ಸವರಿ.

“ವೇಂಕಣ್ಣ, ಸೀತಕ್ಕ ಯಾವಾಗ್ಲೂ ಹೇಳ್ತರ್ತಾರ. ಲಕ್ಷ್ಮಿ ವೇಂಕಣ್ಣನ ಮುಖ, ನೋಡ್ದಿಲ್ಲೊ ಎನು ತೇಜ ಅದ, ಎಂಥಾ ಶಾಂತ ಸ್ವಭಾವಾ. ಒಂದೀನಾರ ಎದಕರ, ಅಳು, ಹಟ, ಅಕ್ಕಸ ಊಹುಂ. ಕೇಳಬ್ಯಾಡಾ ಬ್ಹಾಳ ಸಂಬಾಯಿತವಾ. ಹುಡುಗಾ” ಅಂತಾರ. ಆದ್ರ ವೇಂಕಣ್ಣ ಇಂಥಾ ಸಂಭಾಯಿತನ ಮುಂದ ನಿನಗೆ ಮುಳುವಾಗಬಾರ್ದು.

ಎನು ಹೇಳುತ್ತಾನೆ ಹುಡುಗ? ಅವ್ವನ ಮಾತಿನ ಹಿಂದಿದ್ದ ನೋವು ವೇದನೆ ಅರ್ಥವಾಗುತ್ತದೆ. ಅವ್ವನ ಪ್ರೀತಿ ಅಂತಃಕರಣದ ಸೆಲೆ ಅರ್ಥವಾಗುತ್ತದೆ. ಆದರೆ. ಅವ್ವ ಹೇಳುವ ಜಗತ್ತಿನ ರೀತಿ–ನೀತಿಯ ಬಗ್ಗೆ ತನಗೇನು ತಿಳಿದೀತು? ಕೇಳುತ್ತ ಕೇಳುತ್ತ ಹಾಗೆಯೇ, ಅವ್ವನ ಮಡಿಲಲ್ಲೇ ನಿದ್ದೆಹೋಗುತ್ತಿದ್ದ.

ಇಂಥಹದೇ ಒಂದು ಮುಂಜಾನೆ ಇರಬಹುದು. ಬೆಳ್ಳಂಬೆಳಗು ಆಗಸದಲ್ಲಿ ಹಕ್ಕಿಗಳು ಚಿಲಿಪಿಲಿಗುಟ್ಟುತ್ತ, ಆಹಾರವನ್ನು ಹುಡುಕುತ್ತ ಹಿಂಡು, ಹಿಂಡಾಗಿ ಹಾರಿಹೋಗುತ್ತೇವೆ. ನದಿಯ ಮೇಲಣ ಬೀಸುವ ತಂಪುಗಾಳಿ. ಗುಡ್ಡದಲ್ಲಿ ಸೂರ್ಯ ಈಗಲೋ ಆಗಲೋ ಹಣಿಕೆ ಹಾಕಿ ಬರುವಂತೆ ಬರುತ್ತಿದ್ದಾನೆ. ಥೇಟು ಎಳೆಕಂದನಂತೆ ಕಾಣಿಸುತ್ತಿದ್ದಾನೆ.

ನರಸಪ್ಪಯ್ಯ ಸ್ನಾನ ಮುಗಿಸಿ ಮಂತ್ರ ಹೇಳುತ್ತೆ. ದೇವರಮನೆಗೆ ಬಂದು ದೇವರ ಕಟ್ಟೆಯ ಮೇಲೆ ಕೂತು, ದೇವರ ಪೆಟ್ಟಿಗೆ ತೆಗೆಯುತ್ತಿದ್ದಾರೆ. ಅದರ ಜೊತೆ ವಾಯುಸ್ತುತಿ ಅವರ ಬಾಯಿಂದ ನಿರ್ಗಳವಾಗಿ ಬರುತ್ತಿದೆ. ಸಾಣೆಕಲ್ಲು, ಗಂಧಕೊರಡು ತೆಗೆದುಕೊಂಡು ಗಂಧ ತೇಯುತ್ತಿದ್ದಾರೆ. ಹೆಂಡತಿ ಹಾಸಿಗೆ ಹಿಡಿದು ಮಲಗಿದರೂ ದಿನದ ಕಾರ್ಯಗಳನ್ನು ಬಿಟ್ಟಿರಲಿಲ್ಲ. ಆಗಲೇ ಎದ್ದು ಮೈತೊಳೆದು ದೇವರ ಪೂಜೆಗಾಗಿ ತಯಾರಿ ಮಾಡಿಟ್ಟಿದ್ದರು. ಅಂಗಳದಲ್ಲಿ ಬಿಟ್ಟ ಮಲ್ಲಿಗೆ ಸೇವಂತಿಗೆ ಜಾಜಿ ಎಂದು ಹೂವು ಹರಿದು ಹೂವಿನ ಬುಟ್ಟಿ ತುಂಬಿಟ್ಟಿದ್ದಾಳೆ. ಲಕ–ಲಕ ಹೊಳೆಯುವ ದೇವರ ಉಪಕರಣೆ ವೈಶ್ವದೇವಕ್ಕಾಗಿ ಅನ್ನದ ಪಾತೇಲಿ ಅಭಿಷೇಕಕ್ಕಾಗಿ ಹಾಲು.

ಯಾಕೋ ಇತ್ತಿತ್ತಲಾಗಿ ತುಂಬ ಹೈರಾಣವಾಗಿ ಬಿಟ್ಟಿದ್ದಾಳೆ. ಬದುಕುವ ಆಶೆಯನ್ನು ಬಿಟ್ಟಿದ್ದಾಳೆ. “ಬ್ಯಾಡ ಲಕ್ಷ್ಮೀ ಇಂಥಾ ನಿರಾಶಾ ಇಟ್ಕೋಬ್ಯಾಡಾ. ನಮ್ಮ ಸಲುವಾಗಿ ಅಲ್ಲಿದ್ರೂ ಮಕ್ಕಳಿಗೆ ತಾಯನ್ನು ವಸ್ತು ಬೇಕು” ಎಂದಿದ್ದೆ. “ತಂದಿ–ತಾಯಿ ಎಲ್ಲ ಅವನ” ಎಂದಿದ್ದಳು. ನರಸಪ್ಪಯ್ಯ ದೇವರಿಗೆ ಅಭಿಷೇಕ ಮಾಡಿ ಮತ್ತೆ ತೊಳೆದು, ಗಂಧ ಹಚ್ಚಿ, ವಿಷ್ಣು ಸಹಸ್ರನಾಮ ಹೇಳುತ್ತಲೇ ಇದ್ದಾರೆ.



ತನ್ನ ಮಂತ್ರ ಸುರುವಾದರೇ ಸಾಕು ದೇವರ ಮುಂದೆ ಬಂದು ಕೈ ಮುಗಿದುಕೊಂಡು, ಕೂಡುವ ಹೆಂಡತಿ ಇವತ್ತು ಯಾಕೋ ಬರಲಿಲ್ಲ.

“ವೇಂಕಣ್ಣ.... ಅವ್ವ ಎಲ್ಲೊ?” ಎಂದರು. ನರಸಪ್ಪಯ್ಯ

“ಅವ್ವಾ ಮತ್ತೆ ಹೋಗಿ ಮಲಕೊಂಡ್ಲಪ್ಪಾ. ಮುಂಜಾನಿಂದ ಯಾಕೋ ನೆಳ್ಳಕೋತ ಕೆಲಸ ಮಾಡ್ತಿದ್ಲು. . .ಎಬ್ಬಸಲೇನಪಾ”

“ಬ್ಯಾಡಬಿಡು ಪೂಜಿ ಆದ್ಮೇಲೆ. ನಾನು ಹೋಗಿ ಎಬ್ಬಿಸಿ ತೀರ್ಥಾ ಕೊಡ್ತೀನಿ, ರಾಘು ಎಲ್ಲೆ?”

“ಗೊತ್ತಿಲ್ಲಪಾ ಎಲ್ಲೋ ಹೋದಾ, ನಾ ಅವ್ವನ ಹತ್ರ ಕೊಡ್ತೀನಿ. ಹಗಲೆಲ್ಲ ನೀರು ಕೇಳ್ತಿರ್ತಾಳ” ಎಂದು, ವೇಂಕಣ್ಣ ಮತ್ತೆ ಹೋಗಿ ಅವ್ವನ ಬಾಜೂ ಕುಳಿತ. ಅವ್ವನ ಹತ್ರ ಕೂತ್ರ ಎಷ್ಟು ಬೆಚ್ಚಗ ಅನಸ್ತದ. “ಅವ್ವಾ ನಿನ್ನ ಹತ್ರ ಕೂಡ್ಲೇನ ಅಂದ್ರ” “ಕೂಡಪಾ ಇನ್ನೆಷ್ಟು ದಿವಸ ನೀ ಕೂತಿ? ನಿಮ್ಮಿಂದ, ಬದುಕು ಮಾರ್ಗ ಬಿಟ್ಟು ದೂರ ಹೊಂಟಾಕಿ ನಾನು” ಎನ್ನುತ್ತಿದ್ದಳು. ಮತ್ತೆ ತನ್ನ ಗದ್ದ ತುಟಿ ಹಿಡಿದು, “ವೇಂಕಣ್ಣಾ, ಕಂದಾ ಇತ್ತಿತ್ತಲಾಗ ನನ್ನ ಸ್ಥಿತಿ ನೋಡಿದ್ರ, ನಾ ಬ್ಹಾಳಾ ದಿವಸ ಇರಂಗಿಲ್ಲ ಅನಸ್ತದಪಾ. ಯಾಕಂದ್ರ ಗಿಡಕ್ಕೆ ಗೆದ್ದಲ ಹತ್ತಿದ್ಹಂಗ. ಒಳಂಗಿದೊಳಗೆ ಯಾವದೋ ಬ್ಯಾನಿ ನನ್ನ ಗರಗಸೆ ತಗೊಂಡು ಕೊರದ್ಹಂಗ ಕೊರಿಲಿಕ್ಕೆ ಹತ್ತೇದ. ಇಷ್ಟು ಸಣ್ಣ ವಯಸ್ಸಿಗೆ ನೀನು ಅನಾಥ. ಆಗಬೇಕಾಗ್ತದಪಾ” ಎನ್ನುತ್ತಿದ್ದರು.

“ಅನಾಥ ಅಂದ್ರ ಎನವಾ?”

“ಬ್ಯಾಡಪಾ ನೀ ಅನಾಥ ಆಗಬಾರ್ದು, ವೇಂಕಣ್ಣ ದೇವರ ಒಂದು ರೀತಿಯಿಂದ ಎಲ್ಲಾ ಜೀವಕ್ಕೂ, ಅವ್ವಾ ಅಪ್ಪಾ ಇದ್ದಂಗ ಅವನ ಸೃಷ್ಟಿಯೊಳಗ ಯಾರೂ ಅನಾಥ ಆಗಂಗಿಲ್ಲಪ್ಪಾ. ತಾನ ಸೃಷ್ಟಿಸಿದ ಜೀವಕ್ಕ ತಾನ ಹಿಂದೆ ನಿಂತು ರಕ್ಷಾ ಮಾಡ್ತಾನ. ಅದಕ್ಕೆ ಕೂಸು, ನಾ ನಿನ್ನ ಬಿಟ್ಟು ಹೋದೆ ಅಂದ್ರ, ಆ ಭಗವಂತನ ನಿನ್ನ ತಂದಿ–ತಾಯಿ ಅಂತ ತಿಳ್ಕೋಳಪಾ ಅನಾಥೋ ದೇವ ರಕ್ಷಕ ಅಂತಾರ”

ಅವ್ವ ಹೇಳುತ್ತಿದ್ದ ತತ್ವ, ತಾರ್ಕಿಕ ವೇದಾಂತ. ಆ ಹುಡುಗನಿಗೆ ಎಲ್ಲಿ ತಿಳಿಯಬೇಕು. ಆದರೆ ಮನಸ್ಸಿನ ಎಲ್ಲೋ ಒಂದು ಕಡೆ ಅವ್ವನ ಮಾತುಗಳು ನಿಧಿಯಂತೆ ಹೋಗಿ ಸೇರಿಕೊಳ್ಳುತ್ತಿದ್ದವು. ಅಭೋದ ವಯಸ್ಸು ಅವನದು ಕೇಳುತ್ತಿದ್ದ.

“ನಮ್ಮನ್ನ ಬಿಟ್ಟು ಹೊಗ್ತಿನಿ ಅಂತ ಎಲ್ಲಿ ಹೋಗ್ತೀಯವ್ವಾ?”

“ದೇವರ ಕಡೆ ಕಂದಾ, ಈ ಭೂಮಿ ಋಣಾ. ಆಯಸ್ಸು ಮುಗಿತಂದ್ರ, ಎಲ್ಲಾರೂ ಅವನ ಕಡೆ ಹೊಂಡೂದ, ಅಂಪಾ ಬಾ ಅಂದ್ರ, ನಮಗೆ ನಿಂದ್ರಲಿಕ್ಕೆ ಆಗ್ತದೇನು?”

“ಎಲ್ಲಿದ್ದಾನವ್ವಾ . . .ಅಂಪಾ?”

“ಎಲ್ಲಾ ಕಡೆ ಇದ್ದಾನಪ್ಪಾ ಅಂಪಾ. ಸರ್ವಾಂತರ್ಯಾಮಿ ನೀ ಎಲ್ಲಿ ನಿಂತು ಕರೀತಿ ಅಲ್ಲಿ ಬರ್ತಾನ. ಪ್ರಲ್ಹಾದನ ಕಥೆ ಕೇಳಿಯಿಲ್ಲೊ? ನಿಮ್ಮಪ್ಪ ಪುರಾಣ ಹೇಳೂಮುಂದ ಕೇಳಿರಬೇಕಲ್ಲಾ.

ಅವನೂ ನಿನ್ನಷ್ಟ ಇದ್ದ. ಅವನಪ್ಪ ದೇವರಂದ್ರ ಮೈಲಿದೂರ ಹಾರ್‍ತಿದ್ದ, ಹೇಳಿ–ಕೇಳಿ ರಾಕ್ಷಸ ವಂಶದಂವಾ ಆದ್ರ ಪ್ರಲ್ಹಾದ ಹರಿಭಕ್ತ. ಅದsssಕ ತಂದಿಗೆ ಮಗನ ಕಂಡ್ರ ಆಗ್ತೀದ್ದಿಲ್ಲ. ಒಂದಿವ್ಸ ಮಗನ ನಿಂದ್ರಸಿ ಹರಿ ಹರಿ ಅಂತಿ ಎಲ್ಲಿದ್ದಾನೋ ನಿನ್ನ ಹರಿ ತೋರಸು. ಕಿಟಕ್ಯಾಗ ಇದ್ದಾನೇನು? ಬಾಗಲದಾಗ ಇದ್ದಾನೇನು? ಈ ಕಂಬದಾಗ ಇದ್ದಾನೇನು ಅಂತ ಘಟ್ಟಿಸಿ ಕೇಳಿದಾ.

"ಹೂಂ, ಹೌದು ಇದ್ದಾನ. ಈ ಕಂಬದಾಗ ಅಂದ ಮಗ.

"ಹೌದ, ಎಲ್ಲಿದ್ದಾನ ಹಂಗಾರ. ತಗೋ ಅಂತ ಕೈಯಾಗಿನ ಗದಾ ತಗೊಂಡು ಕಂಬಕ್ಕ ಹೊಡದಾ ನೋಡು. ಕಂಬಾ ಒಡದು ಬಂದ ನೋಡು ಹರಿ ನರಸಿಂಹ ಅವತಾರದಾಗ. ಕಾಯ್ದ ಪ್ರಲ್ಹಾದನ್ನ ಹಂಗನಪ್ಪಾ ವೇಂಕಣ್ಣ ನೀ ಎಲ್ಲೇ ನಿಂತು ಬಂದು ಕಾಯಪ್ಪಾ ಅಂದ್ರ ಬರ್‍ತಾನ" ಎನ್ನುತ್ತಿದ್ದಳು ಅವ್ವ.

ಅಂಥ ಅವ್ವ, ಇವತ್ತು ಏನೂ ಹೇಳದೆ ಯಾಕೆ ಕಣ್ಮುಚ್ಚಿ ಮಲಗಿದ್ದಾಳೆ. ಗಡದ್ದು ನಿದ್ದೆ ಹತ್ತಿದಂತೆ. ಅವ್ವ ನಸುಕಿನಲ್ಲಿ ಎದ್ದ ನೆನಪು ತಾನು ನಿದ್ದೆಗಣ್ಣಲ್ಲಿದ್ದೆ.

"ವೇಂಕಣ್ಣ, ನಿಮ್ಮವ್ವಗ ಎಚ್ಚರಾಗೇದೇನಪಾ? ಎಬ್ಬಿಸು ತೀರ್ಥಾ ಕೊಡ್ತೀನಿ. ಲಕ್ಷ್ಮಿ ಏಳು. . .ಈಕಾ. .ತೀರ್ಥ ತಗೋ ಅಲ್ಲ ದೇವರ ಪೂಜಾ. ನೈವೇದ್ಯಾಕ ಎಲ್ಲಾ ಮಾಡಿಟ್ಟು ಮತ್ತೆ ಮಲಕೊಂಡಿಯಲ್ಲಾ. ಹಂಗೇಲ್ಲ ಮಲಕೊಳ್ಳಾಕಿ ಅಲ್ಲ ನೀನು. ಎಳು, ನಿತ್ರಾಣ ಆಗಿದ್ರ ತೀರ್ಥಾ ತಗೊಂಡು ಅಲ್ಲೇ ಗ್ವಾಡಿಗೆ ಆನಿಸಿಕೊಂಡು ಕೂಡು."

ಊಹುಂ ಈ ಕಡೆಯ ಅರಿವಿಲ್ಲದೆ ಮಲಗಿದ್ದಾಳೆ ಅವಳು

"ವೇಂಕಣ್ಣಾ ಎಬ್ಬಸಪಾ ಆಕಿನ್ನ"

ವೇಂಕಣ್ಣ ಅವ್ವನ ಮುಖ ಸವರಿ, ಕೈಹಿಡಿದು ಅಲುಗಿಸುತ್ತಿದ್ದಾನೆ.

"ಅವ್ವಾ ಎಳವ್ವಾ ಅಪ್ಪ ತೀರ್ಥ ಕೊಡ್ತಾರಂತ, ಎಳು"

"ಲಕ್ಷ್ಮಿ, ಲಕ್ಷ್ಮಿ"

"ಅವ್ವಾ, ಅವ್ವಾ"

ಹೊರಗೆ ಹೋಗಿದ್ದ ರಾಘು. ಅಂಗಳ ದಾಟಿ ಮೆಟ್ಟಲೇರಿ ಒಳಬಂದ. ತಂದೆ ಮಗನನ್ನು ನೋಡಿ ಹೇಳಿದರು.

"ರಾಘೂ, ನಿಮ್ಮವ್ವಗ ಗಡದ್ದು ನಿದ್ದಿ ಹತ್ತೇದ ಕಾಣಸ್ತದ ಎಬ್ಬಸಪಾ, ತೀರ್ಥಾ ತಗೊಂಡು ಒಂದು ತುತ್ತು ಉಂಡು ಮಲಕ್ಕೊಳ್ಳಿ" ಎಂದರು.

ರಾಘು ಹತ್ತಿರ ಬಂದ. ಹತ್ತಿರ ಕುಳಿತು ಅವ್ವನ ಮೈ–ಕೈ ಅಲುಗಿಸಿದ.

"ಅವ್ವಾ, ಅವ್ವಾ" ಊಹುಂ, "ಅವ್ವಾ ಎಳವ್ವಾ" ಊಹುಂ

ಯಾಕೋ ನಿಂತಲ್ಲಿ ನಿಲ್ಲಲಾಗಲಿಲ್ಲ. ನರಸಪ್ಪಯ್ಯನಿಗೆ. ಯಾವದೋ ಒಂದು ಅರಿಯದ



ದುರಂತದ ಛಾಯೆ ಮನೆಯ ಅಂಗಳದ ಮೆಟ್ಟಲೇರಿ ಬಂದು ಮಡದಿಯನ್ನು ಆವರಿಸಿ ನಿಂತಿದೆ ಅನಿಸಿತು.

ತೀರ್ಥದ ತಟ್ಟೆ ಒಳಗಿಟ್ಟು ಬಂದು ನರಸಪ್ಪಯ್ಯ ತಾವೇ ಅವಳ ಹತ್ತಿರ ಕುಳಿತು ನಿಧಾನವಾಗಿ ಅವಳ ಮೈ–ಕೈ ಅಲುಗಿಸಿದರು.

"ಯಾಕ ಲಕ್ಷ್ಮೀ, ಹಿಂಗ ಮಲಕೊಂಡಿ. ಎಂಥಾ ನಿದ್ದಿ ಇದು ಎಳು"

ಊಹುಂ ಉಸಿರಿನ ಸದ್ದು ಕೂಡ ಇಲ್ಲದಂತೆ ಮೌನದ ಗುಹೆಯಲ್ಲಿ ಮುಚ್ಚಿಹೋಗಿದ್ದಾಳೆ. ಒಂದು ಗಳಿಗೆ ನರಸಪ್ಪಯ್ಯ ಹೆಂಡತಿಯ ಮುಖ ನೋಡಿದರು. ನಂತರ ಕುಸಿದವರಂತೆ ಹಿಂದೆ ಕುಳಿತು "ಲಕ್ಷ್ಮೀ, ನಮ್ಮನ್ನ ಬಿಟ್ಟು ನೀನು ಹಿಂಗ ಎಕಾಎಕಿ ಹೋಗ್ಬೇಕಾ? ವೇಂಕಣ್ಣನ ಸಲುವಾಗಿ ರಾಘೂನ ಸಲುವಾಗೇರೆ ನಿನಗೆ ಬದುಕು ಇಚ್ಛಾ ಆಗಲಿಲ್ಲ?

"ಅಪ್ಪಾ, ಏನಾತಪಾ?" ಕೇಳುತ್ತಿದ್ದಾನೆ ರಾಘು.

"ನಿಮ್ಮವ್ವ ಈ ಭೂಮಿ ಋಣಾ ಮುಗಿಸಿದ್ಲಪಾ, ಎಂಥಾ ಪುಣ್ಯವಂತಿ, ಸ್ನಾನಮಾಡಿದ್ಲು, ದೇವರ ಪೂಜಾಕ ಎಲ್ಲಾ ತಯಾರಿ ಮಾಡಿದ್ಲು. ನನ್ನ ಕೆಲಸ ನಾ ಮುಗಿಸಿನ್ರಿ. ಇನ್ನು ಎಲ್ಲಾ ನಿಮ್ದು ಅಂತ. ನನ್ನ ಮೈಮ್ಯಾಲೆ ಎಲ್ಲಾ ಹಾಕಿ ಹೋದ್ಲಪಾ"

"ಅಂದ್ರ"

"ರಾಘು, ನಿನಗ ಅರ್ಥ ಆಗ್ತದ. ಆಗೇದ. ನಿಮ್ಮವ್ವ ಇನ್ನ ಇಲ್ಲ ಅಂತ. ಆದ್ರ ಈ ವೇಂಕಣ್ಣಗ ಹ್ಯಾಂಗ ಬಿಡಿಸಿ ಹೇಳೋದು. ಹೋಗು ಹೋಗಿ ರಾಮಾಚಾರ್ಯನ ಮೂಲಿಮನಿ ಕೃಷ್ಣನ್ನ, ಹಂಗ ಸೀತಕ್ಕನ್ನೂ ಕರ್‍ಕೊಂಡು ಬಾಪಾ" ಎಂದು. ಶ್ರೀ ಹರಿ ಎನು ನಿನ್ನ ಇಚ್ಛಾ ಎಂದು ಅಲ್ಲೆ ಕಂಬಕ್ಕೊರಗಿ ಉಸ್ಸೆಂದು ಕುಳಿತರು.

ಮುಂದೆ ತಾಸಿನಲ್ಲೆ, ಓಣಿಯ ಎಲ್ಲ ಜನ ನರಸಪ್ಪಯ್ಯನ ಮನೆ ಅಂಗಳದಲ್ಲಿ ಬಂದು ನಿಂತರು.

"ಅವ್ವಯ್ಯಾ, ಎಂಥಾ ಪುಣ್ಯದ ಸಾವ ನಮ್ಮವ್ವಾ. ಮುತ್ತೈದ ಸಾವಿತ್ರಿ. ಎಲ್ಲಾರ ಮುಂದು ಬಟ್ಟು ಕುಂಕುಮ ಹಚಗೊಂಡು ದಂಡಿ ಹಾಕ್ಕೋಡು ನಡದ್ಲಾ" ಎನ್ನುವ ಹೆಣ್ಣುಮಕ್ಕಳು.

"ಆದ್ರ ವೇಂಕಣ್ಣ ಸಣ್ಣ ಹುಡುಗಾ, ರಾಘು ಈಗಿನ್ನ ಹರೇಕ ಕಾಲಿಂಡಾವಾ. ನರಸಪ್ಪಯ್ಯಂತೂ, ಕೈಸೋತಾರ ಇನ್ನೊಂದು ತಿಂಗಳೊಪ್ಪತ್ತು ಇದ್ದಿದ್ರಾಗಿತ್ತು" ಹೇಳುತ್ತ ಹೇಳುತ್ತ ಸೀತಕ್ಕ ಕಣ್ಣೊರೆಸಿಕೊಂಡಳು. ಬದುಕಿನ ವಿಚಿತ್ರವೇ ಹಾಗೆ ಹೋದ ಮೇಲೆ. ಇನ್ನು ನಾಕು ದಿವಸ, ಬದುಕ ಬೇಕಿತ್ತು ಎನ್ನುವ ವಾಂಛಲ್ಯ ಬದುಕಿನ ಮಂತ್ರ ಕೂಡ ಆಗಿತ್ತು.

ಕಾಖಂಡಕಿ ಬಿಟ್ಟು ಬಂದ ಮೇಲೆ ಈ ಓಣಿಯ ಹೆಣ್ಣುಮಕ್ಕಳಿಗೆ ಅಕ್ಕ ತಂಗಿಯಂತಿದ್ದಳು. ಈ ವೇಂಕಣ್ಣನನ್ನು ಬಸಿರಿದ್ದಾಗ ತನ್ನ ಕೈ ಹಿಡಿದು, "ಸೀತಕ್ಕ ನನಗ ನನ್ನವರು, ತನ್ನವರು ಅಂತ ಯಾರಿಲ್ಲ. ಬರೂ ಮುಂದಿನ ದಿನಗೋಳೇಲ್ಲಾ ಹ್ಯಾಂಗ ಕಳೀಲಿ. ರಾಘು ಮಗಳ ಆಗಿದ್ರೆ, ಬಾಣಂತನ ಅರೇ ಮಾಡ್ತಿದ್ದ. ನನಗೆ ಇದೇ ಚಿಂತಿ ಆಗೇದ್ರಿ" ಎಂದಿದ್ದರು.

"ಹುಚ್ಚಿ, ಅದಕ್ಯಾಕ ಚಿಂತಿ ಮಾಡ್ತಿ. ಯಾಕ ನಾವೆಲ್ಲ ಇಲ್ಲೇನು?" ಎಂದಿದ್ದೆ. ಇದೇ ಕೈಯಿಂದ ಅವಳ ತುಂಬಿದ ಹೊಟ್ಟೆ ಸವರಿ ಕೂಸನ್ನ ಹೊರತೆಗೆದಿದ್ದೆ. ಕೂಸನ್ನು ತೊಳೆದು ಅವಳ ಮಡಿಲಲ್ಲಿಟ್ಟಾಗ ತನ್ನ ಕೈಹಿಡಿದು ಅತ್ತಿದ್ದಳು. "ಸೀತಕ್ಕ ಮುಂದಿನ ಜನ್ಮದಾಗ ನಿಮ್ಮ ಮಗಳಾಗೇ ಹುಟ್ಟೇನಿ. ಹುಟ್ತ ಅವ್ವನ ಕಳಕೊಂಡಾಕೆ ನಾನು. ತಾಯಿ ಅಂತಃಕರಣ ಎನಂತ ನೀವು ತೋರಿಸಿದ್ರಿ" ಎನ್ನುತ್ತಿದ್ದವಳು. ಈಗ ಅದೇ ತಾಯಿ ಇಲ್ಲದ ಪರದೇಶೀತನವನ್ನು ತನ್ನ ಮಕ್ಕಳಿಗೆ ಬಿಟ್ಟು ಹೋದಳಲ್ಲ. ಸೀತಕ್ಕ ಅವಳ ಮುಂದೆ ಕುಳಿತು ಮುಖದ ತುಂಬ ಕೈಯಾಡಿಸಿ ಅತ್ತಿದ್ದಳು.

"ಯಾಕ ಹಿಂಗ ಮಾಡ್ದೇವ್ವಾ, ಲಕ್ಷ್ಮೀ, ಎಳು ಎದ್ದು ವೆಂಕಣ್ಣನ ಮುಖಾನರೇ ನೋಡು. ಹ್ಯಾಂಗ ಈಗ ಪರದೇಶಿ ಕಳೇ ಸುರಿತದ" ಎಂದರು. ಮತ್ತೆ ಅವ್ವನ ಬಾಜೂ ಕುಳಿತಿದ್ದ ವೇಂಕಣ್ಣನನ್ನು ಕರೆದು ತಮ್ಮ ಹತ್ತಿರ ಕೂಡಿಸಿಕೊಂಡು ಅವನ ಗದ್ದ, ಮುಖ ಸವರುತ್ತಾ ಅತ್ತಿದ್ದರು.

ಹೊರಗೆ ಮಾತನಾಡಲು ಗೊತ್ತಾಗದಿದ್ದರೂ ಒಳಗೊಳಗೆ ವೇಂಕಣ್ಣನ ಮನಸ್ಸಿನಲ್ಲಿ ಯಾವದೋ ಒಂದು ಹೇಳಲಾರದ ವೇದನೆ ದುಃಖ ಎದೆ ತುಂಬಿದಂತೆ ತಾನು ಆಳ-ಪಾತಾಳದಲ್ಲಿ ಬಿದ್ದಂತೆ ತಾನು ಅವ್ವಾ, ಅವ್ವಾ ಎನ್ನುತ್ತಿದ್ದರೂ, ಎತ್ತಿಕೊಳ್ಳಲು ಅವ್ವ ಕೂಡ ಬಾರದೆ ದೂರ ದೂರ ಹೋದಂತೆ.

ಹೌದು

ಅವ್ವ ಹೋದಳು. ದಿನಗಳು ಕೂಡ ಒಂದೊಂದಾಗಿ ಸಂದು ಹೋದವು. ಎನಿದ್ದವು. ಹಗಲು-ರಾತ್ರಿಗಳೆಂಬ ದಿನಗಳಲ್ಲಿ ? ಎಲ್ಲಾ ಬಟಾ ಬಯಲು. ಎನು ಕಾಣದ ಕುರುಡು ನಡಿಗೆಯಂತೆ ತನ್ನದು. ಯಾವಾಗಲೂ ತನ್ನ ಕೈ ಹಿಡಿದುಕೊಂಡು ನಡೆಯುತ್ತಿದ್ದ ಅವ್ವ, ಒಮ್ಮೆಲೆ ತನ್ನ ಕೈ ಕೊಸಿರಿಕೊಂಡು ಹೋದಳು. ಎಷ್ಟು ಹುಡುಕಾಡುತ್ತಿದ್ದೆ. ತಾನು ಆ ಕೈಗಳನ್ನು ಮತ್ತೆ ಮತ್ತೆ ಹಿಡಿದುಕೊಳ್ಳಬೇಕೆಂದು.

ಅಪ್ಪ ಈಗ ಮೊದಲಿನಂತಿಲ್ಲ. ಯಾರೊಡನೆಯೂ ಮಾತಿಲ್ಲ ಕತೆಯಿಲ್ಲ. ತಾನಾಯ್ತು, ತನ್ನ ವೇದಾಧ್ಯಯನ, ಹರಿಕಥೆ ಶ್ರವಣ, ಪ್ರವಚನ, ಪೂಜೆ, ಪುನಸ್ಕಾರ ಇದರಲ್ಲೇ ಹಗಲು-ಮಧ್ಯಾನ್ಹ-ರಾತ್ರಿ ಎಂದು ಕಳೆಯುತ್ತಾರೆ. ಓಣಿಯ ಹೆಣ್ಣುಮಗಳೊಬ್ಬಳು ಬಂದು ಅಡಿಗೆ ಮಾಡಿಟ್ಟು ಹೋಗುತ್ತಿದ್ದಳು. ಬೆಳಗಾದರೆ ರಾಘಣ್ಣ, ತನ್ನ ಓದು, ಅಧ್ಯಯನ, ಗುರುಕುಲ ಎಂದು ಹೋಗುತ್ತಿದ್ದ. ಮನಸ್ಸಿಗೆ ಬಂದರೆ ಯಾವಾಗಲಾದರೂ ವೇಂಕಣ್ಣನನ್ನು ಕರೆದೊಯ್ಯುತ್ತಿದ್ದ. ಇಲ್ಲಾ. . "ನನಗ ಮತ್ತೆ ಬ್ಯಾರೆ ಕಡೆ ಕೆಲಸದ. ನೀ ಮನ್ಯಾಗ ಇರು" ಎಂದು ಹೋಗುತ್ತಿದ್ದ.

ಯಾಕೋ ಅಂಗಳ, ಪಡಸಾಲೆ, ನಡುಮನೆ, ಅಡಿಗೆಮನೆ ಎಲ್ಲ ಈಗ ಖಾಲಿ ಖಾಲಿ ಅನಿಸುತ್ತಿತ್ತು. ಅವನಿಗೆ ಮುಂಜಾನೆ ನಸಕು ಹರಿಯುವುದರೊಳಗೆ ಅವ್ವ ಎದ್ದು, ಉದಯರಾಗ ಹಾಡುತ್ತ, ದೇವರ ಮನೆ ಕಸ ಉಡುಗುವ ಅವ್ವ, ಥಳಿ ರಂಗೋಲಿ ಹಾಕಿ "ವೇಂಕಣ್ಣ ಬಾ ಕೂಸು, ಆಕಳ ಗ್ವಾದ್ಲಿ ಸ್ವಚ್ಛಮಾಡಿ, ಆಕಳಿಗೆ ಮೇವು ಹಾಕೋಣ" ಎನ್ನುತ್ತಿದ್ದಳು. "ಆಕಳಂದ್ರ ದೇವರ ಇದ್ಧಂಗ ವೇಂಕಣ್ಣ, ಅವುಗಳ ಸೇವಾ ನಾವು ಮಾಡಿದಷ್ಟು ಛಲೋ, ಮೂವತ್ಮೂರು



ಕೋಟಿ ದೇವರ ಸೇವಾ ಮಾಡಿದಷ್ಟು ಅನ್ನುತ್ತಿದ್ದಳು. ಆಕಳ ಪೂಜೆ ಮಾಡುತ್ತಿದ್ದಳು. ತಾನೇ ಹಾಲು ಹಿಂಡುತ್ತಿದ್ದಳು. ದಾನ ಕೊಡುವರು. ಛಲೋ ಮನಸಿಂದ ತಮಗೂ ಪುಣ್ಯ ಬರಲಿ ಅಂತ ನಿಮ್ಮಪ್ಪಗ ಗೋದಾನಾ ಮಾಡ್ಯಾರಪಾ, ಅದರ ತಕ್ಕ ನಾವು ಅವುಗಳ ಸೇವಾ ಮಾಡಿ, ಮನಿ ಮಕ್ಕಳ ಗತೆ ನೋಡ್ಕೊಬೇಕು" ಎನ್ನುತ್ತಿದ್ದಳು. ಅವ್ವ ಹೋದಮೇಲೆ ಆ ಮೂಕಪ್ರಾಣಿಗಳು ಮೇವು ನೀರು ಬಿಟ್ಟು, ಮೂಕವಾಗಿ ನಿಂತು, ತಮ್ಮ ನೋವನ್ನು ತೋಡಿಕೊಂಡಿದ್ದವು. ಎನೆಲ್ಲ ನೆನಪಾಗುತ್ತಿದೆ ಅವನಿಗೆ.

ಅವ್ವ ಮುಂಜಾನೆ ತನ್ನನ್ನು ಎಬ್ಬಿಸಿ, ಸ್ನಾನ ಮಾಡಿಸಿ, ಅದೇ ಪಡಸಾಲೆಯಲ್ಲಿ ತನ್ನನ್ನು ಕೂಡಿಸಿ. ದೇವರ ಮಂತ್ರಾ ಹೇಳಪಾ. ಆಮೇಲೆ ಅಳ್ಳಿಟ್ಟುಬೆಲ್ಲ ಕಲಿಸಿಕೊಡ್ತೀನಿ, ತಿಂದು ರಾಘಣ್ಣನ ಜೋಡಿ ನೀನು ಗುರುಕುಲಕ್ಕ ಹೋಗು" ಎನ್ನುತ್ತಿದ್ದಳು. ವೇಂಕಣ್ಣ ನೀ ಶ್ಯಾಣಾ ಆಗ್ಬೇಕಪಾ. ದೊಡ್ಡಾಂವ ಆಗಿ ನಾಕ ಜನಕ್ಕ ಉಪಯೋಗ ಆಗ್ಬೇಕು. ನಿಮ್ಮಪ್ಪನ ಗತೆ ರಾಘಣ್ಣನ ಗತೆ ವೇದಾಧ್ಯನ ಮಾಡ್ಬೇಕು" ಎನ್ನುತ್ತ ತನ್ನ ಹಿಂದೆ ನೆರಳಿನಂತೆ. ಸದಾ ತನ್ನ ಆಸರೆಯಾಗಿದ್ದ ಅವ್ವ. ಈಗ ಇದ್ದಕ್ಕಿದ್ದಂತೆ ಎಲ್ಲಿ ಮಾಯವಾದಳು. ಅಪ್ಪನನ್ನು ಕೇಳಿದರೆ "ದೇವರ ಹತ್ರ ಹೋದ್ಲಪ್ಪಾ" ಎನ್ನುತ್ತಾರೆ. "ದೇವರು ಎಲ್ಲಿದ್ದಾನ ಹೇಳಪಾ, ಕರ್ಕೊಂಡು ಬರ್ತೀನಿ" ಎಂದರೆ ನೋವಿನ ನಗೆ ನಕ್ಕು

"ಹುಚ್ಚಪ್ಪಾ ಅಷ್ಟು ಸರಳೇನೊ ದೇವರನ್ನ ಹುಡುಕುದು. ಅಖಂಡ ವರ್ಷಾನುಗಟ್ಟಲೇ ತಪಸ್ಸು ಮಾಡಿದವ್ರಿಗೆ ಸಿಕ್ಕಲ್ಲ ಅಂವಾ" ಎನ್ನುತ್ತಾರೆ. "ಇಲ್ಲಪ್ಪಾ ಅವ್ವ ಹೇಳಿದ್ತಿದ್ಲು. ಅಂವಾ ಸರ್ವಾಂತರ್ಯಾಮಿ. ಎಲ್ಲಾ ಕಡೆ ಇರ್ತಾನ ಭಕ್ತಿಯಿಂದ ಹಂಬಲಿಸಿ ಕರದ್ರ ಬರ್ತಾನ ಅಂತಿದ್ಲು" ಎನ್ನುತ್ತಿದ್ದ ತಾನು. ಅಪ್ಪ ತನ್ನನ್ನು ಎದೆಗಪ್ಪಿಕೊಳ್ಳುತ್ತಿದ್ದ. ಕಣ್ಣೀರು ತರುತ್ತಿದ್ದ "ಹೌದಪಾ ಬರ್ತಾನ ಭಕ್ತಿಯಿಂದ ಕರದ್ರ ಎಲ್ಲಿದ್ರೂ ಓಡಿ ಬರ್ತಾನ" ಎನ್ನುತ್ತಿದ್ದ.

ಯಾವುದದು ಭಕ್ತಿ? ಎಂಥಹ ಭಕ್ತಿ? ಭಕ್ತಿಯ ಮೂಲ ಯಾವದು? ಇವೆಲ್ಲ ತನ್ನ ವಯಸ್ಸಿಗೆ, ಬುದ್ಧಿಗೆ ನಿಲುಕದ ಪ್ರಶ್ನೆಗಳಾಗುತ್ತಿದ್ದವು.

ಹಗಲು-ರಾತ್ರಿ ಕಳೆಯುವುದರಲ್ಲಿ, ಈಗೀಗ ಅವ್ವನ ನೆನಪು ಆಗಾಗ ಆಗುತ್ತಿತ್ತು. ಬದುಕು ಪರಿಸ್ಥಿತಿಗೆ ಅನುಗುಣವಾಗಿ ನಡೆಯುತ್ತಿತ್ತು. ಮನಸ್ಸು ಮಾತ್ರ ಅವ್ವ ಹೇಳಿದ. ಆ ಭಕ್ತಿಯ ಮೂಲವನ್ನು ದೇವರ ಅಗೋಚರದ ಅಸ್ತಿತ್ವವನ್ನು ಹುಡುಕಲು ಶುರುಮಾಡುತ್ತಿತ್ತು ಯಾವ ಕಂಬ, ಯಾವ ಗೋಡೆಯನ್ನೊಡೆದು ದೇವರನ್ನು ಕಾಣಲಿ? ಕೇಳಲಿ? ಎಲ್ಲಿದ್ದಿಯಪ್ಪಾ ಭಗವಂತಾ ಎಲ್ಲಾ ಕರ್ಕೊಂಡು ಹೋದಿ ನಮ್ಮವ್ವನ್ನ ಎಂದು.

ಆದರೆ ಆ ಪ್ರಶ್ನೆ ತನ್ನ ಅಂತರಂಗದಲ್ಲಿ ಸುತ್ತು ಹಾಕುತ್ತ ಹಾಕುತ್ತ ತನ್ನ ಸುಳಿಯೊಳಗೆ ಎಲ್ಲಿಯೋ ಕರೆದುಕೊಂಡು ಹೋಗುತ್ತಿತ್ತು.

ಬರು ಬರುತ್ತ ಅಪ್ಪ ಸಂಸಾರದಲ್ಲಿ ನಿರಾಸಕ್ತರಾದರು. ಅವ್ವ ಮಲಗಿದ್ದ ಜಾಗದಲ್ಲೇ ಜಪಮಾಲೆ ಹಿಡಿದು ಕೂಡುತ್ತಿದ್ದರು. ಮೂರು ಸಂಜೆಯ ಹೊತ್ತೂ ರಾಘಣ್ಣ ಕಂದೀಲು ಹಚ್ಚಿ, ಪಡಸಾಲೆ ಗೊಟಕ್ಕೆ ತೂಗುಹಾಕಿ, ಅಲ್ಲೇ ಥಾಲಿ ತಿರುಸೌಟ್ಟು ಇಟ್ಟುಕೊಂಡು ಸಂಜೆಯ ಸಂಧ್ಯಾನ ಮುಗಿಸುತ್ತಿದ್ದ. ಅಪ್ಪ ಕೂಡ ತಮ್ಮ ಸಂಧ್ಯಾವಂದನೆ ಮುಗಿಸಿ, ಅದೇ ಪಡಸಾಲೆ

ಕಟ್ಟೆಗೆ ಬಂದು ಕೂತು ತನಗೆ ದೇವರ ಶ್ಲೋಕಗಳನ್ನು ಹೇಳಿ ಕೊಡುವಾಗ ಎದುರು ಮನೆ ಸೀತಕ್ಕಜ್ಜಿ ಬಂದು ಕೂಡುತ್ತಿದ್ದರು. ಹಾಗೇ ಬರುವಾಗಲೆಲ್ಲಾ ಅವರ ಕೈಯಲ್ಲಿ ಏನಾದರೂ ತಿನಿಸಿನ ಡಬ್ಬಿ ಇದ್ದೇ ಇರುತ್ತಿತ್ತು.

"ಹೆಸರಿಟ್ಟಿನ ಉಂಡಿ ಮಾಡಿದ್ದೆ. ವೇಂಕಣ್ಣಗ ಸೇರ್ತದಲ್ಲಾ ತಂದೆ" ಎನ್ನುತ್ತ ಕಣ್ಣು ಮುಚ್ಚಿ, ತನ್ನದೇ ಲೋಕದಲ್ಲಿರುತ್ತಿದ್ದ ಅಪ್ಪನ ಮುಂದೆ ಕೂಡುತ್ತಿದ್ದರು.

"ಯಾಕಪಾ ಹಿಂಗ್ಯಾಕಿದ್ದಿ ನರಸಣ್ಣ"

"ನಿಮಗ ಗೊತ್ತಿಲ್ಲದ್ದು ಯಾವುದದ ಸೀತಕ್ಕ, ಇವರವ್ವ ಎಲ್ಲ ಲೋಕದ ಜಂಜಾಟಾ ನನ್ನ ಮ್ಯಾಲೆ ಹಾಕಿ ತಾನು ರಾಮ, ಕೃಷ್ಣ ಅಂತ ಪಾರಾದ್ಲು ಆದ್ರ ನಾನು? ನನಗೂ ವಯಸ್ಸಾತು. ಪರಮಾತ್ಮನ ಕಡೆ ಮನಸ್ಸು ಹರಲೀಕ್ಹತ್ತದೆ ಸಾಕು ಈ ಲೌಕಿಕದ ಜಂಜಾಟ, ಸಂಸಾರ ಜಂಜಾಟ ಅಂದ್ರ. ಅದಕ ಒಡ್ಡು ಹಾಕಿದ್ಹಂಗ ಈ ವೇಂಕಣ್ಣನ ಸ್ಥಿತಿ ತಡಿ ಹಾಕ್ತದ. ರಾಘಣ್ಣನ ಚಿಂತಿಲ್ಲ ನನಗ ಅಂವಾ ದೊಡ್ಡಾಂವಾ ಆಗ್ಯಾನ. ತಿಳುವಳಿಕಿ ಬಂದದ. ಆದ್ರ ಇಂವಾ? ಬ್ಯಾಡಾ ಸೀತಕ್ಕ ಈ ಮೋಹ ನನಗ ಎಷ್ಟು ದಿವಸಂತ. ಇದರ ಕಡೆಯೆಲ್ಲ ವ್ಯಾಮೋಹ ಇಟ್ಕೊಬೇಕು. ಅದಕ ಇದರಿಂದ ಮುಕ್ತಿ ಆಗೋ ಮಾರ್ಗ ಹಡುಕಲಿಕ್ಕೆ ಹತ್ತೀನಿ"

"ಏನಪಾ ಹಂಗಂದ್ರ? ಯಾವುದ್ರಿಂದ ಮುಕ್ತ ಆಗಬೇಕಂತ ಇದ್ದಿ? ಏನು ಮಾಡ್ಬೇಕಂತ ಮಾಡಿ?

"ದಿನಾ ಹಗಲು ಹನ್ನೆರಡು ತಾಸು ದೇವರ ಮುಂದ ಕೂತು ಈ ಸಂಸಾರದಿಂದ ಮುಕ್ತಿ ಕೊಡಪಾ ಇದರಿಂದ ಪಾರುಮಾಡಿ ಲಗೂ ನಿನ್ನ ಪಾದಾ ಸೇರಿಸಿಕೊ ಅಂತ ಹಂಬಲಿಸಿ ಕೇಳ್ತೀನಿ"

"ಹೂಂ ಶ್ಯಾಣಾ ಇದ್ದಿ, ನರಸಪ್ಪ ನೀನು ಎಲ್ಲಾ ಬಲ್ಲಾಂವಾ ದಿನಾ ಪುರಾಣ, ಪುಣ್ಯಕಥಿ, ಭಾಗವತ, ಭಾರತ ಅಂತ ಓತ್ತಿ. ಇಷ್ಟೆಲ್ಲ ಓದಿ ನೀ ತಿಳ್ಕೊಂಡಿರೂದು ಏನು? ಅಲ್ಲ ಮುಕ್ತಿ ಕೊಡು ಅಂದ್ರ ಹ್ಯಾಂಗ. ಇನ್ನ ನಿನ್ನ ಆಯುಸ್ಸು ಮುಗಿಬೇಕು. ಅಲ್ದ ಈ ಜನ್ಮಕ್ಕೆ ಬಂದಮ್ಯಾಲೆ ನಿನ್ನದು ಅಂತ ಈ ಸಂಸಾರಕ್ಕ. ಕೆಲವು ಹೊಣೆ ಇರ್ತಾವ ಅಲ್ಲ? ಅದನ್ನು ಬಿಟ್ಟು ನಡದ್ರ ದೇವರು ಮೆಚ್ಚತಾನೇನು? ಈ ಸಂಸಾರಾ ಹಚ್ಚಿದ್ದು ಅವನ ಅಲ್ಲೇನು?

ಏನೂ ಮಾತಾಡಲಿಲ್ಲ ಆತ. ಸೀತಕ್ಕ ಹೇಳಿದುದರಲ್ಲಿ ಸತ್ಯವಿಲ್ಲದಿಲ್ಲ.

"ಹೌದು ಖರೇ ಅದ ಸೀತಕ್ಕ ನೀವು ಹೇಳೂದು ಆದ್ರ ಈ ಸಂಸಾರಾ ಕರ್ತವ್ಯ ಹೊಣೆ ಅನ್ನೋದು ಸಾಯೂ ತನಕಾ ಮುಗಿಯಂಗಿಲ್ಲ. ವೇಂಕಣ್ಣಂದು ಇನ್ನು ಮುಂಜವಿ ಮಾಡ್ಬೇಕು ಆತು ಮಾಡಿದೆ. ರಾಘುನ ಲಗ್ನ ಆಗ್ಬೇಕು. ಹೌದು ಆತು. ಆ ಮ್ಯಾಲೆ ಅವನ ಮಕ್ಕಳು ಮೊಮ್ಮಕ್ಕಳು, ಮರಿ, ವಂಶ ಸಂಸಾರಾ ಬೆಳೆಯೋದನ್ನು ನೋಡ್ಬೇಕು ಅಮ್ಯಾಲೆ ವೇಂಕಣ್ಣ ಅವನ ಸಂಸಾರಾ. . .ಮಕ್ಳು, ಮರಿ, ಕೊನಿ ಅಧ್ಯಾಯ ಅನ್ನೂದು ಅದ ಏನು ಇದಕ?"

"ಹಂಗಂತ ಇದ್ದದ್ದನ್ನು ಬಿಟ್ಟು, ಎದ್ದು ನಡದು ಹೊಗಬಾರ್ದು ನೋಡು, ವೇಂಕಣ್ಣನ್ನ



ಮುಂಜವಿ ಮಾಡಿ ಮುಗಿಸು, ಹುಡುಗ ವಿದ್ಯಾ ಕಲೀಲಿಕ್ಕೆ ಹೊಗ್ಲಿ, ಅಂವಗೂ ನಿಮ್ಮನಿ ಸಂಸ್ಕಾರಾ ಪುರೋಹಿತಕೆ ಎಲ್ಲ ಗೊತ್ತಾಗ್ಬೇಕಲ್ಲ? ಹುಟ್ಟಿದ ಮನಶ್ಯಾರಿಗೆ ಎಲ್ಲಾರಿಗೂ ಸಾವು ಇದ್ದದ್ದ ಆದ್ರ ಅದಕ ಬಾ ಅಂತ ನಾವು ಬಾಗಲಾ ತಕ್ಕೊಂಡು ಕೂಡ್ಲಿಕ್ಕೆ ಆಗ್ತೇದ? ನಡಿ, ನಡೀ. . .ಹುಚ್ಚಿದ್ದಿ ನೋಡು, ವೇಂಕಣ್ಣನ್ನ ನೋಡು ಮಾರಿ ಎಷ್ಟು ಸಣ್ಣದು ಮಾಡಿಕೊಂಡು ಕೂತದ. ತಾಯಿ ಕಳಕೊಂಡದ ಈಗ ನೀನುಽಽ ಅದಕ ತಂದಿ ತಾಯಿ ಎಲ್ಲ ನೀ ಇದ್ದಾಗೂ ಪರದೇಶಿ ಆಗಬಾರ್ದು ಹುಡುಗ ಮುಂದಕ ಕರದು ನೀನಽಽ ಮಾತಾಡ್ಸದಿದ್ರ ಯಾರ ಮಾತಾಡ್ತಾರ"

ನರಸಪ್ಪಯ್ಯ ಮಾತಾಡಲಾರದೆ, ಮುಂದ ಕೂತ ಮಗನ ತಲೆ ಸವರಿದರು.

"ಈಕಾ ಹುಡುಗರಿಗೆ ಸಂಜೀಕ ಏನಽಽರ ಮಾಡೂದಿದ್ರ ಮಾಡಿಟ್ಟು ಹೋಗ್ತೀನಿ" ಎಂದು ಸೀತಕ್ಕ ಒಳಹೋದರು. ನರಸಪ್ಪಯ್ಯನವರ ಕೈ ಮಗನ ತಲೆ ಸವರುತ್ತಿದ್ದರೂ, ವೇಂಕಣ್ಣ ಮಾತ್ರ ಕತ್ತಲು ತುಂಬಿದ ಅಂಗಳ ಪಡಸಾಲೆಯಲ್ಲಿ ಕಳೆದುಹೋದ ಅವ್ವನ ಅಸ್ತಿತ್ವವನ್ನು ಅವ್ವನ ನೆನಪನ್ನು ಹುಡುಕುವಂತೆ ಕೂತಿದ್ದ.

* * *

ಒಂದರ ಮೇಲೊಂದು ಉರುಳಿಹೋದ ದಿನಗಳು, ತಿಂಗಳುಗಳು ಕಾಲಕ್ಕೆ ಯಾವ ಮಿತಿಯಿಲ್ಲ, ಅಂತ್ಯವಿಲ್ಲ. ಹಗಲು ರಾತ್ರಿಯ ಚಕ್ರಗಳನ್ನು ಕಟ್ಟಿಕೊಂಡು ಓಡುತ್ತಿವೆ. ಆದರೆ ಅದರ ತುಳಿತಕ್ಕೆ ಸಿಕ್ಕವರು ಏನನ್ನೋ ಪಡೆಯುತ್ತಾರೆ, ಏನನ್ನೋ ಕಳೆದುಕೊಳ್ಳುತ್ತಾರೆ. ಏನೇನಕ್ಕೊ ಹಲಬುತ್ತಾರೆ, ಹೋರಾಡುತ್ತಾರೆ.

ವೇಂಕಣ್ಣನದು ಹಾಗೆಯೇ, ಮುಂದೆ ಒಂದು ವರ್ಷದಲ್ಲಿ ತಂದೆಯನ್ನು ಕಳೆದುಕೊಂಡ. ನರಸಪ್ಪಯ್ಯ ತಮ್ಮ ಜೀವಿತದ ಅವಧಿಯನ್ನು ಮುಗಿಸಲೇನೊ ಎಂಬಂತೆ. ವೇಂಕಣ್ಣನ ಮುಂಜವಿಯನ್ನು ಮಾಡಿದರು. ಒಂದೆಳೆ ಜನಿವಾರ. ಗಾಯಿತ್ರಿ ಮಂತ್ರೋಪದೇಶ ಇವೀಷ್ಟನ್ನು ತಾನವನಿಗೆ ಕೊಟ್ಟದ್ದು ಎನಿಸಿರಬೇಕು. ಹಾಗೆಂದ ಹೇಳಿಯೇ ಅವರು ಕಣ್ಣು ಮುಚ್ಚಿದ್ದರು. ಆದರೆ "ಇವೆರಡು ನಿನ್ನನ್ನು ಜೀವನದುದ್ದಕ್ಕೂ ಕಾಯುತ್ತದೆ. ಮಗನೇ" ಎಂದು ಹೇಳಿದ್ದರು.

ಇನ್ನು ತನ್ನದೇನು ಇಲ್ಲವೆಂಬಂತೆ ಎದ್ದು ನಡೆದೇ ಬಿಟ್ಟಿದ್ದರು.

ಈಗ ಆ ದೊಡ್ಡ ಮನೆಯಲ್ಲಿ ಇದ್ದವರು ಅಣ್ಣ ರಾಘು. ವೇಂಕಣ್ಣ ಗ್ವಾದ್ಲಿಯಲ್ಲಿದ್ದ ನಾಲ್ಕು ಹಸುಗಳು ಆಗಾಗ ಮನೆಯ ಮೌನವನ್ನು ಛೇದಿಸಲೆಂಬಂತೆ, "ಅಂಬಾ" ಎಂದು ಆರ್ತಭಾವದಿಂದ ಕೂಗುತ್ತಿದ್ದವು. ಅಗೇಲ್ಲ ವೇಂಕಣ್ಣ ಕೊಟ್ಟಿಗೆಗೆ ಹೋಗಿ, ಆ ಕರುಗಳ ಮೈ ಸವರುತ್ತ ಕೇಳುತ್ತಿದ್ದ.

"ನಿಮಗೇನಾದ್ರೂ ಗೊತ್ತೇನ್ರವ್ವಾ, ನಮ್ಮವ್ವ ಅಪ್ಪ ಯಾಕ ನಮ್ಮನ್ನು ಬಿಟ್ಟು ಹೋದ್ರು ಅಂತ" ಅವನ ಆರ್ತಭಾವನೆಗೆ ಕರಗಿ ಅವು ಮತ್ತೆ ಅಂಬಾ ಎನ್ನುತ್ತ ಅವನ ಮೈ ನೆಕ್ಕುತ್ತಿದ್ದವು. ಆಗೆಲ್ಲ ಅವನಿಗೆ ಅವ್ವನ ನೆನಪಾಗುತ್ತಿತ್ತು. ಅವ್ವ ಕೂಡ ತನ್ನನ್ನು ಹೀಗೆ ಅಕ್ಕರತೆಯಿಂದ ಮೈದಡವುತ್ತಿದ್ದಳು.

ಈಗ ಮನೆಯಲ್ಲಿದ್ದವರು ತಾವಿಬ್ಬರೇ, ತಾನು ಅಣ್ಣ, ವಯಸ್ಸಿನ ಅಂತರದಿಂದ ತಮ್ಮಿಬ್ಬರಲ್ಲಿ ಅಷ್ಟು ಸಲುಗೆಯೂ ಇರಲಿಲ್ಲ. ರಾಘು ಮಾತ್ರ ತಮ್ಮನನ್ನು ಅಂತಃಕರಣದಿಂದ ನೋಡಿಕೊಂಡರೂ, ಅವನಿಗೆ ಅವನದೇ ಆದ ಕೆಲಸದಲ್ಲಿ ದಿನಗಳು ಕಳೆದು ಹೋಗುತ್ತಿದ್ದವು. ತಮ್ಮನ, ಮನೆಯ ಜವಾಬ್ದಾರಿ. ತಂದೆ ಬಿಟ್ಟು ಹೋದ ಎಲ್ಲ ವೈದಿಕ ಧರ್ಮದ ದಿನಚರಿ. ಪುರಾಣ, ಪುಣ್ಯಶ್ರವಣ, ಅವರಿವರ ಮನೆ ಪೌರೋಹಿತ್ಯ. ಎಲ್ಲ ಅವನೇ ನಡೆಸಿಕೊಂಡು ಹೋಗಬೇಕಿದ್ದರಿಂದ ತಮ್ಮನೊಡನೆ ಬಹಳ ಹೊತ್ತು ಕಳೆಯಲು ಸಾಧ್ಯವಾಗುತ್ತಿರಲಿಲ್ಲ. ಆದರೆ ವೇಂಕಣ್ಣನಿಗೆ, ಅಣ್ಣ ದಿನವೆಲ್ಲ ಹೊರಗೆ ಇರುತ್ತಿದ್ದರಿಂದ ಮನೆಯಲ್ಲಿ ಒಂಟಿಯಾಗಿ ಕಳೆಯಬೇಕಿತ್ತು.

ಅಪ್ಪನ ನೆನಪಾಗುತ್ತಿತ್ತು. ಅಪ್ಪನ ಕೈ ಹಿಡಿದುಕೊಂಡು ಅಂಗಳ ಪಡಸಾಲೆ ಎಂದು ಓಡಾಡಿದ ನೆನಪಾಗುತ್ತಿತ್ತು. ಅಪ್ಪನ ನೆನಪಾದಾಗಲೆಲ್ಲ ಅಪ್ಪ ತನ್ನನ್ನು ಹತ್ತಿರ ಕೂಡಿಸಿಕೊಂಡು ತಲೆ ಸವರುತ್ತಿದ್ದರು. ಮತ್ತೆ ಹೇಳುತ್ತಿದ್ದರು.

"ವೇಂಕಣ್ಣಾ, ನೀನು ಈ ಮನಿ ಬೆಳಕಪ್ಪಾ, ಹಂಗಂತ ನೀನು ನಿಮ್ಮವ್ವನ ಹೊಟ್ಟ್ಯಾಗಿದ್ದಾಗೇ, ಭಗವಂತ ಸೂಚನಾ ಕೊಟ್ಟಿದ್ದ. ಆದ್ರ ನೀ ಬರೀ ಈ ಮನಿ ಬೆಳಕಲ್ಲಪ್ಪಾ, ಜಗತ್ತಿನ ಬೆಳಕಾಗಬೇಕು" ಎನ್ನುತ್ತಿದ್ದರು.

ಆದರೆ ಏನದು ಬೆಳಕು? ತಂದೆ ಕಂಡ ಬೆಳಕಿನ ಮೂಲ ಉದ್ದೇಶವಾದರೂ ಏನು? ಖರೇ ನೋಡಿದರೆ ತಾನು ಇದ್ದದ್ದೆ ಕತ್ತಲೆಯ ಗಾಢ ಛಾಯೆಯಲ್ಲಿ. ಅವ್ವ ಅಪ್ಪ ಇಲ್ಲದ ಮನೆ ಕತ್ತಲೆಯ ಗೂಡೇ ಅಲ್ಲವೆ? ಈ ಬಾಲಕ ವೇಂಕಣ್ಣನ ಮನೋವೇದನೆ ಆಗಿತ್ತು ಅದು.

ಆದರೆ ರಾಘಣ್ಣನಿಗೆ ಇವೆಲ್ಲ ಯೋಚಿಸಲು ಸಮಯವೆಲ್ಲಿತ್ತು? ಮೊದಲಾದರೆ ಸಂಸಾರದ ಜವಾಬ್ದಾರಿ ಅಪ್ಪನ ಮೇಲಿತ್ತು. ಅವ್ವ ಹೋದ ಮೇಲೆ ವಿರಕ್ತಿಯಿಂದಿದ್ದರೂ, ಕರ್ತವ್ಯವೆಂಬಂತೆ ಅಪ್ಪ ಈ ಸಂಸಾರಕ್ಕೆ ಹೆಗಲು ಕೊಟ್ಟಿದ್ದ. ಆಗ ತನಗೆ ಯಾವ ಜವಾಬ್ದಾರಿ ಇರಲಿಲ್ಲವೆನಿಸಿತ್ತು ರಾಘಣ್ಣನಿಗೆ. ವೆಂಕಣ್ಣನೋ, ಹಸುವಿನ ಹಿಂದಿನ ಕರುವಿನಂತೆ. ಮೊದ ಮೊದಲು ತನ್ನ ಹಿಂದೆ ಸುತ್ತುತ್ತಿದ್ದ. ಆದರೆ ತನ್ನ ಕೆಲಸದಲ್ಲಿ ಅಸರಂತ ಅವನನ್ನು ಹಿಂದೆ ಕಟ್ಟಿಕೊಂಡು ಹೋಗಲು ತನಗೆ ಸಾಧ್ಯವಿರಲಿಲ್ಲ. ಅಪ್ಪ ಹೋಗುತ್ತಿದ್ದ ವೈದಿಕ ಪುರೋಹಿತಕ್ಕೆ ಮನೆಗಳೆಲ್ಲ ತನ್ನ ಪಾಲಿಗೆ ಬಂದಿದ್ದವು. ಹೀಗಾಗಿ ಮನೆಯಲ್ಲಿ ಪೂಜೆ ಮುಗಿಸಿ ವೇಂಕಣ್ಣನಿಗೆ ಸ್ವಲ್ಪ ಅಡಿಗೆ ಮಾಡಿಟ್ಟು ಹೋದರೆ ಆಯ್ತು. ತನ್ನ ಊಟ, ತಾನು ವಿಶೇಷವಾಗಿ ಮಾಡುವ ಪೂಜೆಯ ಮನೆಯಲ್ಲೇ ಆಗುತ್ತಿತ್ತು. ಸಂಜೆ ಸಣ್ಣ ಹುಡುಗರಿಗೆ ಪಾಠ ಹೇಳಿಕೊಡಲು ಗುರುಕುಲಕ್ಕೆ ಹೋಗುತ್ತಿದ್ದ. ಹೀಗಾಗಿ ಅಣ್ಣ ತಮ್ಮನ ನಡುವೆ ಅಂತರ ದೂರವಾಗುತ್ತ ನಡೆದಿತ್ತು. ಸೀತಕ್ಕ ವೆಂಕಣ್ಣನನ್ನು ಕರೆದು ತಮ್ಮ ಮನೆಯಲ್ಲೆ ಊಟು ಉಪಚಾರ ಮಾಡುತ್ತಿದ್ದರು.

"ಮುಂಜವಿ ಮಣಿ ಬ್ರಾಹ್ಮಣ ಪಾ ನೀನು ನಿಮ್ಮಪ್ಪ ಸಾಯೊದ್ರಾಗ ಇದೊಂದು ಪುಣ್ಯದ ಕೆಲಸ ಮಾಡಿದ. ಒಂದೆಳಿ ಜನಿವಾರ ಹಾಕಿಸಿದ. ಅನಾಯಸಾ ಬ್ರಾಹ್ಮಣ ಸಿಕ್ಕಿ ಇಲ್ಲೆ ಊಟಕ್ಕೆ ಬಾ" ಅಂತಿದ್ದರು. ಸೀತಕ್ಕನ ಮನೆಯಲ್ಲಿದ್ದಷ್ಟು ಅವನಿಗೆ ಪರದೇಶಿತನ ಕಾಡುತ್ತಿರಲಿಲ್ಲ. ಆದರೂ ಇದು ತನ್ನದಲ್ಲದ ಮನೆ ಬೇರೆಯವರ ಮನೆಯಲ್ಲಿ ಎಷ್ಟೊತ್ತು ಕಾಲೂರಿ ನಿಲ್ಲಲು ಸಾಧ್ಯ? ಸಂಜೆಯಾದರೇ ಬರಲೇಬೇಕಲ್ಲ. ಸೀತಕ್ಕನ ಮನೆಯಿಂದ ಬಂದ ಮೇಲೆ ಎಷ್ಟೋ



ಹೊತ್ತು ಪಡಸಾಲೆ ಕಟ್ಟೆಗೆ ಕೂಡುತ್ತಿದ್ದ. ಕತ್ತಲು ಕವಿಯುತ್ತಿದ್ದಂತೆ ತಾನೇ ಗೂಟಕ್ಕೆದ್ದ ಕಂದೀಲು ಇಳಿಸಿ ಪಾವು ಒರೆಸಿ ದೀಪ ಹಚ್ಚುತ್ತಿದ್ದ. ಮನೆಯಲ್ಲಿ ಗಾಢವಾದ ಮೌನ. ತನಗಾಗಿ ಯಾರೂ ಇಲ್ಲವೆಂಬ ಭಾವನೆ ಅವನನ್ನು ಪದೇ ಪದೇ ಕಾಡುತ್ತಿತ್ತು.

"ಯಾರೂ ಇಲ್ಲದವ್ರಿಗೆ ಆ ದೇವರಿದ್ದಾನಪಾ ವೇಂಕಣ್ಣ" ಎಂದು ಅವ್ವ ಯಾವಾಗಲೂ ಹೇಳುತ್ತಿದ್ದಳು. ಹಾಗಾದರೆ ಎಲ್ಲಿದ್ದಾನೆ ಆ ದೇವರು. ಯಾಕೆ ತನ್ನ ಹತ್ತಿರ ಬರುವುದಿಲ್ಲ ಅವ್ವನಂತೆ. ಯಾಕೆ ತನ್ನನ್ನು ಅಂತಃಕರಣದಿಂದ ನೋಡಿಕೊಳ್ಳುವುದಿಲ್ಲ ಎನಿಸುತ್ತಿತ್ತು.

"ಹುಚ್ಚು ಹುಡುಗಾ ಅಷ್ಟು ಸರಳಗ ದೇವರು ಸಿಗುಹಂಗಿದ್ರ ದೊಡ್ಡ ದೊಡ್ಡ ಋಷಿಗೋಳು, ಪಂಡಿತರು, ಯಾಕ ಅಖಂಡ ತಪಸ್ಸು ಮಾಡಿಕೋತ ಅವನ್ನ ಹುಡುಕತಿದ್ರಪ್ಪಾ" ಎಂದಿದ್ದರು ಅಪ್ಪ.

ಆದ್ರ ಅವ್ವ ಯಾವಾಗಲೂ ಏನು ಹೇಳುತ್ತಿದ್ದಳು. "ಭಕ್ತಿಯಿಂದ ನೀನೇನಪಾ ಅಂತ. ಕರು ತಾಯಿ ಹಸುನ ಕರದ್ಹಂಗ. ಮಗು ಅವ್ವನ ಕರದ್ಹಂಗ. ಅನನ್ಯ ಭಕ್ತಿಯಿಂದ ಕರದ್ರ ಎಲ್ಲಿದ್ರೂ ಬರ್ತಾನಪ್ಪಾ ತಿರುಪತಿ ವೇಂಕಪ್ಪ ಭಕ್ತರ ಉದ್ಧಾರಕ್ಕಂತ ಭೂಮಂಡಲದಾಗ ಬಂದುನಿಂತ. ಅವನ ದಯಾ ಒಂದಿದ್ರ ಎಲ್ಲಾ ಸಿಗ್ತದ" ಎಂದಿದ್ದಳು.

ಹಾಗಾದರೆ ಯಾವುದು ಖರೇ. ಅಪ್ಪನ ಅಖಂಡ ತಪ್ಪಸ್ಸಿನ ಮಾತೊ? ಇಲ್ಲಾ ಅವ್ವನ ಅಂತಃಕರಣದ ಆರ್ತರವದ ಕರೆಯೊ?

ನಮ್ಮ ಆರ್ತರವದ ಕರೆ ಭಕ್ತಿಯ ಮೂಲ ಎನ್ನುತ್ತಿದ್ದಳು ಅವ್ವ. ಆದರೆ ತನಗೆ ಮಾತ್ರ ಏನು ಮಾಡಬೇಕು ಎನ್ನುವುದ ತಿಳಿಯದೆ ತನ್ನಲ್ಲೆ ತಳಮಳಿಸುತ್ತಿದ್ದ. ಬೇಸರವಾದರೆ ಹೋಗಿ ನದಿ ದಂಡೆಯ ಮೇಲೆ ಕೂಡುತ್ತಿದ್ದ. ಬೆಟ್ಟ ಗುಡ್ಡಗಳ ಮೇಲೆ ಹಾರಾಡುವ ಪಕ್ಷಿಗಳನ್ನು ನೋಡುತ್ತಾ, ನಮಗಿಂತ ಹಕ್ಕಿಗೋಳು ಎಷ್ಟು ಪುಣ್ಯ ಮಾಡ್ಯಾವ. ಸ್ವತಂತ್ರದಿಂದ ಎಲ್ಲಿ ಬೇಕಲ್ಲಿ ಹಾರಾಡಿ ಬರಬಹುದು, ಆಕಾಶದ ತುಂಬೆಲ್ಲ ಹಾರಾಡಿ ಇಡೀ ಜಗತ್ತು ಸುತ್ತಿ ಹಾಕಬಹದು.

ಆದ್ರ ತಾವು? ತಾವೆಲ್ಲ ಮನಶ್ಯಾರು. ತಮಗೆ ಹಕ್ಕಿ ಹಂಗೆ ರೆಕ್ಕೆ ಇಲ್ಲ. ಅವುಗೋಳ್ಹಂಗ ಸ್ವತಂತ್ರ ಇಲ್ಲ. ಹಂಗಾರ ತನಗೇನದ?

ಅವ್ವನ ಜಡ್ಡು, ಅಪ್ಪನ ವೈರಾಗ್ಯ. . ಅಣ್ಣಂತೂ ತನ್ನದೇ ಓಡಾಟದಾಗ ಇರ್ತಿದ್ದ. ತನಗೆ ಯಾರು ಗುರುಕುಲಕ್ಕೆ ಕಳಿಸಲಿಲ್ಲ. ಮುಂಜವಿ ಆದ ಮ್ಯಾಲೆ ಹೋಗು ಅಂದಿದ್ರು. ಮುಂಜವಿ ಆಗು ಪುರಸತಗೆ ಅಪ್ಪ ಹೋದ. ಇನ್ನ ಯಾರು ಕಳಸವರು? ನಾಲ್ಕಕ್ಷರ ಸಂಸ್ಕೃತ ವೇದಪಾಠ ಕಲಿಬೇಕಂದ್ರ ಆಗಲಿಲ್ಲ.

ಕಲ್ತದ್ದಂದ್ರ ಅವ್ವ ಇದ್ದಾಗ ಯಾವಾಗಲೂ ಆಕಿ ಹಾಡ್ತಿದ್ದ ದಾಸರ ಹಾಡು. ವೆಂಕಟೇಶ ಮಹಾತ್ಮೆ ಹಾಡು. ಇಲ್ಲಾ ವಿಷ್ಣು ಸಹಸ್ರನಾಮ, ಅಪ್ಪ ಪೂಜೆ ಮಾಡೂಮುಂದ ಹೇಳು ವಾಯುಸ್ತುತಿ. ಇವೆಲ್ಲ ಬಾಯಿಂದ ಬಾಯಿಗೆ ಬಂದು ಕಲಿತದ್ದು. ಆದರೆ ತಿದ್ದಿ ತೀಡಿ ಅಕ್ಷರ ಯಾರೂ ಕಲಿಸಲಿಲ್ಲ. ಕಲಿಸಿದ್ದರೂ ಒಂದು ನಾಕು ಸಂಸ್ಕೃತ ಶಬ್ದ. ನಾಕು ಕನ್ನಡ ಅಕ್ಷರ. ಇವಿಷ್ಟು ಬಿಟ್ರ ಏನದ ತನಗ?

ವೆಂಕಣ್ಣನಿಗೆ ಇಂತ ಆಲೋಚನೆಗಳು ಯಾವಾಗಲೂ ಗಿರಕೆಯಂತೆ ಅವನ ಸುತ್ತ ಸುತ್ತಿ ಸುಳಿಯಲ್ಲಿ ಸಿಕ್ಕಂತೆ ಅವನನ್ನು ಕಂಗೆಡಿಸುತ್ತಿದ್ದವು. ಅಣ್ಣನನ್ನು ಕೇಳಿದರೆ "ನಾನ ಮನ್ಯಾಗ ಕಲಸ್ತೀನೇಳು. ಗುರುಕುಲಕ್ಕೆ ಯಾಕ" ಅನ್ನುತ್ತಿದ್ದರೂ, ಅವನಿಗೆ ಹಗಲು–ರಾತ್ರಿಯ ಓಡಾಟದಲ್ಲಿ ಅವಕಾಶವೇ ಆಗುತ್ತಿರಲಿಲ್ಲ. ನಾಳೆ ಸುರು ಮಾಡೋಣ, ನಾಳೆ ಸುರು ಮಾಡೋಣು" ಎನ್ನುವುದರಲ್ಲೇ ದಿನಗಳು ಉರುಳಿಹೋಗಿದ್ದವು. ಎಲ್ಲರಂತೆ ತಾನು ವಿದ್ಯೆ ಕಲಿಯಲಿಲ್ಲ ಎಂಬ ಹೈರಾಣಭಾವ ದೊಡ್ಡವನಾಗುತ್ತಿದ್ದಂತೆ ಒಂದು ರೀತಿಯ ಸಂಕುಚಿತ ಭಾವನೆ ತರುತ್ತಿತ್ತು. ಅಪ್ಪ ಪ್ರಚಂಡ ಪಂಡಿತರಿದ್ದರು. ಅಣ್ಣ ಕೂಡ ಗುರುಕುಲಕ್ಕೆ ಹೋಗಿ ವೇದಾಧ್ಯಯನ ಮಾಡಿದವ. ಆದರೆ ತಾನು? ಅಪ್ಪ ಯಾವಾಗಲೂ ಹೇಳುತ್ತಿದ್ದರು.

"ಬಾಗಲಕೋಟೆ ಅಂದ್ರ ಪಂಡಿತರ ಊರು. ಈ ಓಣಿಯೊಳಗ ವೇದಾಧ್ಯಯನ ಮಾಡಿದವ್ರು ಬೇಕಾದಷ್ಟು ಇದ್ದಾರ ನನ್ನ ಕಾಲ ಮುಗೀತ ಬಂತು. ನಿಮಗೇಷ್ಟು ಪಾಂಡಿತ್ಯ ಸಿಗಲಿ ಅಂತ ಇಲ್ಲೆ ಬಂದು ನೆಲೆಯೂರಿವಿ" ಎಂದಿದ್ದರು.

ಹೌದು, ಇಲ್ಲಿ ನೆಲೆ ಹುಡುಕಿಕೊಂಡು ಬಂದಿದ್ದರು. ರಾಘಣ್ಣನಿಗೆ ಸಾಕಾಗುವಷ್ಟು ಅಧ್ಯಯನವಾಗಿತ್ತು, ತನಗೇಕೆ ಆಗಲಿಲ್ಲ. ತಾನು ಹುಟ್ಟಿ ಬೆಳೆಯುತ್ತಿದ್ದಂತೆ ಅವ್ವ ನಿತ್ರಾಣವಾಗುತ್ತ ನಡೆದಳು. ಹಾಸಿಗೆ ಹಿಡಿದಳು. ಅವ್ವನ ಜಡ್ಡು ಅಪ್ಪನನ್ನ ಹೈರಾಣ ಮಾಡಿತು. ಅವನಿಗೂ ಮನೆಯಲ್ಲಿ ನಿರಾಸಕ್ತಿ ಹುಟ್ಟಿತು. ಮನೆಯ ಸ್ಥಿತಿಯೇ ಬದಲಾಯ್ತು. ಅಪ್ಪನಿಗೂ ವಯಸ್ಸಾಗಿತ್ತು. ರಾಘಣ್ಣನ ವಿದ್ಯೆ ಮುಗಿದು ಅವನು ಅಷ್ಟಿಷ್ಟು ವೈದಿಕ ವಿದ್ಯೆ ಕಲಿತಿದ್ದ. ಅಪ್ಪ ಯಾವಾಗಲೂ ಹೇಳುತ್ತಿದ್ದರು.

"ರಾಘು, ನೀ ಹೋಗುಮುಂದ. ವೇಂಕಣ್ಣನನ್ನು ಗುರುಕುಲಕ್ಕೆ ಬಿಟುಹೋಗು. ಸಣ್ಣಾಂವಾ. ನಾನು ರಾಮಾಚಾರ್ಯರಿಗೆ ಹೇಳಿನಿ. ಕಳಿಸ್ರಿ ಅಂದಾರ. ಅಂವನೂ ಒಂದು ನಾಕಕ್ಷರ ವೇದಪಾಠ ಕಲೀಲಿ" ಎಂದರೆ, ರಾಘಣ್ಣ "ಇಲ್ಲಪ್ಪಾ, ನನಗ ರಗಡ ಕೆಲಸ ಇರ್ತಾವ, ನಿನಗೂ ಈಗ ಕೈಲಿ ಆಗಂಗಿಲ್ಲಂತ. ನೀ ಪುರೋಹಿತಕೆ ಮಾಡ್ತಿದ್ ಮನಿ ಎಲ್ಲ ನನಗ ಗಂಟ ಬಿದ್ದಾವ. ನನಗ ಹತ್ತು ಹನ್ನೆರಡು ರಗಳಿ" ಎಂದು ಹೋಗಿಬಿಡುತ್ತಿದ್ದ. ಅಪ್ಪ ನಿಸ್ಸಹಾಯಕ ತನದಲ್ಲಿ ತಾನೇ ಮುಂದೆ ಕೂಡಿಸಿಕೊಂಡು ನಾಲ್ಕಕ್ಷರ ತಿದ್ದಿಸುತ್ತಿದ್ದ. ಅಪ್ಪ ಹಾಸಿಗೆ ಹಿಡಿದ ಮೇಲೆ ಅಪ್ಪ ಕೂಡ ಮನೆಬಿಟ್ಟು ಹೋಗುವುದೇ ಕಠಿಣವಾಗುತ್ತಿತ್ತು.

ಕಷ್ಟ ಎನ್ನುವುದು ನಿರಂತರವಾಗಿ ತನ್ನ ಬೆನ್ನು ಹತ್ತಿತೇನೋ? ಇಂಥಹ ಮನಸ್ಥಿತಿಯಲ್ಲಿ ಬೇಸರವಾಗುತ್ತಿದ್ದಂತೆ, ವೇಂಕಣ್ಣ ಮನೆಗೆದ್ದು ಬರುತ್ತಿದ್ದ. ಅವ್ವ–ಅಪ್ಪ ಹೋದಮೇಲೆ ಈಗ ತೀರ ದೊಡ್ಡವನಾಗಿದ್ದೇನೆ ಎನಿಸುತ್ತಿದೆ ತನಗೆ. ಮೊದಲಿನಂತೆ ಸೀತಕ್ಕನ ಮನೆಗೂ ಹೋಗಲು ಸಾಧ್ಯವಿಲ್ಲ. ಅವರಿಗೂ ವಯಸ್ಸಾಗಿ ಗಂಡ ಹೋಗಿ ಮನೆಯ ಕತ್ತಲನ್ನೇ ತನ್ನ ಪ್ರಪಂಚವನ್ನಾಗಿ ಮಾಡಿಕೊಂಡಿದ್ದಾರೆ. ತಾನು ಯಾವಾಗಲಾದರೂ ಹೋದರೆ ತನ್ನ ಕೈ ಹಿಡಿದು ಅಳುವದೊಂದನ್ನು ಬಿಟ್ಟರೆ ಏನೂ ಮಾತನಾಡುವುದಿಲ್ಲ.

ಮನೆಗೆ ಬಂದರೆ ತಾನೇ ಕಂದೀಲು ಹಚ್ಚಿ, ದೇವರಿಗೆ ದೀಪ ಹಚ್ಚಿ, ತನಗೆ ಬಂದಂತೆ ಅಡಿಗೆ ಮಾಡಿಟ್ಟು ಅಣ್ಣನ ದಾರಿ ಕಾಯುತ್ತ, ಇದೇ ಪಡಸಾಲೆಯ ಕಟ್ಟೆಗೆ ಕೂಡಬೇಕು. ಈ



ಯಾಂತ್ರಿಕತೆಗೆ ಮನಸ್ಸನ್ನು ಹ್ಯಾಗೆ ಹೊಂದಿಸಿಕೊಳ್ಳಬೇಕಿತ್ತು. ಇದು ಬಿಟ್ಟರೆ ಬೇರೆ ಜೀವನವೆ ಇಲ್ಲವೆ ಎಂದು ಯೋಚಿಸುವಷ್ಟು ಅವನ ಮನಸ್ಸು ಕೂಡ ಬೆಳೆದಿತ್ತು. ತುಂಬ ಬೇಸರವಾದರೆ ದೇವರ ಮನೆಯಲ್ಲಿ ಕೂತು ತಾನೇ ಹಚ್ಚಿದ ದೀಪವನ್ನು ನೋಡುತ್ತ ಒಳಗಿನ ಕತ್ತಲನ್ನು ಓಡಿಸುವ ಪ್ರಯತ್ನ ಮಾಡುತ್ತಿದ್ದ. ಅವ್ವ ಹೇಳುತ್ತಿದ್ದ ಭಕ್ತಿಯ ಮೂಲ ಹುಡುಕುತ್ತಿದ್ದ. ಈ ಜೀವನದ ಸತ್ಯಾಂಶವೇನು? ಈ ಜನುಮದ ಯಥಾರ್ಥವೇನು? ಎನ್ನುವ ಪ್ರಶ್ನೆ ಅವನನ್ನು ಕಾಡುತ್ತಿತ್ತು ಇದಕ್ಕೆಲ್ಲ ಉತ್ತರ ಹುಡುಕಬೇಕೆಂದರೆ ತನ್ನ ಶ್ರದ್ಧೆಯ ಮೂಲವನ್ನು ಹಿಡಿದು ಅಲುಗಿಸಬೇಕು ಅದರೊಡನೆ, ತನ್ನ ಮುಂದಿನ ಹಾದಿ ಯಾವದು ಎನ್ನುವ ಪ್ರಶ್ನೆ ಅವನನ್ನು ಕಾಡುತ್ತಿತ್ತು.

ಹೀಗೆಯೇ ಅಜ್ಞಾನಿಯಾಗಿ ಎಷ್ಟು ವರ್ಷ ಬದುಕಬೇಕು ತಾನು. ಓಣಿಯಲ್ಲಿ ತನ್ನ ಗೆಳೆಯರೆಲ್ಲ ತನ್ನ ವಯಸ್ಸಿನವವರೆಲ್ಲ ದಿನಾ ಗುರುಕುಲಕ್ಕೆ ಹೋಗುತ್ತಾರೆ. ಏನಾದರೂ ಪ್ರಶ್ನೆ ಕೇಳಿದರೆ ವೇದಪಾಠದಲ್ಲಿ ಇದು ಹೀಗಲ್ಲ. ಹೀಗೆ ಎಂದು ಖಡಾಖಂಡಿತವಾಗಿ ಉತ್ತರ ಕೊಡುತ್ತಾರೆ. ಗೀತೆಯಲ್ಲಿ ಭಗವಂತ ಅರ್ಜುನನಿಗೆ ಹೀಗೆ ಉಪದೇಶ ಮಾಡಿದ. ಭಾಗವತದಲ್ಲಿ ಹರಿಯ ಸ್ವರೂಪ ಹೀಗಿದೆ ಎಂದು ತತ್ವಗಳನ್ನು ಹೇಳುತ್ತಾರೆ.

ಮೊನ್ನೆಯೇ ಇರಬಹುದು. ತಾನು ಆಕಳನ್ನು ಬಿಟ್ಟು ಕೊಂಡು ಹೊರಬಯಲಿಗೆ ಹೋಗುತ್ತಿದ್ದೆ. ಎದುರುಮನೆ ಕೇಶವ ಸಿಕ್ಕಿದ್ದ. ಸಂಜೆ ಹೊತ್ತು. ಗುರುಕುಲದಿಂದ ಬರುತ್ತಿದ್ದನಂತೆ, ತನ್ನನ್ನು ನೋಡಿ ನಕ್ಕ.

"ನಿನ್ನನ್ನು ನೋಡಿದ್ರ ಬ್ಹಾಳ ಕೆಟ್ಟನಸ್ತದಪಾ" ಎಂದು ಇರಬಹುದು ತಂದೆ–ತಾಯಿ ಇಲ್ಲದ ಪರದೇಶಿ ತಾನು, ಅಣ್ಣನನ್ನು ಬಿಟ್ಟರೆ ತನ್ನವರೆನ್ನುವವರು ಯಾರಿರಲಿಲ್ಲ. ಅದನ್ನೇ ಅವನಿಗೆ ಹೇಳಿದ್ದೆ ಕೂಡ."

"ಅದಕ್ಕಲ್ಲಪಾ. ನನಗೆ ಕೆಟ್ಟನಸೂದು ಅಲ್ಲ. ನಿಮ್ಮಪ್ಪ ದೊಡ್ಡ ಪಂಡಿತರಾಗಿದ್ರು., ಈಗ ನಿಮ್ಮಣ್ಣ ಏನೆಲ್ಲ ಕಲ್ತಾರ. ಆದರ ನಿನಗ ಮಾತ್ರ ವಿದ್ಯಾಸೊನ್ನಿ ವೇಂಕಣ್ಣ. ಅಲ್ಲ ನೀ ಯಾಕ ಗುರುಕುಲಕ ಬರಂಗಿಲ್ಲ. ನಿನಗ ಕಲಿಯೂ ಇಚ್ಛಾ ಇಲ್ಲೇನು?" ಎಂದಿದ್ದ. ಏನು ಹೇಳಬೇಕಿತ್ತು ತಾನು ? ತಮ್ಮ ಮನೆಯ ಸ್ಥಿತಿ ಇವನಿಗೆ ಗೊತ್ತು. ಯಾಕೋ ಅಪ್ಪ ಯಾಕೆ ತನ್ನನ್ನು ಗುರುಕುಲಕ್ಕೆ ಕಳಿಸಲಿಲ್ಲ. ಇಲ್ಲ ಅದು ಅವನ ತಪ್ಪು ಇರಲಿಕ್ಕಿಲ್ಲ. ತಾವು ಕಾಖಂಡಕಿ ಬಿಟ್ಟು ಬಂದದ್ದೆ ಪಂಡಿತರಾಗಲೆಂದಲ್ಲವೆ? ತಮಗೆ ಎಲ್ಲ ರೀತಿ ವಿದ್ಯೆ ಸಿಗಬೇಕೆಂದು ಅಪ್ಪನ ಆಶೆಯಾಗಿತ್ತಂತೆ. ಆದರೆ, ಎಂಥಹ ದುರ್ವಿಧಿ ತನ್ನದು. ತಾನು ಹುಟ್ಟುತ್ತಲೇ ಅವ್ವ ಜಡ್ಡು ಜಡ್ಡು ಎನ್ನುತ್ತ ಹಾಸಿಗೆ ಹಿಡಿದಳು. ಅಪ್ಪ ಸಂಸಾರದಿಂದ ನಿರಾಸಕ್ತನಾದ. ಅಣ್ಣನಂತೂ ತನ್ನದೇ ಹಾದಿ ಹಿಡಿದಿದ್ದ. ಅವ್ವನ ಸಾವಿನೊಡನೆ ಅಪ್ಪನ ಆಶೆಗಳು ಬುದಿಯಾದವು.

ತನ್ನ ವಿದ್ಯೆಗೆ ಕೂಡ ಕೊನೆಯಾಯ್ತು? ಈಗ ಕೇಶವ ಹೇಳಿದ್ದು ಕೇಳಿದ್ರೆ ತನ್ನ ಮನಸ್ಸು ಕೂಡ ಎಷ್ಟು ನಿರ್ವೀರ್ಯವಾಗುತ್ತಿದೆ. ಏನು ಹೇಳಬೇಕು ಕೇಶವನಿಗೆ ತಾನು? ತನ್ನ ವಯಸ್ಸಿನವನೇ ಆದ ಅವನು ಎಷ್ಟೆಲ್ಲ ತಿಳಿದುಕೊಂಡಿದ್ದಾನೆ. ನಿನಗೆ ಕಲಿಯೊ ಇಚ್ಛಾ ಇಲ್ಲೇನು ಅಂದ್ರ ಹ್ಯಾಂಗ ? ವೇಂಕಣ್ಣ ಮಾತಾಡದೆ ಒಂದು ರೀತಿಯ ಸಂಕೋಚ ಸಂಕುಚಿತ ಭಾವದಿಂದ ಆಕಳ ಹಿಂದೆ ನಡೆದ.

ತನಗೆ ವಿದ್ಯೆ ಗೊತ್ತಿಲ್ಲ. ಗೊತ್ತಿದ್ದುದು ಅಂದರೆ ಅವ್ವ ಹೇಳುತ್ತಿದ್ದ ಭಕ್ತಿ. ಭಕ್ತಿಯೊಂದನ್ನು ಬಿಟ್ಟರೆ ತನ್ನಲ್ಲಿ ಏನಿದೆ?

ಅದು ಪರಿಪೂರ್ಣ ಭಕ್ತಿಯೇ ಇಲ್ಲಾ. ಯಾರಿಲ್ಲದವರಿಗೆ ಭಗವಂತನೇ ದಿಕ್ಕು ಎನ್ನುವ ಸ್ವಾರ್ಥ ಮೂಲದ ಭಕ್ತಿ.

ಆಕಳನ್ನು ಮೇಯಲು ಬಿಟ್ಟು ವೇಂಕಣ್ಣ ಒಬ್ಬನೇ ಗಿಡದ ಕೆಳಗೆ ಕುಳಿತರೇ ಸಾಕು. ಅವನ ಮನಸ್ಸು ನಾನಾ ವಿಧವಾಗಿ ಯೋಚಿಸುತ್ತಿತ್ತು; ನದಿಯಂಚಿಗಿದ್ದ ದೇವರ ಗುಡಿಯಲ್ಲಿ ಏಕಾಂತ ಚಿತ್ತನಾಗಿ ಎಷ್ಟೋ ಹೊತ್ತು ಕೂಡುತ್ತಿದ್ದ. ಸುಂದರವಾದ ದೇವರಮೂರ್ತಿಯದು ನೊಡುತ್ತಿದ್ದರೇ ಇನ್ನೂ ನೊಡುತ್ತಲೇ ಇರಬೇಕೆಂಬಂಥಹ ತಹ ತಹಿಕೆ. ಈ ಕಲ್ಲಿನಲ್ಲೂ ಜೀವಂತಿಕೆ ಇದೆಯೆ? ಎನ್ನುವಷ್ಟು ಭಾವ ಮಿಡಿದು ಅವನನ್ನು ತನ್ನ ಹತ್ತಿರ ಸೆಳೆಯುತ್ತಿತ್ತು.

"ಬಾ ಕಂದ ಇಲ್ಲೆ ಕೂಡು. ನನ್ನ ಹತ್ತಿರ ಕೂಡು" ಎಂದು ಆ ಮೂರ್ತಿ ಹೇಳುವಷ್ಟು, ಅದರೊಂದಿಗೆ ತಾದ್ಯಾತ್ಮಿಕತೆಯನ್ನು ವೇಂಕಣ್ಣ ಬೆಳೆಸಿಕೊಂಡಿದ್ದ.

ಆದರೆ ಮೂರ್ತಿಯ ಮುಂದಾದರೂ ಎಷ್ಟೊತ್ತು ಕೂಡಲು ಸಾಧ್ಯ? ದೇವರ ಮುಂದಿದ್ದಷ್ಟು ಮನಸ್ಸಿನಲ್ಲಿ ಶಾಂತಿ ನೆಲೆಸುತ್ತಿತ್ತು. ಆದರೆ ಮನೆಗೆ ಬಂದೊಡನೆ ಮತ್ತೆ ಅದೇ ಗಾಢ ಮೌನ.

"ವೇಂಕಣ್ಣ ನಾನೇ ನಿನ್ನ ಜೋಡಿನಪಾ" ಎಂದು ಹೇಳುವಷ್ಟು ಪರಿಚಿತವಾಗಿ ಬಿಟ್ಟಿತ್ತು. ಅಂಥ ಮೌನದಲ್ಲೇ ಅವನು ತನ್ನ ಜೀವನದ ರೀತಿ–ನೀತಿಯನ್ನು ಅಳವಡಿಸಕೊಳ್ಳಬೇಕಿತ್ತು.

ವೇಂಕಣ್ಣ ಬಾಲ್ಯವನ್ನು ಕಳೆಯಬೇಕಿತ್ತು.

ಕಳೆದ, ಕಳೆಯುತ್ತಿದ್ದ.

ಜೀವನದ ಎಲ್ಲ ವಿಧಿ–ವಿಧಾನಗಳು ನಡೆಯುತ್ತಿತ್ತು.

ನಡೆಯಿತು.

ಇವರಿಬ್ಬರ ಕಷ್ಟ ನೋಡಲಾರದೆ ಓಣಿಯ ಹಿರಿಯರು ಮನೆಗೆ ಬಂದು ಒಂದೆರಡು ಮಾತು ಕೂಡ ಹೇಳಿದರು.

"ರಾಘಣ್ಣ, ಹಿಂಗ ಎಷ್ಟು ದಿನ ಇಬ್ಬರ ಗಂಡು ಹುಡುಗರು ಮನಿ ನಡೆಸಲಿಕ್ಕೆ ಸಾಧ್ಯಪಾ. ಮನಿ ಅಂದಮ್ಯಾಲೆ ಒಂದು ಹೆಣ್ಣು ಜೀವ ಬೇಕು ಅಲ್ಲ?

ರಾಘಣ್ಣ, ಅವರ ಮಾತಿನ ಅರ್ಥವಾಗದೆ ಮುಖ–ಮುಖ ನೋಡಿದ. ಸೀತಕ್ಕ ಒಂದು ಮಾತು ಹೇಳಿದರು. "ಜೀವನ ಅಂದ್ರ ಹಿಂಗನಪಾ, ಒಂದು ಜೀವ ಹೋಂತಂತ. ಮುಂದಿನ ಜೀವನದ ರೀತಿ ಬದಲಾಗಬೇಕಲ್ಲ ಅಲ್ಲ? ಅದಕೊಂದು ವ್ಯವಸ್ಥೆ ಬೇಕು. ನಡೆಯೋದು ನಡಿಲೇ ಬೇಕು ಅಲ್ಲ? ಯಾವದು ನಿಂದ್ರತದ ಹೇಳು? ಹೊಟ್ಟೆಗೆ ತಿನ್ನೂದು ಬಿಡ್ತೇವೇನು? ನಿದ್ದಿ ಬಿಡ್ತೇವೇನು? ಜೀವನಂದ್ರ ಎಲ್ಲಾ ಹರಪಳಿ ಇದ್ದದ್ದ ಅಲ್ಲ?

ಈ ಎಲ್ಲ ಬದುಕಿನ ಒಳರ್ಥಗಳು. ಹಿರಿಯ ಅನುಭವದ ಜೀವಿ ಸೀತಕ್ಕನಿಗೆ ಗೊತ್ತು. ಆದರೆ ರಾಘಣ್ಣನಿಗೆ,



"ನೀವು ಏನು ಹೇಳ್ತೀರಿ ಕಕ್ಕಿ"

"ಯಾಕಪಾ ನಾ ಹೇಳಿದ್ದು ನಿನಗ ಅರ್ಥ ಆಗಲಿಲ್ಲೇನು? ಈಗ ಈ ಮನಿಗೆ ನೀನss ಹಿರಿಯ. ನಿಂದು ಒಂದು ಮೆಟ್ಟಿಗೆ ಬಂದದ ಅಪ್ಪನ ವೈದಿಕ ಕೆಲಸ ಮುಂದುವರೆಸಿ. ಸಂಸ್ಕೃತ, ವೇದ ಅಂತ ಕಲಿತಿ. ಕೈಯಾಗ ನಾಕದುಡ್ಡು ಬರ್ತದ ಏನಪಾ. ನೀನು ಗಂಡುಗೋವಿಗತೆ ಅಸರಂತ ಹೊರಗ ಇರಾಂವಾ. ಆದ್ರ ವೇಂಕಣ್ಣ? ಇನ್ನ ಸಣ್ಣಾಂವಾ.  ನಿಂದು ಅವಂದು ಹೊಟ್ಟಿ, ನೆತ್ತಿ ನೋಡ್ಕೋಳಿಕ್ಕೆ ಒಂದು ಹೆಣ್ಣು ಜೀವ ಬೇಕು. ಅದಕ ಒಂದು ಲಗ್ನಂತ ಆಗು. ಮನಿಗೆ ಒಂದು ಹೆಣ್ಣು ಜೀವ ಅಂತಿದ್ರ ಮನಿ ಮತ್ತು ಒಂದು ಮೆಟ್ಟಿಗೆ ಬರ್ತದ" ಸೀತಕ್ಕನ ಮಾತಿಗೆ ಒಂದು ಗಳಿಗೆ ಸುಮ್ಮನಾದ ಅವನು.

ಲಗ್ನ ಮೂರ್ತ. ಅಷ್ಟರಮಟ್ಟಿಗೆ ಅವನು ಯೋಚಿಸಿರಲಿಲ್ಲ. ಆದರೆ ಮನೆಯ ಪರಿಸ್ಥಿತಿ ನೋಡಿದ ಮೇಲೆ ಸೀತಕ್ಕ ಹೇಳಿದ ಮಾತು ಖರೇ ಅನ್ನಿಸಿತು. ಅಲ್ಲದೆ ಈಗ ನಾಕಾರು ಮನೆಗೆ ಪೂಜೆ ಪುನಸ್ಕಾರ ಅಂತ ಹೋದಾಗಲೆಲ್ಲ ಕೇಳುತ್ತಿದ್ದರು.

"ಯಾಕ್ರೀ ರಾಘಣ್ಣ, ಲಗ್ನ ಯಾವಾಗ ಮಾಡ್ಕೋಳ್ಳವ್ರು. ಮನಿಗೆ ಒಂದು ಹೆಣ್ಣು ದಿಕ್ಕು ಬೇಕಲ್ಲ. "ಮಾಡ್ಕೋಳ್ಳುದಿದ್ರ ಹೇಳ್ರಿ. ನಮ್ಮ ಕಡೀದು ಒಂದು ಕನ್ಯಾ ಅದ" ಎನ್ನುತ್ತಿದ್ದರು.

ಹೌದು, ಓಣಿಯ ಹಿರಿಯರ ಮಾತು ತೆಗೆದು ಹಾಕುವ ಹಾಗಿಲ್ಲ. ಅವ್ವ ಅಪ್ಪ ಹೋದಮೇಲೆ ಈಗ ಓಣಿಯವರೆ ಹಿರಿಯರ ಸ್ಥಾನದಲ್ಲಿದ್ದಾರೆ. ನೋಡಿದರೆ ಮನೆ ಪರಿಸ್ಥಿತಿ ಕೂಡ ಹಾಗೇ ಇದೆ. ತಾನು ಮುಂಜಾನೆ ಎದ್ದು ಹೋದರೆ ಬರುವುದು ಸಂಜೆಯೇ. ಒಂದೊಂದು ಸಲ ಸೂತ್ತಮುತ್ತ ಹಳ್ಳಿಗಳಿಗೆ ಲಗ್ನ, ಮುಂಜವಿ, ಗೃಹಪ್ರವೇಶ ಸತ್ಯನಾರಾಯಣ ಪೂಜೆ ಎಂದು ಪುರೋಹಿತಕೆ ಮಾಡಲು ಹೋಗಬೇಕಾಗುತ್ತಿತ್ತು. ಆಗ ಎರಡೆರಡು ದಿನ ತಾನು ಮನೆಯಿಂದ ಹೊರಗಿರಬೇಕಾಗುತ್ತಿತ್ತು. ಆಗೆಲ್ಲ ವೇಂಕಣ್ಣ ಒಬ್ಬನೇ ಮನೆಯಲ್ಲಿ ನೀನು, ತಾನು ಎನ್ನುವರಿಲ್ಲ. ಹಾಗಿದ್ದಾಗ ಓಣಿಯವರು ಯಾರಾದರೂ ಕರೆದು ಅವನಿಗೆ ಊಟ ಹಾಕುವುದಿತ್ತು. ಆದರೆ ಹೆಚ್ಚು ವೇಳೆ ಅವನು ಸೀತಕ್ಕನ ಮನೆಯಲ್ಲೆ ಕಳೆಯುವುದಿತ್ತು. ಆದರೆ ಎಷ್ಟು ದಿನ ಬೇರೆಯವರ ಮನೆಯಲ್ಲಿ ಇರುವುದು ಸಾಧ್ಯ? ಸೀತಕ್ಕನಿಗೂ ವಯಸ್ಸಾಯ್ತು. ಇವತ್ತೋ ನಾಳೆಯೋ ಎನ್ನುವಂತೆ ಇದಾಳೆ. ತನ್ನ ಮನೆಯು ಮನೆ ಅನ್ನಿಸಿಕೊಳ್ಳಬೇಕಲ್ಲ ತನ್ನ ಗೆಳೆಯರೆಲ್ಲ ಲಗ್ನವಾಗಿ ಸಂಸಾರ ಹೂಡಿದ್ದಾರೆ. ತಮ್ಮ ಅತಂತ್ರೆಗೊ ಮನೆಗೊಂದು ಹೆಣ್ಣು ಆಧಾರವಾಗಿರಬೇಕಲ್ಲ. ಅವಳು ತನ್ನನ್ನು ವೇಂಕಣ್ಣನನ್ನು, ಮನೆ ಸಂಸಾರವೆಂದು ತೂಗಿಸಿಕೊಂಡು ಹೋದರೆ ತನಗೂ ನಿರಾಳ ಎನ್ನಿಸಿದಾಗ, ರಾಘಣ್ಣ ಲಗ್ನವಾಗಲು ನಿರ್ಧರಿಸಿದ್ದ.

ಆಯಿತು.

ಮುಂದೆ ಆಷಾಢ ಕಳೆದು, ಶ್ರಾವಣದಲ್ಲಿ ಹತ್ತಿರದ ಹಳ್ಳಿಯಿಂದ ಲಗ್ನವಾಗಿ ಮನೆಗೆ ಬಲಗಾಲಿಟ್ಟು ಬಂದಳು ಅವನ ಹೆಂಡತಿ ಕಾವೇರಿ. ಈಗ ಹೆಣ್ಣಿಲ್ಲದೆ ಬರಡಾಗಿದ್ದ ಮನೆ ಅವಳ ಬರುವಿನಿಮದ ತುಂಬಿದಂತಾಯ್ತು. ಮನೆ ಅಂಗಳ ಪಡಸಾಲೆ, ನಡುಮನೆ, ಅಡಿಗೆ ಮನೆ, ಅವಳ ಹೆಜ್ಜೆಯಿಟ್ಟಲೆಲ್ಲಾ ಮನೆಗೆ ಕಳೆಬಂದಿದೆ ಎಂದುಕೊಂಡ ರಾಘಣ್ಣ ಈಗ ಅವ್ವ ಇದ್ದಾಗಿನಂತೆ ಅಂಗಳದ ತುಳಸಿಕಟ್ಟೆ ಮುಂದೆ ದೀಪ ಬೆಳಗುತ್ತಿದೆ, ಮನೆ ಮುಂದೆ ಹೊಸ್ತಿಲಿಗೆ

ಥಳಿ ರಂಗೋಲಿ ಕಾಣುತ್ತಿದೆ. ದನದ ಕೊಟ್ಟಿಗೆಯಲ್ಲಿ ಹೆಣ್ಣಿನ ಹೆಜ್ಜೆ ಸದ್ದಿನಿಂದ ದನಗಳು ಅಂಬಾ ಎಂದು ಇಂಪಿನಿಂದ ಕರೆಯುತ್ತವೆ. ಅಡಿಗೆ ಮನೆಯಲ್ಲಿ ಒಲೆ ಹಚ್ಚಿ ಅಲ್ಲಿಂದ ಅಡಿಗೆಯ ಘಮ, ಘಮ ವಾಸನೆ ಬರುತ್ತಿದೆ.

ಆದರೆ ಅದು ತನ್ನ ಪಾಲಿಗೆ ಮಾತ್ರ ಸೀಮಿತವಾಗುತ್ತದೆಂದು ಅವನಿಗಾದರೂ ಎನು ಗೊತ್ತು.

ವೇಂಕಣ್ಣನ ಪಾಲಿಗೆ ಆ ಬರಡು ಮನೆ ಬರಡಾಗಿಯೇ ಉಳಿಯುತ್ತಿದೆ. ಮತ್ತೆ ಮೊದಲಿಗಿಂತ ಅವನ ಸ್ಥಿತಿ ಅತಂತ್ರವಾಗಿಯೇ ಉಳಿಯುತ್ತಿದೆ ಎನ್ನುವ ಆಲೋಚನೆ ಕೂಡ ಅವನಿಗೆ ಬರಲಿಲ್ಲ ಖರೇ. ವೇಂಕಣ್ಣ ಕೂಡ ಅನುಗಾಲವೂ ಒಂಟಿಯಾಗಿರುವ ತನಗೆ ತಾಯಿಯಂತೆ ಹೆಣ್ಣು ಜೀವವೊಂದು ಬಂದಿದೆ. ತನ್ನ ಪರದೇಶಿತನ ಕಳೆಯುತ್ತಿದೆ ಅಂದುಕೊಂಡಿದ್ದ. ತಂದೆ–ತಾಯಿ ಹೋದಮೇಲೆ ಇಡಿ ಮನೆಗೆ ಒಂಟಿಯಾಗಿ ಯಾರೂ ಜೊತೆಯಿಲ್ಲದೆ ಅಭದ್ರತೆ ಭಾವ ಅವನನ್ನು ಕಾಡುತ್ತಿತ್ತು. ಅಣ್ಣನೂ ಪುರೋಹಿತಕ್ಕೆ ಹೊರಗೆ, ಹೋದನೆಂದರೆ, ಹಗಲಿಡೀ ಅಂಗಳ, ಪಡಸಾಲೆ ನಡುಮನೆ ಎಂದು ಅಡ್ಡಾಡಿದರೂ ಯಾರಿದ್ದರು ಅಲ್ಲಿ? ಅವ್ವನ, ಅಪ್ಪನ ಹೆಜ್ಜೆ ಗುರುತುಗಳ ನೆನಪು ಮಾತ್ರ. ಅವ್ವನೇ ಹೇಳುತ್ತಿದ್ದ ಮಾತುಗಳು ಮಾತ್ರ ಪ್ರತಿಧ್ವನಿಸುತ್ತಿದ್ದವು. ಹೊರಗೆ ಓರಿಗೆಯ ಹುಡುಗರೆಲ್ಲ ಗುರುಕುಲ ಅಧ್ಯಯನ ಎಂದು ಹೋಗುತ್ತಿದ್ದರು. "ನೀನು ಓದಪಾ ಮಗನ, ಓದಿ ಮುಂದ ಬಾ" ಎಂದು ಗದ್ದ ತುದ್ದ ಹಿಡಿದು ಅಂತಃಕರಣದಿಂದ ಹೇಳುವ ಯಾವ ಹಿರಿಯ ಜೀವವೂ ಇರಲಿಲ್ಲ. ಅವ್ವ ಅಪ್ಪ ಹೋದ ಹೊಸದರಲ್ಲಿ ಅವರ ನೆನಪಾಗುತ್ತಿತ್ತು. ಅವ್ವನ ಧ್ವನಿ ಎಲ್ಲಾರ ಕೇಳಸ್ತದೇನು? ಬಾಳಾ ಊಟಾ ಮಾಡು ಬಾ, ವೇಂಕಣ್ಣ ಬಾಪಾ ನಾ ಇದ್ದೀನಿ ನಿನ್ನ ಜೋಡಿ ಅಂತ ಹೇಳ್ತಿದ್ದ ಅವ್ವನ ಧ್ವನಿ ಎಲ್ಲಾರ ಕೇಳಸ್ತದೇನು? ಅಪ್ಪನ ನಿಟ್ಟುಸಿರು ಎಲ್ಲಾರಾ ಕೇಳಸ್ತದೇನು? ಎನ್ನುವ ಅನಂತ ಹಂಬಲ ಆಶೆ ಅವನನ್ನು ಕಾಡುತ್ತಿತ್ತು. ಆಕಳನ್ನು ಹುಡುಕುವ ಕರುವಿನಂತೆ ಅಂಗಳ, ಪಡಸಾಲೆ, ಅಡಿಗೆಮನೆ ಎಂದು ಅವರನ್ನು ಹುಡುಕುತ್ತಿದ್ದ ಆದರೆ ಅವನಿಗೆ ಎಲ್ಲ ಬಟಾ ಬಯಲಿನಂತೆ ಖಾಲಿ ಖಾಲಿಯಾಗಿ ನಿನ್ನ ಪಾಲಿಗೆ ಎನ್ನುವಂತೆ ಬರಿ ಶೂನ್ಯತೆ ಆವರಿಸಿಕೊಂಡು ಬರುತ್ತಿತ್ತು.

ಇಂಥವೆ ದಿನಗಳು ಒಂದಾದ ಮೇಲೊಂದು ಕಾಲಿಟ್ಟುಕೊಂಡು ಬರುತ್ತಿದ್ದ ದಿನಗಳಲ್ಲಿ ಕಾಲಿಟ್ಟಿದ್ದಳು ಅವನ ಅತ್ತಿಗೆ ಹತ್ತಿರದ ಹಳ್ಳಾಪುರದಿಂದ ರಾಘಣ್ಣನನ್ನು ಕೈ ಹಿಡಿದು ಬಂದಿದ್ದಳು. ಬಡತನದಲ್ಲಿ ಹುಟ್ಟಿ, ಒಪ್ಪತ್ತು ಊಟಕ್ಕೂ ಗತಿಯಿಲ್ಲದೆ ಬಂದವಳಿಗೆ ಈಗ ಇಡೀ ಮನೆಯ ಸಾರ್ವಭೌಮತ್ವ ಸಿಕ್ಕಂತೆ ಮನೆಯಲ್ಲಿ ಕಾಲೂರಿದಳು. ಲಗ್ನವಾಗಿ ಬರುವಾಗ ಅವಳ ಅವ್ವ ಕೂಡ ಹೇಳಿದ್ದಳು. "ನಸೀಬವಾನ ಇದ್ದಿ ಮಗಳ ಕಾಡು ಅತ್ತಿ ಮಾವ ಇಲ್ಲ ಇದ್ದಿ ಒಬ್ಬ ಮೈದ್ನ ಅದು ಎನೂ ತಿಳಿದ್ಹಂಗ ಅದ. ಇನ್ನ ಗಂಡ ಮುಂಜಾನೆ ಹೋದ್ರ ಸಂಜೀಕ ಬರಾಂವಾ. ಹಿಂಗಾಗಿ ಮನಿ ಆಡಳಿತ ನಿಂದೇ ನೋಡು. ನೀ ಹ್ಯಾಂಗ ದಾಳಾ ಹಾಕಿದ್ರೂ ಸೂಸುತ್ರ ರಾಜ್ಯಭಾರ ಮಾಡಬಹುದು. ಅದೊಂದ ಮೈದ್ನ ನೀ ಹೇಳದ್ಹಂಗ ಕೇಳಿಕೊಂಡು ಬಿದ್ದಿರ್ತದ" ಎಂದಿದ್ದಳು. ಮಗಳು ಕೂಡ ಅದೇ ವೇದವಾಕ್ಯವೆಂದು ತಿಳಿದಳೋ ಎನೋ?

ಆ ಮನೆಗೆ ಕಾಲಿಟ್ಟಳು ಕಾವೇರಿ. ವೇಂಕಣ್ಣನಿಗೆ ತಾಯಿಯಂತಾಗಲ್ಲ, ನರರೂಪದ ರಾಕ್ಷಸಿಯಾಗಿ. ಅಣ್ಣನ ಲಗ್ನದ ಮೊದಲು ವೇಂಕಣ್ಣನಿಗೆ ಓಣಿಯವರು ಎಲ್ಲರೂ ಹೇಳುತ್ತಿದ್ದರು.



"ವೇಂಕಣ್ಣ ನಿಮ್ಮ ವೈನಿಯಾಗಿ ಬರಾಕಿ ನಿನಗೆ ಅಂತಃಕರಣದ ತಾಯಾಗಿ ಬರ್ತಾಳಪ್ಪಾ. ಪರದೇಶಿ ಹುಡುಗ ಆಸರೆಯಾಗ್ತಾಳ. ನಿಮ್ಮ ಮನಿ ಬೆಳಕಾಗ್ತಾದ. ಇಷ್ಟು ದಿವಸ ನೀ ತಂದೆ–ತಾಯಿನ್ನ ಕಳಕೊಂಡು ಪರದೇಶಿಯಾಗಿದ್ದಿ. ಇನ್ನ ನೀ ಹಂಗ ತಿಳ್ಕೋಬ್ಯಾಡ ನೋಡು. ಅತ್ತಿಗಿ, ಅಂದ್ರ ತಾಯಿ ಸಮಾನ. ನಿನ್ನ ಕಷ್ಟ ಮುಗದು" ಎಂದಿದ್ದರು.

ಆದರೆ ಆ ಮೇಲಿನ ದಿನಗಳು ಇಷ್ಟು ಕಠೋರವಾಗಿರುತ್ತವೆ. ಓಣಿಯವರಿಗಾಗಲಿ ಅಭೋದ ಹುಡುಗ ವೇಂಕಣ್ಣನಿಗಾಗಲಿ ಎನು ಗೊತ್ತು? ಅವನಿಗೆ ಅರಿವು ಬರುವ ಮೊದಲೇ ಅವ್ವನ ಮಡಿಲು ಅವನಿಂದ ದೂರವಾಗಿತ್ತು. ಆದರೂ ಅವನಿಗೆ ನೆನಪಿದೆ ಅವ್ವನ ಅಂತಃಕರಣದ ಮಾತುಗಳು, ಅಪ್ಪನ ಬೆಚ್ಚಗಿನ ಹೆಗಲು, ಅವೆರಡು ತನಗೆ ಶಾಶ್ವತವೆಂದುಕೊಂಡಿದ್ದವನಿಗೆ ವಿಧಿ ಅವೆರಡರಿಂದ ಅವನನ್ನು ದೂರ ಮಾಡಿತ್ತು. ದಿಕ್ಕಟ್ಟಂತೆ ಕೂತಾಗಲೆಲ್ಲ ಅವ್ವನ ನೆನಪಾಗುತ್ತಿತ್ತು.

"ಅವ್ವಾ ಎಲ್ಲಿದ್ದಿ ನೀನು? ಯಾಕ ಹಿಂಗ ನನ್ನ ನಡುನೀರಾಗ ಬಿಟ್ಟು ಹೋದಿ? ಮಕ್ಕಳಿಗೆ ತಾಯಿಯಿಲ್ಲದೆ ಪರದೇಶಿತನ ಎಷ್ಟು ಕೆಟ್ಟಿದು ಅಂತ ನಿನಗ ಗೊತ್ತಿಲ್ವೇನವಾ. ಇನ್ನ ನನಗೆ ಯಾರು ದಿಕ್ಕು?" ಎಂದು ಹಲಬುತ್ತಿದ್ದಾಗ. ತಟ್ಟನೆ ಅವಳು ಹೇಳಿದ ಮಾತುಗಳು ನೆನಪಾಗುತ್ತಿದ್ದವು.

"ಹುಚ್ಚಪ್ಪಾ ಯಾರಿಲ್ಲದವರಿಗೆ ದೇವರಿದ್ದಾನ ಕಂದಾ. ಆ ಭಗವಂತನನ್ನು ನಂಬು. ಮನುಷ್ಯ ಜನ್ಮಕ್ಕ ಆ ಭಗವಂತನಿಗಿಂತಾ ಹತ್ತಿರದ ಬಂಧು ಯಾರಿದ್ದಾರೆ?" ಎಂದಂತಾಗುತ್ತಿತ್ತು. ಎಲ್ಲಿದ್ದಾನವ್ವಾ ಆ ಭಗವಂತಾ ಯಾಕೆ ಬರವಲ್ಲಾ?" ಎನ್ನುತ್ತಿದ್ದ.

ಈಗ ಮನೆಗೆ ತಾಯಿಯಂತೆ ವೈನಿ ಬಂದಿದ್ದಾಳೆ ಅವಳೇ ತನಗೆ ಅವ್ವನಾಗಬಹುದು. ಅವ್ವನ ಅಂತಃಕರಣ ಕೊಡಬಹುದು. ಅವ್ವನಂತೆ ಮುಂದೆ ಕೂತು "ತಿನ್ನಪಾ ವೇಂಕಣ್ಣಾ ಛಲೋತ್ನಗೆ. ಬೆಳೆಯೋ ಹುಡುಗ ನೀನು" ಎಂದು ಅಂತಃಕರಣದಿಂದ ಬಡಿಸಬಹುದು. ಇಂಥ ಅಂತಃಕರಣದ ಸೆಲೆ ಇರಬಹುದೆ ಅತ್ತಿಗೆಯಲ್ಲಿ?

ಆವತ್ತಿನ ಬೆಳಗಾಗಿರಬಹುದು. ಈ ಮೊದಲಿನ ದಿನಗಳಲ್ಲಿ ರಾಘಣ್ಣನೇ ಮುಂಜಾನೆ ಆಕಳ ಹಾಲು ಹಿಂಡಿ ಕಾಸಿಟ್ಟು, ವೇಂಕಣ್ಣನಿಗೆ ಕೊಟ್ಟು ತಾನು ಕುಡಿದು ಹೋಗುವುದಿತ್ತು. ಎಂದಿನಂತೆ ವೇಂಕಣ್ಣ ಸ್ನಾನ ಮಾಡಿ, ಸಂಧ್ಯಾವಂದನೆ ಮುಗಿಸಿ, ಅಡಿಗೆ ಮನೆಗೆ ಬಂದ ಕಾವೇರಿ. ಮುಂಜಾನೆಯ ಅಡಿಗೆ ತಯಾರಿಗೊ ಎನೋ ಒಲೆ ಮುಂದೆ ಕೂತಿದ್ದಳು. ಒಳಬಂದು ನಿಂತು "ವೈನಿ, ಹಾಲು ಕಾದಿದ್ರ ಕೊಡ್ತೀರ, ಹಾಲು ಕುಡುದು ನಾನು ಬ್ಯಾರೆ ಕೆಲಸಕ್ಕೆ ಹೊಗ್ತೀನಿ"

ಒಂದೆರಡು ಗಳಿಗೆ ಅವನನ್ನು ಉರಿಗಣ್ಣಿನಿಂದ ನೋಡಿದ್ದು ಆ ಸ್ಪಷ್ಟ ಕತ್ತಲಲ್ಲು ಅವನಿಗೆ ಒಲೆ ಉರಿಯಂತೆ ಕಂಡಿತು.

"ಹಾಲ? ಯಾವ ಹಾಲಪಾ. . ಹಾಲು ಹಿಂಡಿ ನಾನು ಬ್ಯಾರೆದಕ್ಕ ತಗದಿಟ್ಟೀನಿ. ಇವತ್ತಿನಿಂದ ಅವೇಲ್ಲ ಬಂದ ನೋಡು"

"ಯಾಕ್ರಿ, ಮತ್ತೆ ನಾ ಎನು ಕುಡೀಲಿ?"

"ಎನು ಯಾಕ ಕುಡೀಬೇಕು? ನಿನ್ನಿ ಎರಡು ಭಕ್ರಿ ಅವ ತಿಂದು ಹೋಗು, ಅಂದ್ಹಂಗ ಎಲ್ಲಿ ಹೋಗಾಂವಿದ್ದಿ?"

"ಇನ್ನು ಮ್ಯಾಲೆ ನಾನು ಗುರುಕುಲಕ ಹೋಗ್ತೀನ್ರಿ. ಇಷ್ಟು ವರ್ಷ ಆಗಲಿಲ್ಲ. ಈಗ ನೀವು ಮನಿ ನೋಡ್ಕೋಳಿಕ್ಕೆ ಬಂದೀರಿ, ಅಣ್ಣಗ ಹೇಳಿ ಗುರುಕುಲಕ ಸೇರ್ತೀನಿ"

"ಗುರುಕುಲದ ಆಶಾ ಬಿಡಪಾ ಇನ್ನ ಓದಿ ಎನು ಪಂಡಿತ ಆಗಾಂವಿದ್ದಿ ಎನು? ನಿಮ್ಮಣ್ಣ ಓದ್ಯಾರಲ್ಲ ಸಾಕು. ಇವತ್ತಿನಿಂದ ನನಗೊ ಮನಿ ಕೆಲಸಕ್ಕೆ ಜೋಡಿಯಾಗು" ಎಂದಿದ್ದಳು.

ಯಾಕೋ ವೇಂಕಣ್ಣನಿಗೆ ನಿಂತ ನೆಲ ಕುಸಿದಂತೆ ತಾನು ಕುಸಿದ ನೆಲದೊಳಗೆ ಹೋಗುತ್ತಿದ್ದಂತೆ ಅನಿಸಿತು. ಹಂಗಾರ ನಾ ನಿಂದ್ರ ಬೇಕಂದ ನೆಲ ಗಟ್ಟಿ ಇಲ್ಲ, ನನಗ್ಯಾರೂ ದಿಕ್ಕಿಲ್ಲ.

ಈ ಅತ್ತಿಗೆ ಎನ್ನುವಾಕೆಯನ್ನು ನೋಡುತ್ತಿದ್ದರೆ, ಎದೆ ಬಾಯಿಗೆ ಬಂದಂತೆ ಆಗುತ್ತದೆ. ಅಣ್ಣನನ್ನು ಲಗ್ನವಾಗಿ ಬಂದ ಮೇಲೆ ಅವಳು ಒಂದು ದಿನ ಕೂಡ ತನ್ನನ್ನು ಹತ್ತಿರ ಕರೆದು ಮಾತಾಡಿಸಲಿಲ್ಲ, ಮುಂದೆ ನಿಂತು ತಲೆ ಮೇಲೆ ಕೈಯಾಡಿಸಿ "ನೀ ನನಗ ಮೈದ್ನ ಅಲ್ಲಪಾ, ಮಗಾ ಇದ್ದಂಗ, ನಿನಗೆ ಯಾರಿಲ್ಲಂತ ತಿಳಿಬ್ಯಾಡಾ ವೇಂಕಣ್ಣ, ಅವ್ವಾ ಅಪ್ಪಾ ಹೋದ್ರ ಎನಾತು? ಆ ಜಾಗಾಕ ನಾವಿದ್ದೀವಿ" ಎಂದು ಒಂದು ದಿನವೂ ಕಕ್ಕುಲತೆಯಿಂದ ಹೇಳಲಿಲ್ಲ. ಈ ಬದುಕು ಈ ಸಂಸಾರಾ ಈ ಗಂಡ ಮೈದುನ ಎಲ್ಲ ತನ್ನ ಮುಷ್ಠಿಯಿಲ್ಲಿದ್ದ ದಾಳಗಳು ಅವ್ವ ಅವಳಿಗೆ ಹೇಳಿರಲಿಲ್ಲವೆ? ಗಂಡನ ಮನೆಗೆ ಬರುವ ಮುಂದೆ.

"ನೀ ದಾಳಾ ಹಾಕಿದ್ಹಂಗ. ಅವು ಆಡತಾವ ಮಗಳ" ಎಂದು ಖರೇ. ಆಡಿಸುವ ಕಲೆ ತನಗೆ ಗೊತ್ತಿತ್ತು. ಗಂಡ ಮುಂಜಾನೆ ಪುರೋಹಿತಕೆ ಎಂದು ಹೋದರೆ ಬರುವುದು ಸಂಜೆಯೋ ರಾತ್ರಿಯೋ. ಮನೆಯಲ್ಲಿ ತಾನು ವೇಂಕಣ್ಣ ಇಬ್ಬರ ಹೊಟ್ಟೆಗೆ ಎಷ್ಟು ಅಡಿಗೆ ಮಾಡುವುದು. ತಾನುಂಡು ತೇಗಿ ಉಳಿದರೇ ಅದು ವೇಂಕಣ್ಣನ ಪಾಲಿಗೆ, ಅಷ್ಟಕ್ಕೂ ಅವನ ಹೊಟ್ಟೆ ತುಂಬಿಸುವ ಉಸಾಬರಿ ತನಗೇಕೆ? ಕೂಳಿಗೆ ದಂಡವಾದವನನ್ನು ಎನ್ನುವ ಲೆಕ್ಕಾಚಾರದಲ್ಲಿ ಅವಳು ಆ ಮನೆ ಕಾಲಿಟ್ಟವಳು, ಅಂದು ಕೊಂಡಿದ್ದನ್ನು ನಡೆಸುತ್ತಿದ್ದಳು ಕೂಡ.

ಇಂಥ ದಿನದಲ್ಲೇ ಬೆಳಗಾದರೇ ವೇಂಕಣ್ಣ ಒಂದು ಲೋಟ ಹಾಲಿಗಾಗಿ ಅವಳ ನಿರ್ದಾಕ್ಷಿಣ್ಯ ಕೇಳಬೇಕಾಯಿತಲ್ಲ. ವೇಂಕಣ್ಣ ಮಾತನಾಡದೆ ಹೊರಬಂದು, ಆಕಳು ಕಟ್ಟಿದ್ದ ಕೊಟ್ಟಿಗೆಗೆ ಬಂದ ವೇಂಕಣ್ಣ. ಹಸುಗಳು ಅವನನ್ನು ಕಂಡು ಎಂದಿನಂತೆ ಅಂಬಾ ಎಂದು ಮುಂದೆ ಮುಖ ತಂದು ಅವನ ಕೈ ನೆಕ್ಕಿದವು. ವೇಂಕಣ್ಣ ಅವುಗಳ ಮೇಲೆ ಪ್ರೀತಿಯಿಂದ ಕೈಯಾಡಿಸಿದ "ಗಂಗೆ ಇವತ್ತೆ, ನಿನ್ನ ಹಾಲು ಕುಡಿಯೊ ಪುಣ್ಯ ನನಗಿಲ್ಲ ನೋಡು" ಎಂದ. ಮತ್ತೆ ಕಸ ಉಡುಗಿ ಹಸುಗಳಿಗೆ ಮೇವು ಹಾಕಿ ನೀರಿಟ್ಟ. "ಸಾಕವ್ವಾ, ನಿನ್ನ ಸೇವಾ ಅಷ್ಟ ಸಾಕು ನನಗ" ಎಂದು ಹೊರಬಂದ.



ಬೆಳಗಿನ ಹೊತ್ತು ಸೂರ್ಯ ಮಲ್ಲಯ್ಯನ ಗುಡ್ಡದಿಂದ ಉದಯಿಸಿ ಮೇಲೇರುತ್ತಿದ್ದ. ಕೆಳಗಿನ ಓಣಿಯ ಅಂಚಿಗಿದ್ದ ಘಟಪ್ರಭೆಗೆ ಜನ ಸ್ನಾನ ಮಾಡಲು ಹೋಗುತ್ತಿದ್ದರು. ಯಾಕೋ ಮನಸ್ಸು ಬೇಸರವಾಗಿ ವೇಂಕಣ್ಣ ನದಿಯಂಚಿಗೆ ಬಂದ. ಮಂದವಾಗಿ ಮೈ ಹೊರಳಿಸಿ ಹರಿಯುತ್ತಿರುವ ಪ್ರಭೆ. ನದಿಯಲ್ಲಿ ಈಜುತ್ತ, ತೇಲುತ್ತ ಸಾಗುತ್ತಿರುವ ಯುವಕರು, ಒಂದೊಂದು ಸಲ ತನಗೂ– ಈಜಬೇಕೆಂದಾಗ, ನದಿಗಿಳಿದು ಮನದಣಿಯೇ ಈಜುತ್ತಿದ್ದ. ಆಗೆಲ್ಲ ತನಗೆ ಅವ್ವನ ಮಡಿಲಲ್ಲಿ ಮಲಗಿದಂತೆ ಭಾಸವಾಗುತ್ತಿತ್ತು. ವೇಂಕಣ್ಣ ನಿಟ್ಟುಸಿರುಬಿಟ್ಟು ನದಿಯಂಚಿನ ಬಂಡೆಯ ಮೇಲೆ ಕುಳಿತ ಯಾಕೋ ಮುಂದಿನ ಬದುಕು ಅಷ್ಟು ಸರಾಗವಾಗಿ ಸಾಗಲಾರದು ಎನಿಸುತ್ತಿತ್ತು.

ಎದುರಿಗೆ ಸೂರ್ಯನ ಕಿರಣಗಳು, ನದಿಯ ನೀರಿಗೆ ತಾಗಿ ಹೊನ್ನದ ಅಲೆಗಳಂತೆ ಹರಿಯುತ್ತಿತ್ತು. ನದಿಯ ಆ ಕಡೆ ಅಂಚಿಗೆ ಹಬ್ಬಿದ ತುಳಸಿ ತೋಟ, ಈ ನಿಸರ್ಗವನ್ನು ಸೃಷ್ಟಿಸಿದವರ್ಯಾರು? ಈ ಹಕ್ಕಿಗಳಿಗೆ ರೆಕ್ಕೆ ಕಟ್ಟಿದವರ್ಯಾರು? ನದಿಗೆ ಒರತೆ ಕೊರೆದವರ್ಯಾರು? ಅವ್ವ ಯಾವಾಗಲೂ ಹೇಳುತ್ತಿದ್ದಳು.

"ಈ ಸೃಷ್ಟಿಯ ಮೂಲದೇವರೆ ವೇಂಕಣ್ಣ ಅವನ ಇಚ್ಛಾ ಇಲ್ಲದಿದ್ರ ಒಂದು ಹುಲ್ಲುಕಡ್ಡಿ ಸುದ್ದೆ ಅಲ್ಲಾಡಂಗಿಲ್ಲ" ಎಂದು ಖರೇ. ಇದನ್ನೆಲ್ಲ ಸೃಷ್ಟಿಸಿ, ಪ್ರಪಂಚದ ಸೃಷ್ಟಿಗೆ ಮೂಲವಾಗಿರುವ ಆ ದೇವನೆಲ್ಲಿ? ಮನುಷ್ಯನ ಸೃಷ್ಟಿಗೆ ದೇವನೆ ಕಾರಣವಾದರೇ ಮನುಷ್ಯ, ಮನುಷ್ಯರ ಗುಣಗಳಲ್ಲೇಕೆ ಭಿನ್ನತೆ ಇರಿಸಿದ, ಸೀತಕ್ಕ, ಅವ್ವ, ಬಾಜೂಮನಿ ಗೋದಕ್ಕ ಇವರಲ್ಲಿದ್ದ ಆ ಅಂತಃಕರಣದ ಗುಣ ವೈನಿಯಲ್ಲಿ ಯಾಕಿಲ್ಲ? ಇಂಥಹ ಅನೇಕ ಗೊಂದಲಗಳಿಗೆ ಸಿಕ್ಕು ಅವನ ಮನಸ್ಸು ಕೂಡ ಗೊಂದಲವಾಗುತ್ತಿತ್ತು. ಬಿಸಿಲು ಚುರುಕಾದಂತೆನಿಸಿ, ವೇಂಕಣ್ಣ ಎದ್ದುನಿಂತ.

"ಎಷ್ಟು ಹೊತ್ತಾತು. . ವೈನಿ ಬರೂ ಮುಂದ ಬಜಾಯಿಸಿ ಕಳಸ್ಯಾರ ಲಗೂ ಬಾ ವೇಂಕಣ್ಣ, ಎಲ್ಲರ ಪೇರೋ ಅಂತ ತಿರಿಗಿಕೋತ ಹೋಗಬ್ಯಾಡಾ. ನಾ ಒಬ್ಬಾಕೇನ ಎಷ್ಟಂತ ದುಡೀಲಿ" ಎನ್ನುತ್ತಿದ್ದರು. ತಡಮಾಡಿ ಹೋದರೆ, ಎನೇನೋ ಬಾಯಿಗೆ ಬಂದಂತೆ ಮಾತಾಡುತ್ತಾರೆ. ಮಾತಿನಲ್ಲಿ ಅವ್ವ ಅಪ್ಪ ನನ್ನ ಹಂಗಿಸುತ್ತಾರೆ. ಯಾಕ ಬೇಕಾಗಿತ್ತು ಮುದಿಗಾಲಕ್ಕ ನಿನ್ನಂಥಾ ಮಗಾ. ನಿನ್ನ ಹಡದಿಟ್ಟು ನಮ್ಮ ಪಾಲಿಗಿಟ್ಟು ತಾವು ಥಣ್ಣಗ ಕಣ್ಣು ಮುಚ್ಚಿಗೊಂಡು ಹೋದ್ರು" ಎನ್ನುತ್ತಾರೆ. ಅವ್ವ ಅಪ್ಪನ ಬಗ್ಗೆ ಇಂಥ ಮಾತುಗಳನ್ನು ಕೇಳಲಿಕ್ಕಾಗುತ್ತದಯೆ ತನಗೆ? ಮೊದಲೇ ಅವ್ವನ ನೆನಪು ತನಗೆ ಬಾಧಿಸುತ್ತಿರುವಾಗ. ಇನ್ನು ಅವಳ ಬಗ್ಗೆ ಕೀಳಾಗಿ ಮಾತಾಡಿದರೆ? ಎಂಥ ಸಾಧ್ವಿ ಅವಳು. ಮಾತಲ್ಲಿ ಬೆಣ್ಣೆಯಿಟ್ಟು ಮಾತಾಡುತ್ತಿದ್ದಳೋ ಎನೋ? ಎಷ್ಟು ಮೃದು ಅವಳ ಧ್ವನಿ. ಯಾರಾದರೂ ಮನೆಗೆ ಬಂದರೆ ಎಷ್ಟು ಅಂತಃಕರಣದಿಂದ ಆದರಿಸಿ, ಅನ್ನ ಹಾಕುತ್ತಿದ್ದಳು. "ಎಲ್ಲಾರೂ ನನ್ನವರು ಅಂತ ಪ್ರೀತಿಸೋದನ್ನ ಕಲೀಬೇಕಪಾ, ಎಲ್ಲಾರ ಆತ್ಮದೊಳಗೂ ಭಗವಂತ ಇರ್‍ತಾನ" ಎನ್ನುತ್ತಿದ್ದಳು. ಇಂಥ ಅವ್ವನ ಬಗ್ಗೆ ಅವರು ಹಾಗೇ ಮಾತಾಡಿದರೆ ತನಗೆ ಒಳಗೆಲ್ಲೋ ಎದೆಯಲ್ಲಿ ಕೈಹಾಕಿ ತಿರುವಿದಂತಾಗುತ್ತಿತ್ತು. ಆದರೇನು? ಎದರುತ್ತರ ಕೊಡಲು ತನಗೆ ಧೈರ್ಯವಿಲ್ಲ. ಇನ್ನು ಅಣ್ಣನೊ? ಮುಂಜಾನೆ ಹೋದರೆ ರಾತ್ರಿಯೇ ಬರುವವ. ಅವನು ಬಂದರೇ ವೈನಿಯ ಬಾಯಿ ಬೀಗ ಹಾಕಿದಂತೆ ಇರುತ್ತದೆ.

ವೇಂಕಣ್ಣ ನಿಟ್ಟುಸಿರು ಬಿಟ್ಟು, ದೇವರೇ ಅವ್ವ ಹೇಳಿದಂತೆ ನೀನೇ ನನಗೆ ಗತಿ ಎಂದುಕೊಂಡು ವೇಂಕಣ್ಣ ಮನೆಗೆ ಬಂದ. ಅವನು ಮನೆಗೆ ಬಂದಾಗ ವೈನಿ ಮಡಿಯುಟ್ಟು, ಅಡಿಗೆಗೆ ಒಲೆ ಹೊತ್ತಿಸುತ್ತಿದ್ದಳು. ಹಸಿ ಕಟ್ಟಿಗೆ ಇರಬೇಕು. ಅಡಿಗೆ ಮನೆ ತುಂಬ ಹೊಗೆ ತುಂಬಿ, ಒಲೆ ಊದಿ ಊದಿ ಅವರ ಎರಡು ಕಣ್ಣು ಕೆಂಪಾಗಿ ಇನ್ನೂ ಕ್ರೂರತೆ ತುಂಬಿ ಕಾಣುತ್ತಿತ್ತು. ಆಕೆ ತಿರುಗಿ ನೋಡಿದರೆ ತಾನೇ ಬೀಳಬೇಕೆ ಅವರ ಕಣ್ಣಿಗೆ, ಹಸಿ ಕಟ್ಟಿಗೆಯ ಸಿಟ್ಟೆಲ್ಲ ತನ್ನ ಮೇಲೆ ತಿರುಗಿರಬೇಕು. ಆ ಹೊಗೆ ಅವರ ಕಣ್ಣತುಂಬ ಮೈ ತುಂಬ ಊಗಿ ಹೊರಹಾಕುತ್ತೆ. ತನ್ನ ಕಡೆಗೆ ಬಂದಂತೆ ಅನಿಸಿತು. ಒಲೆಯ ಒಳಗಿನ ಕೆಂಡದಂತೆ ಅವೆರಡು ಕಣ್ಣುಗಳು ತನ್ನನ್ನು ಸುಡುತ್ತವೆ ಎನೋ ಎನಿಸಿತು.

“ಆತೇನಪಾ ನೀನು ತಿರುಗುದು. ಮುಂಜಾನೆ ಎದ್ದು ಅದೊಂದ ಪಂಜಾದ ತುಕಡಿ ಹಚಗೋತಿ, ನದಿಕಡೆ ಹೋಗ್ತಿ. ಮನ್ಯಾಗ ಸ್ನಾನಾ ಮಾಡಿದ್ದೆಲ್ಲಾ ಮತ್ತೆ ನದಿಕಡೆ ಹೋಗಿದ್ದೇನು? ಎನ್ತೀರದ ಅಲ್ಲೆ ಸದಾ ಹೋಗಿ ಹೋಗಿ ಕೂಡ್ಲಿಕ್ಕೆ”

“ಹಂಗಲ್ರಿ ವೈನಿ”

“ಹಂಗೂ ಇಲ್ಲ, ಹಿಂಗೂ ಇಲ್ಲ, ನಿನ್ನಾಟಾ ನನಗ್ಗೊತ್ತದ. ಮನ್ಯಾಗಿದ್ರ ಕೆಲಸ ಮಡ್ಬೇಕಾಗದ್ತೇಂತ. ಮುಂಜಾನೆರ ನನಗೂ ಮೈ ತುಂಬ ಕೆಲಸ ಇರ್ತಾವ. ಹಾಲ ಹಿಂಡಬೇಕು, ಥಳಿ ರಂಗಗೋಲಿ ಹಾಕಬೇಕು, ದೇವರಮನಿ, ಅಡಗಿಮನಿ ಅನನ್ಕೊಂಡು ಮನಿಕ್ಯಾಗಸಾ ಉಡಗಬೇಕು. ಇದನ್ನೆಲ್ಲ ಅಸರಂತೆ ನಾನ ಮಾಡ್ಬೇಕು. ಮತ್ತೆ ಮ್ಯಾಲೆ ಇಂಥಾ ಹಸಿ ಕಟ್ಟಗಿ ಹಚಗೊಂಡು ಒಲಿ ಮುಂದೆ ಕೂತು ಭಕ್ರಿ ಬಡಿಬೇಕು”

“ಮುಂಜಾನೆ ಗ್ವಾದ್ಲಿ ಸ್ವಚ್ಛ ಮಾಡಿ ಆಕಳಿಗೆ ಹುಲ್ಲು–ನೀರು ಹಾಕಿದ್ದಿನ್ರಿ”

“ಆತು. .ಹಂಗಂತ ಮುಂಜಾನೆದ್ದು ಹೋರಗ ಹೋಗುದೇನು? ಮತ್ತ ಬ್ಯಾರೆ ಕೆಲಸ ಇರ್ತಾವಿಲ್ಲೊ. ನಾಳಿಂದ ಮನಿಕೆಲಸ ಮುಗಿತನಾ ಎಲ್ಲೂ ಹೋಗಬ್ಯಾಡಾ. ಸಂಜೀಕೆ ಹೋಗಿ ಆಕಳಾ ಮೇಯಿಸಿಕೊಂಡು ಬಾ. ಮತ್ತೆ ಅದು ಇದು ನೆವಾ ತಗೀಬ್ಯಾಡಾ”

“. . . .”

“ಯಾಕ ಮೂಕ ಬಸವನ ಗತೇ ನಿಂತಿ ಮಾತಾಡು”

“ಎನು ಮಾತಾಡ್ಲಿ ವೈನಿ, ನೀವು ದೊಡ್ಡವರು. ಅವ್ವನ ಜಾಗಾಕ್ ಬಂದೀರಿ”

“ಅವ್ವಾ, ಅಂತ ಅನ್ಬ್ಯಾಡಾ ಇನ್ನೊಂದು ಸಲ. ನಾ ಯಾವ ಅವ್ವಾ ನೀ ಯಾವ ಮಗನಪಾ, ನನ್ನ ಜೀವಕ್ಕ ಅನುವು ಮಾಡಿ ಬಡದ ಹೋಗ್ಯಾರ ನಿನ್ನ. ಯಾತಕ್ಕ ಬೇಕಾಗಿತ್ತು ಮುದಿಗಾಲಕ್ಕಾ”

“ಹಂಗ ಅನ್ಬ್ಯಾಡ್ರಿ ವೈನಿ, ದೇವರ ಇಚ್ಛಾದ ಮುಂದ ನಮ್ಮ ಇಚ್ಛಾ ಎನಿಲ್ಲ ಅಂತಿದ್ಲು ಅವ್ವ. ನಿನ್ನ ಋಣಾ ಈ ಮನ್ಯಾಗ ಅದನಪಾ ಹುಟ್ಟಿಬಂದಿ” ಅಂತಿದ್ಲು.

“ಆಹಾ, ವೇದ ಪಾರಂಗತಾ ಹೇಳ್ತಾನ ವೇದಾಂತ. ಎದಿ ಸೀಳಿದ್ರಿ ಎರಡಕ್ಷರ ಇಲ್ಲ, ಮಾತು ಕೇಳ್ರಿ. ರಗಡ ಮಾತಾಡ್ತಾನ, ನಾ ಅಡಗಿ ಮಾಡೂ ತನಕಾ, ಒಂದು ನಾಕು ಹಾಲಿನ



ಭಾಂಡಿ ಅವ ಗಲಬರಿಸಿಬಿಡು. ಹಂಗ ನಿಮ್ಮಣ್ಣಂದು ನಂದು ಎರಡೆರಡು ಅರಬಿ ಅವ. ಅಂಗಳದಾಗ ಬಚ್ಚಲದಾಗ ಒಗದ ಹಾಕು”

ಇವು ವೇಂಕಣ್ಣ, ಅವನ ಅತ್ತಿಗೆಯ ದಿನಚರಿಯ ಮಾತುಗಳಾದುವು ಆದರೂ ವೇಂಕಣ್ಣ ಎನೂ ಮಾತಾಡುತ್ತಿರಲಿಲ್ಲ. ಬೆಳೆಯುತ್ತಿರುವ ವಯಸ್ಸು ಅವನದು. ಉಂಡುಟ್ಟು, ಓಡಾಡುವ ವಯಸ್ಸು, ತನ್ನ ವಯಸ್ಸಿನವರೊಡನೆ ಗುರುಕುಲಕ್ಕೆ ಹೋಗಿ ಕಲಿಯುವ ವಯಸ್ಸು ಹೊಟ್ಟೆಯಲ್ಲೆಲ್ಲೊ, ಕಾಲು ಕೆರೆಯುತ್ತಿರುವ ಹಸಿವು. ಒಂದೀಷ್ಟು ಏನಾದರು ತಿಂದು ಗುರುಕುಲಕ್ಕೆ ಹೋಗಬೇಕು– ಇನ್ನಾದರೂ ವಿದ್ಯೆಯ ಗಂಧ ಹಚ್ಚಬೇಕು. ರಾಮಾಚಾರ್ಯರು ಎಷ್ಟು ಛಲೋ ಸಂಸ್ಕೃತ ವೇದಪಾಠ ಹೇಳಿಕೊಡುತ್ತಾರೆ ಎಂದಿದ್ದ ಕೇಶವ. ತಾನು ಹೋಗಿ ಕಲಿಯಬೆಕೆಂಬ ಹುಮ್ಮಸ್ಸು ಕಲಿತುಕೊಂಡರೆ, ತನಗೂ ಜನ್ಮ ಸಾರ್ಥಕ ಹಾಗೆನಿಸಿದಾಗ ಕೇಳುತ್ತಿದ್ದ.

“ವೈನಿ”

“ಎನಪಾ?”

“ನಾನು ಗುರುಕುಲಕ ಹೋಗ್ಬೇಕ್ರಿ, ಎನಾದ್ರೂ ಕಲಿಬೇಕು”

“ಎನು ಕಲಿಯಾಂವ ಇದ್ದಿ. ವೇದ ಪರಂಗತ ಪಂಡಿತ ಮಹಾಶಯ ಆಗಾಂವಿದ್ದಿ. ಈ ಮನಿಗೆ ನಿಮ್ಮಣ್ಣ ರಗಡ ಕಲಿತಾರ ಅದ ಸಾಕು. ಮೂರು ಮಂದಿ ಹೊಟ್ಟಿ ತುಂಬಿಸಲಿಕ್ಕೆ ಅವ್ರು ಘಟ್ಟಿ ಇದ್ದಾರ”

“ಹಂಗಲ್ರಿ ವೈನಿ, ವೇದಾಧ್ಯಯನ ಮಾಡೂದು. ಹೊಟ್ಟಿ ತುಂಬಿಸಲಿಕ್ಕೆ ಅಲ್ಲ. ಜ್ಞಾನ ಬೆಳಿಲಿಕ್ಕೆ ಇಷ್ಟುವರ್ಷ ನನಗೆ ಯಾವ ರೀತಿ ಕಲಿಲಿಕ್ಕೆ ಆಗಲಿಲ್ಲ. ಈಗ?

“ಈಗೇನು ಮಾಡಾಂವಿದ್ದಿ? ಗುರುಕುಲದ ನೆವಾ ಮಾಡಿ, ಅಲ್ಲಿ ಹೋಗಿ ಕುಕ್ಕರಿಸಬ್ಯಾಡಾ. ಮನ್ಯಾಗ ರಗಡ ಕೆಲಸ ಅವ. ಅವನ್ನೆಲ್ಲ ಮಾಡಿದ್ರ ಊಟ ಕಾಣ್ತಿ, ಇಲ್ಲ ಲಂಘನಾನ”

ಕಡ್ಡಿ ಕೊರೆದು ಹೇಳಿದಂಥಹ ಅವಳ ಮಾತುಗಳು. ಅವನ ಮನದ ಆಶೆಗಳನ್ನೆಲ್ಲ ಸುಡುತ್ತಿದ್ದವು. ಮನೆಯಲ್ಲಿ ಅವಳು ಹೇಳಿದ್ದೆ ಗೆರೆ ಹಾಕಿದಂತೆ. ಇಲ್ಲಾ, ಎರಡು ದಿನವಾದರೂ ಉಪವಾಸ ಸಾಯಬೇಕು. ಸಣ್ಣ ವಯಸ್ಸು ಹೊಟ್ಟೆ ಹಸಿವು ತಾಳಲಾದೀತೆ? ಜ್ಞಾನದ ಹಸಿವನ್ನು ಮೀರಿ ನಿಂತ ಈ ಹೊಟ್ಟೆ ಹಸಿವನ್ನು ಯಾಕೆ ಹಾಕಿದ ದೇವರು.

ಹಂಗಾದ್ರೆ, ಈ ಇಡಿ ಜನ್ಮ ತಾನು ವಿದ್ಯೆ ಇಲ್ಲದೆ ವೇದಾಧ್ಯಯನ ಇಲ್ಲದೆ ಅಕ್ಷರಗಳಿಗೆ ಶತ್ರುವಾಗಿ ಬಾಳಬೇಕೆ?

ಇಂಥ ಜೀವನ ಯಾಕೆ? ಇಂಥ ಬಾಳು. ಬಾಳೆ? ತಾನು ಸಣ್ಣವನಿದ್ದಾಗ ಅವ್ವ ಯಾವಾಗಲೂ ಹೇಳುತ್ತಿದ್ದಳಲ್ಲ.

“ವೇಂಕಣ್ಣಾ ನೀನು ಈ ಮನಿ ಬೆಳಕಪಾ. ಬ್ಹಾಳ ಶ್ಯಾಣಾ ಆಗ್ಬೇಕು. ದೊಡ್ಡ ದೊಡ್ಡ ಪಂಡಿತರೆಲ್ಲಾ ತಲಿ ತೂಗು ಹಂಗ ಆಗಬೇಕು, ಆಗ್ತಿ ಎನೋ?”

“ಹೂಂ ನವ್ವಾ ಆಗ್ತೀನಿ”

“ನಾ ಅದನ್ನ ನೋಡ್ತಿನೇನಪಾ?”

“ನೋಡ್ತೀಯವ್ವಾ”

ಹೌದು ಅವ್ವ ಎಷ್ಟು ಆಶೆ ಇಟ್ಟಿದ್ದಳು ತನ್ನ ಬಗ್ಗೆ ನಾನು ಅಪ್ಪನಂತೆ ತನ್ನಜ್ಜನಂತೆ ದೊಡ್ಡ ವಿದ್ವಾಂಸನಾಗಬೇಕೆಂದು. ಆದರೆ ಆ ದೇವರ ಇಚ್ಛೆಗೆ ಯಾಕೆ ಬರಲಿಲ್ಲ. ಇದೆಲ್ಲ ಅವ್ವ ಜೀವಂತವಿದ್ದು ನೋಡುವುದಿರಲಿ. ಆದರೆ ತನಗೆ ಈ ಜನ್ಮದಲ್ಲಿ ಜ್ಞಾನ ದಕ್ಕುತ್ತದೆಂಬ ನಂಬಿಕೆಯೇ ಹೋಯಿತಲ್ಲ. ಮಾತೆತ್ತಿದರೇ ಹಿಂದೆ ಬಾರಕೋಲ ಹಿಡಿದಂತೆ ನಿಂತು ಕೆಲಸ ಮಾಡಿಸುತ್ತಿದ್ದ ವೈನಿ, ತಾನು ಗುರುಕುಲಕ್ಕೆ ಹೋಗಬಾರದೆಂದು ಏನೋ ಏನಾದರೂ ಕೆಲಸ ಹೇಳಿ ತಪ್ಪಿಸುತ್ತಿದ್ದರು. ಅಣ್ಣನಂತೆ ಈಗೀಗ ಮನೆ ತನ್ನ ಬಗ್ಗೆ ತಲೆ ಹಾಕುವ ಚಿಂತೆಯನ್ನು ಬಿಟ್ಟಿದ್ದ. . . “ನಿಮ್ಮ ವೈನಿ ಹ್ಯಾಂಗ ಹೇಳ್ತಾಳ ಹಂಗ ಕೇಳು” ಅಂತಿದ್ದ.

ಆದರೆ ವೈನಿ ತನ್ನ ಇಡೀ ಹಗಲು ಹನ್ನೆರಡು ತಾಸುಗಳನ್ನು ಕೊಂಡು ಕೊಂಡು ಬಿಟ್ಟಂತೆ ಈ ಮನೆಗೆ ದುಡಿಸುತ್ತಿದ್ದಳು.

ಹೋಗಲಿ ಒಂದು ದಿನವಾದರೂ ಹೊಟ್ಟೆ ತುಂಬ ಊಟ ಹಾಕುತ್ತಿದ್ದಳೇ? ಊಹುಂ ಇದ್ದ ಬಿದ್ದ ಉಳಿದ ತಂಗಳು. ತನ್ನ ಪಾಲಿಗೆ.

ಮುಂಜಾನೆ ಎದ್ದು ನದಿಗೆ ಹೋಗಿ ಬಂದರೆ ಆಯಿತು. ತನ್ನ ಪಾಲಿಗೆ ದಿನದ ಇನ್ನುಳಿದ ವೇಳೆಯೆಲ್ಲಾ ತನ್ನ ಮೇಲೆ ಅವರ ಲಗಾಮು ಇದ್ದದ್ದೆ.

ನಸುಕಿನಲ್ಲೆ ಅಣ್ಣ ಸ್ನಾನ–ಜಪ–ಪೂಜೆ, ವೇಂಕಟೇಶ ಸ್ತೋತ್ರ ಅನ್ನುತ್ತಾ ಓಡಾಡುತ್ತಿದ್ದರೆ, ಅದನ್ನೇ ತದೇಕ ಚಿತ್ತದಿಂದ ಕೇಳುತ್ತಿದ್ದ ಅಣ್ಣತನ್ನ ಅನ್ಹೈಕ ಮುಗಿಸಿ ಅಂಗಳದಾಟಿ ಅವನ ಪೌರೋಹಿತದ ಮನೆಗಳಿಗೆ ಹೋದರೆ ಆಯಿತು. ಸುರುವಾಗುತ್ತಿತ್ತು ಅತ್ತಿಗೆಯ ಉತಾವಳಿ.

“ವೇಂಕಣ್ಣಾ ಎಲ್ಲಿದ್ದಿ ತಡಾ ಆತಿನ್ನ ದನದ ಗ್ವಾದ್ಲಿ ಉಡುಗು ಸಗಣಿ ಎತ್ತಿಡು. ದನಕ್ಕೆ ಹುಲ್ಲು ಹಾಕು. ನನಗೂ ಆಕಳಾ ಹಿಂಡಬೇಕು, ಹೇಳಿದ್ದು ಕೇಳಸ್ತೀಲ್ಲೊ, ಯಾಕ ಮೂಗದಯ್ಯನ ಗತೆ ಕೂತಿ ಹೂಂ ಅನ್ನು”

“ಹೂಂ ನ್ರಿ ಮಾಡ್ತೀನಿ” ಎನ್ನುತ್ತಿದ್ದ ಸಣ್ಣ ವಯಸ್ಸು, ವಯಸ್ಸಿಗೆ ಮೀರಿದ ಕೆಲಸದ ಸರಮಾಲೆ. ಒಂದೇ ಎರಡೇ ದನದ ಗ್ವಾದ್ಲಿ ಸ್ವಚ್ಛ ಮಾಡ್ಬೇಕು. ದನಕ್ಕೆ ಹುಲ್ಲು ಹಾಕ್ಬೇಕು. ನೀರು ಕುಡಿಸಬೇಕು. ಇವನು ಹತ್ತಿರ ಹೋದರೆ ಸಾಕು. ಅಂಬಾ ಎನ್ನುತ್ತೆ ಪ್ರೀತಿಯಿಂದ ಇವನ ಮೈ ಕೈ ನೆಕ್ಕಬೇಕು. ಎದೆ ತುಂಬಿ ಬರುವುದು ಅವನಿಗೆ ಆ ಮೂಕಪ್ರಾಣಿಗಳ ಪ್ರೀತಿ ಕಂಡು “ಗಂಗೆ ನೀ ನನಗ ಅವ್ವನ ಗತೇನೆ ಪ್ರೀತಿ ತೋರಸ್ತಿ ನೋಡು, ಸಣ್ಣಾಂವಿದ್ದಾಗಿಂದ ನಿನ್ನ ಬಾಲಾ ಹಿಡಕೊಂಡೆ ಅಡ್ಡಾದೀನಿ ನಾ, ನಿನಗ ನೆನಪದ ಏನು ಅವ್ವ ಸುದ್ದೆ, ನಿಮ್ಮನ್ನು ಎಷ್ಟು ಪ್ರೀತಿ ಮಾಡ್ತಿದ್ಲು. ನಿಮ್ಮ ಮೈ ತೊಳಿತಿದ್ಲು. ನಿಮ್ಮ ಪೂಜಾ ಮಾಡ್ತಿದ್ಲು. ನಿಮ್ಮೊಳಗ ದೇವತೆಗಳಿದ್ದಾರೆ ಅಂತಿದ್ಲು. ಹಾಲು ಹಿಂಡು ಮುಂದ ನಿಮ್ಮ ಕಾಲಿಗೆ ನಮಸ್ಕಾರ ಮಾಡಿ “ಕಾಮಧೇನು ತಾಯಿ ನಮ್ಮವ್ವಾ ನೀನು” ಅಂತ ಹೇಳಿ ಹಾಲು ಹಿಂಡತಿದ್ಲು ಅಲ್ಲ. ಆಕೆ ನಮ್ಮನ್ನು ಪ್ರೀತಿ ಮಾಡ್ತೀದ್ಲು” ದೇವರ ಹಾಡು ಹೇಳಕೋತ ನಿನ್ನ ಕೆಚ್ಚಲ ತೊಳಿತಿದ್ಲು. ಎಷ್ಟೋ ಕೂಸುಗೊಳಿಗೆ



ತಾಯಿಯಿಲ್ಲದೆ ಹಸಿವಿನಿಂದ ಕಂಗೆಟ್ಟರ. ನಿನ್ನ ಕೆಚ್ಚಲಿಗೆ ಕೂಸಿನ ಬಾಯಿ ಹಚ್ಚಿ ಅವುಗೋಳ ಹೊಟ್ಟಿ ತುಂಬಿತೀದ್ಲು. ನೆನಪದ ಅದು ಏನು ಗಂಗೆ ನಿನಗ ಎಂದರೆ ಅದು ಅಂಥದ್ದೆ ಪ್ರೀತಿ ಭಾವ ತೋರಿಸಿ “ನಾ ಇದ್ದೀನಿ ನಿನಗ ತಾಯಿಗತೆ” ಎನ್ನುವಂತೆ ಮಾಡುತ್ತಿತ್ತು. ಮೂಕಪ್ರಾಣಿ ಅದು. ಅದರ ಭಾವನೆ ವೈನಿಗೆ ಬರಲಿಲ್ಲ. ತಾನು, ವೈನಿ ಈ ಮನೆಯ ತಾಯಿ ಎಂದು ತಿಳಿದರೂ ತಾನೂ ಈ ಅಂಗಳದ  ಮಗ ಎಂದು ಆಕೆ ತಿಳಿಯಲಿಲ್ಲ ಎನ್ನುವ ವ್ಯಸನವಾಗುತ್ತಿತ್ತು ಅವನಿಗೆ.

ಗ್ವಾದ್ಲಿ ಸ್ವಚ್ಛಮಾಡಿ, ಮನೆ ಕಸ ಉಡಗಿ, ಅಣ್ಣ ವೈನಿಯ ಮೈಲಿಗೆ ಬಟ್ಟೆಗಳನ್ನು ನದಿಗೆ ಒಯ್ದು ಒಗೆದು ಒಣಗಿಸಿ ತಂದಿಡಬೇಕು. ಪಲ್ಯಾ ಕಾಯಿ ಹೆಚ್ಚಿಡಬೇಕು. ಮತ್ತೆ ಸ್ನಾನಮಾಡಿ ಮಡಿ ನೀರು ತುಂಬಿಡಬೇಕು.

ಇವೆಲ್ಲ ಅಣ್ಣನಿಗೆ ಗೊತ್ತಾಗುತ್ತಲೇ ಇರಲಿಲ್ಲ. ಇಲ್ಲಾ ಗೊತ್ತಾದರೂ ವೈನಿಯ ಎದುರು ಮಾತಾಡಲು ಅವನಿಗೆ ಧೈರ್ಯವಿರಲಿಲ್ಲವೊ? ಇಷ್ಟೆಲ್ಲ ಕೆಲಸ ಮಾಡಿ ಹಸಿವೆಯಾಗಿ ಹೊಟ್ಟೆಯಲ್ಲಿ ಸಂಕಟವಾಗುತ್ತಿತ್ತು. ವೈನಿ ಏನsssರ ತಿನ್ಲಿಕ್ಕೆ ಕೊಡ್ರಿ’ ಅನ್ನುವ ಹಾಗಿಲ್ಲ. ಅಂದರೆ ಆಯ್ತು “ಯಾಕ ಹೊಟ್ಟ್ಯಾಗೇನು ದೆವ್ವ ಹೊಕ್ಕದೇನು? ನನ್ನ ಅಡಿಗೆ ಆಗ್ಲಿಕ್ಕೆ ಇನ್ನು ತಾಸು ಬೇಕು. ಬೇಕಂದ್ರ ನಿನ್ನಿವು ಎರಡು ತಂಗಳ ಭಕ್ರಿ ಅವ ತಿನ್ನು ಅನ್ನುತ್ತಿದ್ದಳು. “ಇನ್ನೂ ಸಾದ್ನಿ ಏನೂ ಮಾಡಿಲ್ಲ. ಖಾರಪುಡಿ, ಎಣ್ಣಿ ಹಾಕ್ಕೊಂಡು ತಿನ್ನು”ಎನ್ನುತ್ತಿದ್ದಳು.

ಮುಂಜವಿ ಮಣಿ ಬ್ರಾಹ್ಮಣ, ಚಿತ್ರಾವತಿ ಇಲ್ಲದೆ ಊಟ ಮಾಡಬಾರ್ದು ಅಂಥಾದ್ದು ತಂಗಳ ಭಕ್ರಿ ತಿಂದು

ಹೂಂ ಅವ್ವ, ಅಪ್ಪ ಇದ್ದಾಗ ಮನೆ ಕಳೆ ಹೇಗಿತ್ತು? ನಸುಕಿನಲ್ಲೆ ಅವ್ವ ಮೈ ತೊಳೆದು ಅಡಿಗೆ ಮಾಡಿ ಅಪ್ಪನ ದೇವರ ಪೂಜೆಗೆ ಅಣಿಮಾಡಿ, ವೈಶ್ವದೇವ, ಮನೆತುಂಬ ಮಂಗಳವಾದ್ಯದಂತೆ ಅಪ್ಪನ ಮಂತ್ರ. ವೈಶ್ವದೇವ ಹೋಮದ ಕಂಪಿನ ವಾಸನೆ ದೇವರೇ ಎಲ್ಲಿ ಹೋದವು. ಆ ದಿನಗಳೆಲ್ಲ ಅನಿಸುತ್ತಿತ್ತು.

ಯಾಕೋ ಎಲ್ಲ ನೆನಪಾದರೇ ಮನಸ್ಸಿಗೆ ಬಹಳ ವ್ಯಥೆಯಾಗುತ್ತಿತ್ತು. ದೇವರೇ ಯಾಕೆ ಮನೆಯ ಎರಡು ಉನ್ನತ ಜೀವಿಗಳನ್ನು ಕರೆದುಕೊಂಡೆ. ನನ್ನನ್ನಾದರೂ ಯಾಕೆ ಹುಟ್ಟಿಸಿದೆ? ಏನೀ ಜನ್ಮ ಯಾಕೆ ಇಂಥಹ ವ್ಯಸನ, ಯಾಕೆ ನನ್ನನ್ನು ಈ ಭೂಮಿಗೆ ತಂದೆ ದೇವರೇ, ಅವ್ವ ಏನು ಹೇಳುತ್ತಿದ್ದಳು

“ಬ್ರಾಹ್ಮಣ ಜನ್ಮ ಬರೂದು ಬ್ಹಾಳ ಕಷ್ಟಪಾ. ಬಂದಾಗ ಸಾಧನಾ ಮಾಡ್ಕೋಬೇಕು. ಓದು ಬರಿ ಕಲಿತು ಪಂಡಿತ ಆಗಬೇಕು. ದೇವರ ಮ್ಯಾಲೆ ಅನನ್ಯ ಭಕ್ತಿ ಇಡ್ಬೇಕು. ಅಂದ್ರ ಅಂವಾ ಅಸರಂತ ಕಾಯ್ತಾನ.ಯಾರೂ ಇಲ್ದವ್ರಿಗೆ ದೇವರು ಇರ್ತಾನ ಬಾಳಾ” ಎಂದು ಆದ್ರ ಎಲ್ಲಿದ್ದಾನ ಆ ದೇವರು ? ವೇದಾಧ್ಯಯನ ಮಾಡಿ ಗೊತ್ತಿಲ್ಲ, ಹಾಡಿ ಕರೆಯಬೇಕೆಂದರೆ ಹಾಡಿನ ಶಬ್ದಗಳು ಗೊತ್ತಿಲ್ಲ. ಅವ್ವ ಆಗಾಗ ಹಾಡುತ್ತಿದ್ದ ಪುರಂದರದಾಸರ ಹಾಡುಗಳನ್ನು ಕೇಳುತ್ತಿದ್ದೆ. ಸಣ್ಣ ವಯಸ್ಸು ಅರ್ಥ ಮಾಡಿಕೊಂಡು ಮನನ ಮಾಡಿ ಗೊತ್ತಿರಲಿಲ್ಲ. ಸ್ನಾನವಾದ ಮೇಲೆ, ಸಂಧ್ಯಾನ, ಗಾಯಿತ್ರಿ ಜಪ, ವೇಂಕಟೇಶ ಸ್ತೋತ್ರ ಬಿಟ್ಟರೆ ಆಯಿತು, ಅದೊಂದೆ ತನ್ನ

ಪಾಂಡಿತ್ಯ. ತನ್ನಲ್ಲಿರುವ ಆರ್ತರವದ ಧ್ವನಿ ಒಂದೇ. ಎಲ್ಲಿಯೂ ಅಂತರಂಗದ ಮೂಲೆಯಲ್ಲಿ ಅನನ್ಯವಾಗಿ ಅನುಗಾಲ ದೇವರನ್ನು ಕರೆಯುವ ಒಳಧ್ವನಿ, ದಿನದ ಕಷ್ಟ ಸೂಸುವುದರಲ್ಲಿ ಆ ಧ್ವನಿ ಎಲ್ಲಿಯೋ ಅಡಗಿ ಕುಳಿತಿರುತ್ತಿತ್ತು. ಭಗವಂತನಿಗೆ ಹೇಗೆ ಮುಟ್ಟೀತು? ಆ ಕರೆ ತಾನು ಚಿತ್ತಗೊಟ್ಟು ಆರ್ತರವದಿಂದ ಕರೆಯದಿದ್ದರೆ? ಇಲ್ಲ ದಿನದ ಈ ಕೆಲಸ ಜಂಜಾಟದಲ್ಲಿ ತನಗೆ ಏಕಾಗ್ರತೆ ಎಲ್ಲಿ ಬರಬೇಕು.

ಬಹಳವಾಗಿ ನೊಂದುಕೊಳ್ಳುತ್ತಿದ್ದ ವೇಂಕಣ್ಣ. ಮಧ್ಯಾನ್ಹದ ಎಲ್ಲ ಕೆಲಸ ಮುಗಿಸಿ ಚಳಿಯಿರಲಿ, ಬಿಸಿಲಿರಲಿ ಸಂಜೆಗೆ ದಿನಗಳನ್ನು ಮೇಯಿಸಲು ಕರೆದುಕೊಂಡು ಹೋಗುತ್ತಿದ್ದ ಅವನ ದನಗಳನ್ನು ಮೇಯಿಸಲೆಂದು ಹೊರಟರೆ ಅವನ ಗೆಳೆಯರೆಲ್ಲ ಸಂಜೆಯ ಅಧ್ಯಯನಕ್ಕೆಂದು ಹೋದವರು ಕೈಯಲ್ಲಿ ಯಾವ ಯಾವುದೋ ಗ್ರಂಥಗಳನ್ನು ಹಿಡಿದುಕೊಂಡು ಬರುತ್ತಿದ್ದರು. ತಾವು ಅದ್ಯಯನ ಮಾಡಿದ ಅಧ್ಯಾಯಗಳನ್ನು ಒಬ್ಬರಿಗೊಬ್ಬರು ಚರ್ಚಿಸಿಕೊಂಡು ಬರುತ್ತಿದ್ದರು ಎಷ್ಟು ವ್ಯಥೆಯಾಗುತ್ತಿತ್ತು ತನಗೆ. ಹೀಗೆ ಸಂಜೆ ಅವರೆಲ್ಲ ಎದುರು ಸಿಕ್ಕಾಗ ಕೆಲವರೆಲ್ಲ ತನ್ನನ್ನು ನೋಡಿ ಒಂದು ರೀತಿಯಿಂದ ನಗುತ್ತ ಹೋಗುತ್ತಿದ್ದರು. ತನ್ನ ಹತ್ತಿರದ ಗೆಳೆಯ ಕೇಶವ ಮಾತ್ರ ನಿಂತು ಒಂದೆರಡು ಮಾತನಾಡುವವನಾದರೂ ಎನು?

"ವೇಂಕಣ್ಣಾ, ನಿನ್ನ ನೋಡಿದ್ರ ಮನಸಿಗೆ ಒಂಥರಾ ಬ್ಯಾಸರ ಆಗ್ತೇದ. ಓದು ಬರಿ ನಿನ್ನ ಹಣೆಯೊಳಗೆ ಬರೆದಿಲ್ಲ ಕಾಣಸ್ತದ"

"ಹೌದಪಾ ಬರಿದಿರಲಿಕ್ಕಿಲ್ಲ, ನೀವೆಲ್ಲ ನನ್ನ ಜೋಡಿಯವರು, ನೀವು ಓದು–ಬರಿ ಕಲಿಯೋದನ್ನು ನೋಡಿ ಸಂತೋಷಪಡ್ತೀನಿ ಬಿಡು"

"ಹಾಗಲ್ಲ ವೇಂಕಣ್ಣ ಅಕ್ಷರದಾಗಿದ ಮಹತ್ವ ನಿನಗೇನು ಗೊತ್ತು, ಅಕ್ಷರದಾಗ ಪ್ರಪಂಚ ಜ್ಞಾನಾನ ಅಡಿಗೆದ ಎನು ಉಪನಿಷತ್ತು? ಎನು ಭಾಗವತ? ಹೂಂ. . ಭಾಗವತ ಓತ್ತೀದ್ರಂತೂ ಕೃಷ್ಣನ ಇಡಿ ಬ್ರಹ್ಮಾಡ ಕಣ್ಣುಮುಂದೆ ಕಟ್ಟಿದ್ಹಂಗ. ಭಾಗವತ ಅಂದ್ರ ಎನು ಗೊತ್ತಿದ ಎನು ನಿನಗೆ?

"ಅದನ್ನ ಓದಲಾರ್ದ ಕೇಳಲಾರ್ದ. ನಾನಾರೇ ಹ್ಯಾಂಗ ತಿಳ್ಕೊಳಿ ಕೇಶವ"

"ಅದಕೂ ಪುಣ್ಯ ಬೇಕು ಬಿಡಪಾ, ಈಗೀಗ ಮಧ್ವ ಸಿದ್ಧಾಂತದ ಕೆಲವು ವಿಷಯ ಚರ್ಚಾನೂ ಮಾಡ್ತಾರ. . .ನಮ್ಮ ಇಡೀ ಭಾರತ ಖಂಡದ ತತ್ವ ನಿಂತಿರೋದೆ ಅದರ ಮ್ಯಾಲೆ. ಎನು ಸಂಸ್ಕೃತ ಎನು ಭಾಷಾ ಪಾಂಡಿತ್ಯ ಇಂಥಾದ್ದೆಲ್ಲ ಓದು ಪುಣ್ಯ ನಿನಗ ಸಿಗಲಿಲ್ಲಾ"

"ಹೌದು ಸಿಗಲಿಲ್ಲ ಬಿಡಪಾ ನನ್ನ ನಸೀಬದಾಗ ದನಾ ಮೇಯಿಸಿಕೊಂಡು ಜೀವನ ಕಳೆಯೋದ ಬರೆದಿರಬೇಕು"

"ಆದ್ರ ದನಾ ಮೇಯಿಸಿಕೊಂಡು ಇರೂದ ಜೀವನ ಅಲ್ಲ ವೇಂಕಣ್ಣ. ಹಿಂಗಾದ್ರ ದನಕ್ಕೂ ನಿನಗೂ ಎನು ವ್ಯತ್ಯಾಸ ಹೋಗ್ಲಿಬಿಡು. ಆಗದ ಮಾತು ತಗೊಂಡು ಎನು ಮಾಡೂದು" ಎನ್ನುತ್ತ ಕೇಶವ ಹೊರಟೇ ಹೋದ.



ಹೌದು, ಅವನು ಹೋದ, ಆದರೆ ಅವನು ಹೇಳಿದ ಮಾತುಗಳು ಅಂತರಂಗದಲ್ಲೆಲ್ಲೋ ಸುರಂಗ ಕೊರೆದಂತೆ ಕೊರೆದು ತನ್ನನ್ನು ಗಾಯಗೊಳಿಸುತ್ತಿವೆ ಎನು ಹೇಳಿದ ಅವನು.

ವೇದ–ಉಪನಿಷತ್ತು ಭಾಗವತ–ಮಧ್ವ ಸಿದ್ಧಾಂತ ಅದರ ಹಿಂದಿನ ಯಾವ ಅರ್ಥಗಳು ತನಗೆ ಗೊತ್ತಿಲ್ಲ. ದನಕ್ಕೂ ನಿನಗೂ ಎನು ವ್ಯತ್ಯಾಸ ಅಂದನಲ್ಲ, ದನದಿಂದ ಜಗತ್ತಿಗೆ ಉಪಕಾರ ಉಂಟು. ಅದು ದೇವರ ಅಭಿಷೇಕಕ್ಕೆ ಹಾಲು ಕೊಡುತ್ತದೆ ಅದರಲ್ಲಿ ಮೂವತ್ಮೂರು ಕೋಟಿ ದೇವತೆಗಳಿದ್ದಾರೆ ಎಂದಿದ್ದಳು ಅವ್ವ, ಜನ ಅದನ್ನು ಗೋಮಾತೆ ಎಂದು ಪೂಜೆ ಮಾಡುತ್ತಾರೆ.

ಆದರೆ ತಾನು? ಭೂಮಿಗೆ ಭಾರವಾಗಿ ಆ ಮೂಕ ಪ್ರಾಣಿಗಿಂತ ಕಡೆಯಾದನೆ? ಪಂಡಿತರ ವಂಶದಿಂದಲೇ ಬಂದವನು ತಾನು ಅಜ್ಜ, ಅಪ್ಪ, ಅಣ್ಣ ಇವರಗೆ ಒಲಿದ ವಿದ್ಯೆ ತನಗೇಕೆ ಒಲಿಯಲಿಲ್ಲ ? ಹೀಗೆ ದನ ಮೇಯಿಸಿಕೊಂಡು ಅತ್ತಿಗೆಯ ಚಾಕರಿ ಮಾಡುತ್ತ ಹೀನ ಬದುಕನ್ನು ಕಳೆಯಬೇಕೆ? ದೇವರೆ ಯಾವ ತಪ್ಪಿಗೆ ಈ ಶಿಕ್ಷೆ. ಯಾಕೋ, ವೇಂಕಣ್ಣನಿಗೆ ತನ್ನ ಹೀನಾಯ ಬದುಕನ್ನು ನೆನೆದು ಕಣ್ಣೀರು ಬಂತು. ಒಳಗೆಲ್ಲೋ ದುಃಖದ ಒರತೆಯಿರಬೇಕು; ಹೃದಯವನ್ನು ಕೊರೆದು ಬರುತ್ತಿದೆ ಅದು. ಅವ್ವನ ನೆನಪು ಅಪ್ಪನ ನೆನಪು ತನ್ನದಲ್ಲದ ಬದುಕಿನ ನೆನಪು, ಅಜ್ಞಾನಿಯಾಗಿ ಹೀಗೆ ಎಷ್ಟು ದಿನ ಬದುಕು ಸಾಗಿಸಬೇಕು ಎನ್ನುವ ದುಃಖದ ಭಾವ ಉಕ್ಕಿಬಂದು ವೇಂಕಣ್ಣ ಕಣ್ಣೊರೆಸಿಕೊಂಡ. "ಬಾಳಾ ಯಾಕಳ್ತೀಯೊ?" ಯಾರೋ ಹೆಗಲ ಮೇಲೆ ಕೈ ಇಟ್ಟಂತಾಯ್ತು. ವೇಂಕಣ್ಣಾ ತಲೆ ಎತ್ತಿದ್ದ. ಓಣಿಯ ಹಿರಿಯಜ್ಜ. ಗೋವಿಂದಜ್ಜ ನಿಂತಿದ್ದಾರೆ. ಎಷ್ಟು ಕಕುಲಾತಿಯಿಂದ ಕೇಳುತ್ತಿದ್ದಾರೆ. ಎಷ್ಟು ದಿನಗಳಾದವು ತಾನು ಇಂಥಹ ಅನನ್ಯದ ಅಂತಃಕರಣದ ಮಾತು ಕೇಳಿ. ಅಪ್ಪನಿಗೆ ತುಂಬಾ ಬೇಕಾದವರು. ಅಪ್ಪ ಇದ್ದಾಗ ಯಾವಾಗಲೂ ಮನೆಗೆ ಬರುತ್ತಿದ್ದರು. ಅಪ್ಪ ಹೋದ ಮೇಲೆ ಅತ್ತಿಗೆ ಬಂದ ಮೇಲೆ ಎಲ್ಲ ಸಂಬಂಧಗಳು ಹರಿದು ಹೋದವೂ ಹ್ಯಾಗೆ?

"ಯಾಕಪಾ ಬಾಳಾ ಯಾಕಾ ಈ ಕಣ್ಣೀರು, ಅವ್ವಾ ಅಪ್ಪನ ನೆನಪಾತೇನು?"

"ಅವ್ರ ನೆನಪ ಅಷ್ಟ ಅಲ್ಲ. ಮನಸಿಗೆ ಭ್ಹಾಳ ಖೇದ ಆಗೇದ್ರಿ ಅಜ್ಜ"

"ಖೇದ? ಯಾಕಪಾ? ಖರೇ ಖೇದ ಆಗೂದು ಸಹಜೀಕ ಅದ ನೋಡು. ಸಣ್ಣ ವಯಸ್ಸು. ಅವ್ವಾ, ಅಪ್ಪನ ಕಳ್ಕೊಂಡಿ. ಇನ್ನ ನಿನ್ನ ವೈನಿ. ಬ್ಯಾಡಾ ಬಿಡು. ಓಣಿಯವರ ಬಾಯಿಂದ ಕೇಳೀನಿ ನಿನಗೆ ತ್ರಾಸ ಕೊಡ್ತಾಳಂತಲ್ಲಾ"

"ತ್ರಾಸಕ್ಕ ನಾ ಅಂಜಗಿಲ್ರಿ ಅಜ್ಜ ಆದ್ರ"

"ಮತ್ತೇ?"

"ನನಗೆ ವಿದ್ಯಾ ಕಲೀಲಿಕ್ಕೆ ಆಗಲಿಲ್ಲಂತ ಮನಸ್ಸು ಕಚ್ಚ ಆಗೇದ್ರಿ, ನನ್ನ ವಾರ್ಗಿಯವರೆಲ್ಲ ಗುರುಕುಲಕ್ಕೆ ಹೋಗ್ತಾರೆ. ವೇದ ಸಂಸ್ಕೃತ ಅಂತ ಕಲಿತಾರ. ಆದ್ರ ನಾನು? ನಾ ಬರೀ ದನಾ ಮೇಯಿಸಿಕೊಂಡು ಜೀವನಾ ಕಳೀಬೇಕಾತಲ್ರಿ"

ಗೋವಿಂದಜ್ಜ ಎರಡು ಗಳಿಗೆ ಮಾತಾಡಲಿಲ್ಲ. ಮತ್ತೆ ಅವನ ತಲೆ ಸವರಿ ಹೇಳಿದರು. "ನೋಡು, ನಾನು ಬ್ಹಾಳ ಸಲ ಹೇಳಿದೆ ನಿಮ್ಮ ರಾಘಣ್ಣಗ. ಹುಡುಗನ್ನ ವಿದ್ಯ ಕಲೀಲಿಕ್ಕೆ ಗುರುಕುಲಕ್ಕ ಕಳಸು ಅಂತ ಆತ್ರಿ ಅಂತಾನ. ಮತ್ತೆ ತನ್ನ ಕೆಲಸದಾಗ ಮಗ್ನ ಆಗ್ತಾನ. ಮೊನ್ನೆ ಕೇಳಿದ್ರ ಹೇಳಿದ. ಇಲ್ರಿ ನಾನ ಮನ್ಯಾಗ ಕಲಿಸ್ತೀನ್ರಿ. "ಅಂದ ಎನ ಕಲಸ್ಯಾನೇನು?" ಎಂದರು.

"ಇಲ್ರಿ, ಅಜ್ಜ, ಅಣ್ಣಗರ ಎಲ್ಲಿ ವ್ಯಾಳ್ಯಾ ಅದ ಕಲಿಸಲಿಕ್ಕೆ, ವೈನಿಗೆ ಹೇಳಿದ್ರೆ, ನೀ ಎನು ಕಲಿತು ದೊಡ್ಡ ಪಂಡಿತ ಆಗಬೇಕಾಗಿಲ್ಲ. ಕೆಲಸ ಮಾಡಿಕೊಂಡು ಮನ್ಯಾಗಿರು ಅಂತಾರ ಅಜ್ಜ. ಹಂಗಾರ ಹಿಂಗ ನಾ ದಡ್ಡ ಆಗೇ ಉಳಿತಿನೇನ್ರಿ" ಎಂದ ವೇಂಕಣ್ಣ, ಎನು ಹೇಳುತ್ತಾರೆ ಅವರು. ಮತ್ತೆ ಅವನ ತಲೆ ಸವರಿ "ನಿನ್ನ ನಸೀಬದಾಗ ಕಲಿಯೂದು ಇದ್ರ ಕಲಿತಿಯಪಾ" ಇದು ನಮ್ಮ ಕೈಯಾಗಿನ ಮಾತಲ್ಲ ನೋಡು. ನಡಿ ಕತ್ತಲಿ ಆಗೋತನಾ ಕೂಡ ಬ್ಯಾಡಾ. ದನಾ ಹೊಡ್ಕೊಂಡು ಮನಿಗೆ ಹೋಗು" ಎಂದು ನದಿಯ ದಂಡೆಗುಂಟ ಕಾಲುದಾರಿಯಲ್ಲಿ ನಡೆದು ಹೋದರು. ಅವರು ಮರೆ ಆದರೂ ಅವರ ಮಾತು ಅವನ ಸುತ್ತಲೇ ಸುತ್ತುತ್ತಿತ್ತು. ನಿನ್ನ ನಸೀಬದಾಗ ಇದ್ರೆ ಆಗ್ತದಪಾ"

ಹಂಗಾರ ನನ್ನ ನಸೀಬರ ಎನಿದ್ದೀತು? ಎನಿಸಿತು. ವೇಂಕಣ್ಣ ಕೂತೆ ಇದ್ದ, ಸುಂದರವಾದ ಸಂಜೆ ಸೂತ್ತಲೂ ಹಸಿರಿನಿಂದ ಹರಡಿ ನಿಂತ ಗುಡ್ಡ. ಎದುರಿಗೆ ಮೈ ಹೊರಳಿಸಿ ಹರಿಯುವ ಪ್ರಭೆ. ಎದುರಿಗೆ ವಿಶಾಲವಾಗಿ ಹರಡಿದ ತುಳಸಿ ತೋಟ. ಆಕಾಶದಲ್ಲಿ ಹಾರಾಡುವ ಸ್ವಚ್ಛಂದ ಹಕ್ಕಿಗಳು, ಆ ಮೂಕ ಪಕ್ಷಿಗಳಲ್ಲೂ ಕೂಡ ಎಂಥ ಒಗ್ಗಟ್ಟು. ಒಂದು ಕಾಳು ಸಿಕ್ಕರೆ ಇನ್ನೊಂದು ಕರೆದು ಹಂಚಿಕೊಂಡು ತಿನ್ನುವ ಸಂಘಟನೆ. ಅದೇ ಮನುಷ್ಯನಲ್ಲಿ ಯಾಕಿಲ್ಲ? ಈ ಅಂತಃಕರಣ ಔದಾರ್ಯ? ಇಲ್ಲ ಮನುಷ್ಯ ಮನುಷ್ಯರಲ್ಲೇ ಅದು ಭಿನ್ನವಾಗಿದೆಯೋ ಸಂಬಂಧಗಳನ್ನು ಯಾಕೀಷ್ಟು ಸ್ವಾರ್ಥಿಯಾಗಿ ಉಪಯೋಗಿಸಿಕೊಳ್ಳುತ್ತಾನೆ.

"ಮನುಷ್ಯಾ ಅಂದ್ಮೇಲೆ ಎಲ್ಲಾರನೂ ಪ್ರೀತಿಸಬೇಕಪ್ಪಾ ವೇಂಕಣ್ಣಾ, ಎಲ್ಲಾರೊಳಗು ದೇವರಿದ್ದಾನ. ಪ್ರಾಣಿ ಪಕ್ಷಿಯೊಳಗ ಸುದ್ದೇ ದೇವರು ಇರ್ತಾನೆ" ಎನ್ನುತ್ತಿದ್ದಳು ಅವ್ವ. ಖರೇ ಎಲ್ಲರ ಆತ್ಮದೊಳಗೆ ಪರಮಾತ್ಮನಾಗಿ ಬೇರೆಯುವ ಆ ದೇವರೆ. ಎಲ್ಲರ ಗುಣಗಳನ್ನು ಯಾಕೆ ಒಂದೇ ರೀತಿ ಇಡುವುದಿಲ್ಲ ಎನಿಸುತ್ತಿತ್ತು. ಯಾಕೋ ಇತ್ತಿತ್ತಲಾಗಿ ವೈನಿಯ ನಡತೆ ವೇಂಕಣ್ಣನಿಗೆ ಬಹಳ ದುಃಖ ತರುತ್ತಿತ್ತು. ಅವಳ ಮಾತುಗಳೋ ಮಾತಲ್ಲೆ ಗರಗಸಯಿಟ್ಟು ಕೊರೆಯುತ್ತಾರೋ ಎನೋ ಕೇಳಿದರೆ ಖಿನ್ನತೆ ಆವರಿಸುತ್ತಿತ್ತು. ಮನೆಯಲ್ಲಿ ಹೆಜ್ಜೆ ಊರಲಾರದಷ್ಟು ಅಶಾಂತತೆ ತುಂಬಿ ತುಳುಕುತ್ತಿತ್ತು. ಆದರೂ ಮನಸ್ಸು ಗಟ್ಟಿಮಾಡಕೊಂಡು ಇರಬೇಕಾಗುತ್ತಿತ್ತು.

ತಾನು ಹುಟ್ಟಿ ಬೆಳೆದು ಈ ಮನೆಯಲ್ಲಿ ತನ್ನವರೆನ್ನುವವರು ಯಾರಿಲ್ಲ. ತನ್ನ ಅನಾಥತೆಯನ್ನು ತನ್ನ ಪರದೇಶಿತನವನ್ನು ಕೇಳುವರ್‍ಯಾರು?

"ಯಾಕಪಾ., ಎನಾತು?" ಎಂದು ತಲೆ ನೇವರಿಸಿ ಕೇಳುವ ಅವ್ವನಿಲ್ಲ, ಅಪ್ಪನಿಲ್ಲ. ಇದ್ದ ಅಣ್ಣನಿಗೆ ಕೇಳಲಿಕ್ಕೆ ಸಮಯವಿಲ್ಲ. ಇನ್ನು ವೈನಿ? ಅವರು ತನ್ನ ಅಂತಃಕರಣದ ಜೀವ ಹೇಗಾದರು? ಕೂತರೆ, ನಿಂತರೆ, ಅವರ ಛಡಿ ಎಟಿನಂಥ ಮಾತು, ತನ್ನನ್ನು ಘಾಸಿಗೊಳಿಸುತ್ತಿದ್ದವು. ಹಾಗಾದರೆ ತನ್ನ ಪಾಲಿಗೆ ಯಾರಿಲ್ಲವೆ ಎನಿಸಿದಾಗ ಅವ್ವ ಹೇಳಿದ ಮಾತು ನೆನಪಾಗುತ್ತಿತ್ತು.



"ಯಾರಿಲ್ಲದವ್ರಿಗೆ ದೇವರು ಇದ್ದಾನ, ವೇಂಕಣ್ಣ ಕಷ್ಟ ಬಂದ್ರ ಮನಸಿಗೆ ಘಾಸಿ ಅನಸಿದ್ರ ಅವನ್ನ ನೆನಸು, ಮನುಷ್ಯನ ಕಷ್ಟ ಪರಿಹಾರ ಮಾಡಾಂವಂದ್ರ ಅವನ, ಅವನ್ನ ಬಿಟ್ರ ಜಗತ್ತಿನ್ಯಾಗ ಯಾರು ಇದ್ದಾರ ಹೇಳು"

"ಹಂಗಾರ ಅಂವಾ ಎಲ್ಲಿದ್ದಾನವ್ವಾ? ಎಲ್ಲಿ ಹುಡುಕಬೇಕು ಅವನ್ನ"

"ಹುಚ್ಚಾ ಹಳೇ ಹುಚ್ಚಾ, ದೇವರನ್ನು ಹ್ಯಾಂಗ ಹುಡುಕೂದು ಅಂದ್ರ ಹ್ಯಾಂಗ? ಕರು ತಾಯಿ ಹಸುನ್ನ ಹುಡುಕಿದ್ಹಂಗ. ಕೂಸು ತಾಯಿನ್ನ ಹುಡುಕಿದ್ಹಂಗ. ಹುಡುಕಬೇಕು. ಮಗು ಅವ್ವಾ ಅಂತ ಅತ್ರ ಹಡೆದ ತಾಯಿ ಸಂಗಾತ್ಯೆ ಓಡಿ ಬರ್ತಾಳಿಲ್ಲೋ. ಹಂಗ ಆ ದೇವರು ತನ್ನ ಭಕ್ತನ್ನು ಹುಡಿಕ್ಕೊಂಡು ಬರ್ತಾನಪಾ. ಆದ್ರ ಆ ಕರೆಯೊಳಗಿನ ಪ್ರೀತಿ ಅಂತಃಕರಣ ಅನನ್ಯ ಭಾವ. ದೇವರನ್ನು ಕಾಣುವ ಹಂಬಲ ಆರ್ತರವ ಇರ್ಬೇಕು. ಇದರ ಹಿಂದ ಪರಿಪೂರ್ಣ ಭಕ್ತಿ ಇರ್ಬೇಕು. ದೇವರ ನಿನ್ನ ಹೊರ್‍ತು ಈ ಜಗತ್ತಿನೊಳಗೆ ಯಾರಿಲ್ಲಪಾ ಅಂತ ಅಗದಿ ಸಮರ್ಪಣ ಭಾವದಿಂದ ಕರದ್ರ ಓಡಿ ಬರ್ತಾನಪಾ ಆ ನಮ್ಮ ತಿರುಪತಿ ವೇಂಕಪ್ಪ, ಆ ವೇಂಕಪ್ಪ ಹೆಸರು ಇಟುಗೊಂಡಿ. ಅವನ್ನ ಅನವರತ ನಂಬು ಬಾಳಾ"

ಅವ್ವ ಹೇಳಿದ ಇಂಥ ಮಾತುಗಳು ಅವನನ್ನು ಯಾವಾಗಲೂ ಬಾಧಿಸುತ್ತಿದ್ದವು.

"ವೇಂಕಣ್ಣಾ ದ್ರೌಪದಿ ತುಂಬಿದ ಸಭಾದಾಗ ತನ್ನ ಮರ್ಯಾದಿ ಹೋಗ್ತಿದ್ರು ಎಲ್ಲರ್‍ರೂ ನನ್ನ ಮಾನಾ ಕಾಯರಿ ಅಂತ ಆಲಪರದು, ಕೇಳಿಕೊಂಡ್ರು. ಭೀಷ್ಮ, ದ್ರೋಣ, ಕೃಪಾಚಾರ್ಯ, ಧೃತರಾಷ್ಟ್ರ, ಗಾಂಧಾರಿ, ಊಹುಂ ಎಲ್ಲಾರೂ ಕಿಂವಿ ಕೇಳಿಸದ್ಹಂಗ ಕೂತಿದ್ರು. ಆಗ ಆಕೀಗೆ ತಿಳಿತು. ಎನಿದ್ರೂ ನನ್ನ ಕಾಪಾಡಾಂವಾ ಆ ಭಗವಂತನ ಅಂತ. ಎಲ್ಲಾ ಮಾನಾಭಿಮಾನ ನಿನಗ ಒಪ್ಪಿಸೀನಿ, ಕೃಷ್ಣಾ ಅಂತ ಎರಡು ಕೈ ಎತ್ತಿ ಕರದ್ಲು. ಸಂಗಾತ್ಲೆ ಬಂದ ಕೃಷ್ಣ, ಆಕೆ ಉಟ್ಟ ಸೀರೆ ಅಕ್ಷಯ ಮಾಡಿದ್ನಪಾ. ದಿನಾ ನಸಿಕ್ಲೆ ಉದಯರಾಗ ಹಾಡ್ತೀನಿ ಕೇಳಿಯಿಲ್ಲೊ?"

"ಕೇಳ್ತಿರಿನವ್ವಾ, ನೀ ಎಷ್ಟ ಛಂದ ಹಾಡ್ತಿ ಅವ್ವಾ ನೀ ಹಾಡ್ತೀಯಲ್ಲಾ. ಬೆಳಗ ಝಾವದಿ ಬಾರೋ ಹರಿಯೇ ಅಂತ ಕೇಳ್ತಿದ್ರ ದೇವರು ಬಂದ ಬಿಟ್ನೇನೋ ಅನಸ್ತದ. ಅವ್ವಾ ನನಗೂ ಹಾಡುದನ್ನ "ಕಲಸವ್ವಾ" ಹುಚ್ಚಪ್ಪಾ ಕಲಿಸೂದು ಎನದ ಇದರಾಗ, ದಿನಾ ನಾ ಹಾಡೂದು ಕೇಳಿದ್ರ ತಾನ ಬಾಯಿಪಾಠ ಆಗ್ತೇದ ವೇಂಕಣ್ಣ. ನಾ ಇದನ್ನೆಲ್ಲ ನಿನಗ ಯಾಕ ಹೇಳ್ತಿನಿ ಗೊತ್ತೇನು?"

"ಯಾಕವ್ವಾ"

"ನೋಡು ನಮಗೂ ವಯಸ್ಸಾತು. ಈಗೋ ಇನ್ನೊಂದು ಗಳಿಗೋ ಕಡಕೊಂಡು ಬೀಳು ಗಿಡಾ ನಾವು, ನಿನಗೆ ಆಸರಂತ ಬೇಕಲ್ಲಾ ರಾಘಣ್ಣ ಅಸರಂತ ಹೊರಗ ಇರಾಂವಾ. ನಾಳೆ ಅವನ ಲಗ್ನ ಆತಂದ್ರ ಅತ್ತಿಗಿ ಅದಾಕಿ. ತಾಯಿಗತೇ ಬಂದ್ರ ಸರಿ, ಇಲ್ಲಾದ್ರ ನಿನಗ ಕಣ್ಣೀರ ಕೂಳು ತಿನಸಿದ್ರ ಎನ್ಮಾಡೂದು"

"ನೀವ್ಯಾಕ ನನ್ನ ಬಿಟ್ಟು ಹೋಗ್ತೀರಿ, ಅವ್ವಾ ನೀವೆಲ್ಲಾ ಹೋಗ್ಬಾರ್‍ದು"

“ಹುಚ್ಚಾ, ಕಾಲನ ಕರೀಗೆ ಒಲ್ಲೆ ಅನ್ಲಿಕೆ ಆಗ್ತದೇನಪ್ಪಾ” ಜವರಾಯ ಬಂದು ನಡೀ ಅಂದ್ರ ಕೂತವ್ರು ಎದ್ದು ಕೈ ಝಾಡಿಸಿಕೊಂಡು ಹೋಗಬೇಕಾಗ್ತದಪಾ. ಆದರೆ ಹೇಳ್ತೀನಿ, ಇರೂತನಾ ನಾವು, ತಂದಿ–ತಾಯಿ ನಾವು ಹೋದ್ವಿ, ಅಂದ್ರೆ ಆ ದೇವರ ನಿನಗ ತಂದಿ ತಾಯಿಯಪಾ”

ಇವೆಲ್ಲ ಅವ್ವ ಹೇಳುತ್ತಿದ್ದ ಮಾತುಗಳು. ಈಗ ಯಾವಾಗಲೂ ಅಂತರಂಗದಲ್ಲಿ ತಂತಿ ಮೀಟಿದಂತೆ ಮೀಟುತ್ತಿದ್ದವು. ಯಾವದೋ ಒಂದು ಒಳದನಿ. ಅವನನ್ನು ಯಾವಾಗಲೂ ಎಚ್ಚರಿಸುತ್ತಿತ್ತು. ಎಷ್ಟು ಸ್ಪಷ್ಟವಾಗಿ ಕೇಳಿಸುತ್ತಿತ್ತು. ಆ ದನಿ “ಇದು ನಿನ್ನ ಹಾದಿಯಲ್ಲ ವೇಂಕಣ್ಣ, ನೀನು ಬ್ಯಾರೆ ಹಾದಿಯೊಳಗ ನಡೀಲಿಕ್ಕೆ ಬಂದಾವಾ. ನಿನಗ ನಿಂದ ಒಂದು ಹಾದಿ ಅದ. ನೀ ಸಾಧಿಸೂದು ಬ್ಹಾಳ ಅದ. ಪ್ರಪಂಚದ ಹಾದಿಯೊಳಗ ಸ್ಪಷ್ಟಾಗಿ ನಿನ್ನ ಹೆಜ್ಜಿ ಗುರುತು. ಎಲ್ಲಾರಿಗೂ ಕಾಣಿಸಬೇಕು. ಅಂಥಾ ಹಾದಿ ನಿಂದು” ಎಂದಂತಾಗುತ್ತಿತ್ತು.

ಯಾವುದು ಆ ಧ್ವನಿ? ಆ ಧ್ವನಿಯ ಉದ್ದೇಶವೇನು? ನನ್ನ ಹಾದಿಯ ಮೂಲ ಯಾವದು? ಯಾವ ಉದ್ದೇಶಕ್ಕೆ ಆ ಹಾದಿಯ ಅಂತ್ಯವಾಗಬೇಕು. ನಾನೇನು ಬಲ್ಲವನಲ್ಲ. ಬಲ್ಲದನಾಗಬೇಕೆಂದರೆ ತಿಳಿಸುವ ಸಾಧನ ಯಾವದು ಗೊತ್ತಿಲ್ಲ. ಅದೇ ಧ್ವನಿ ಮತ್ತೇ ಮತ್ತೇ ಹೇಳುತ್ತಿದೆ.

“ನಿಮ್ಮ ಅತ್ತಿಗೆ ಕೈಯಾಗ ಜೀತದಾಳಿನಗತೆ ದುಡಕೋತ ಆಕೆ ಹಾಕಿದ ತಂಗಳನ್ನ ಉಣಕೋತ. ಆಕೆ ಬಾಯಿಗೆ ಬಂದದ್ದನ್ನ ಬೈಸಿಗೋತ ಇರೂದ ನಿನ್ನ ಜೀವನದ ಹಾದಿ ಅನ್ನೋಂಡಿ ಏನು? ಇಂಥಾ ಜನ್ಮ ಬೇಕ ನಿನಗ ಕೇಳಿದಿಲ್ಲೊ ಕೇಶವ ಹೇಳಿದ್ದನ್ನ, ದನದ ಜೀವನ ನಿನ್ನ ಜೀವನ ಒಂದು ಆಗಬಾರ್ದು ಅಂತ” ಎನ್ನುವ ಒಳದನಿಗೆ ವೇಂಕಣ್ಣ ಏನು ಹೇಳುತ್ತಾನೆ.

ಸೂತ್ತಲಿನ ನಿಸರ್ಗ ಮುಳುಗುವ ಸೂರ್ಯ ಸುತ್ತಲೂ ಕವಿಯುತ್ತಿರುವ ಕತ್ತಲು, ಸಂಜೆ ಗತ್ತಲಲ್ಲಿ ಹರಿಯುವ ಪ್ರಭೆ ಅನಂತ ಆಗಸದಲ್ಲಿ ಮರಳಿ ತಮ್ಮ ಗೂಡನ್ನು ಸೇರಲು ಹಾರಾಡುತ್ತಾ ಹೋಗುವ ಹಕ್ಕಿಗಳು. ನಿಸರ್ಗದಲ್ಲಿ ಎಲ್ಲದಕ್ಕೂ ಎಲ್ಲ ಜೀವಿಗಳಿಗೂ, ಅವರ ಅವರದೇ ಆದ ಗತಿಯಿದೆ. ಗುರಿಯಿದೆ. ಆದರೆ ತನಗೆ? ಯಾವ ಅರ್ಥವಿದೆ ತನ್ನ ಜೀವನದ ಗತಿಗೆ? ಅಜ್ಞಾನದ ಮಡುವಿನಲ್ಲಿ ಮುಳುಗಿ ಮುಳುಗಿ ಏಳುತ್ತಿದ್ದೇನೆ. ಓರಿಗೆಯವರಂತೆ ತನ್ನಲ್ಲಿ ವಿದ್ಯೆಯಿಲ್ಲ, ಬುದ್ಧಿಯಿಲ್ಲ, ಕಲಿತ ನಾಕಕ್ಷರದಲ್ಲಿ ಯಾವ ಅರ್ಥವನ್ನು ಹುಡುಕಲಿಲ್ಲ. ವಿದ್ಯೆ ಕಲಿಯಬೇಕು ಎಂಬ ಹಂಬಲದಲ್ಲಿದ್ದಾಗ ಈ ಲೋಕಕ್ಕೆ ಬೆನ್ನು ತೋರಿಸಿ ನಡೆದರು. ಅಪ್ಪ–ಅವ್ವ, ಇನ್ನು ತನ್ನನ್ನು ಬುದ್ಧಿವಂತನನ್ನಾಗಿ ಮಾಡುವವರ್ಯಾರು?

ಅಣ್ಣನೋ ತನ್ನದೇ ಲೋಕದಲ್ಲಿದ್ದಾನೆ. ತನ್ನ ಸಂಸಾರದ ಜಂಜಾಟ ಹೊಟ್ಟೆ ತುಂಬಿಸಿಕೊಳ್ಳುವ ಜಂಜಾಟ. ಇನ್ನು ಅತ್ತಿಗೆ? ಅವಳಿಗ್ಯಾಕೆ ಬೇಕು ಈ ಪರದೇಶಿಯ ಹೊಣೆ ಗಾಣದೆತ್ತಿನಂತೆ ದುಡಿಯುತ್ತೇನೆಂದ ಹಿಡಿ ಊಟ ಹಾಕುತ್ತಾಳೆ. ಅದು ನಿಷ್ಟುರದ ಮಾತಿನಿಂದ, ಹಾಗಾದರೆ ಹಿಡಿ ಅನ್ನಕ್ಕಾಗಿ ತಾನು ಜನ್ಮವೆತ್ತಿ ಬಂದೇನೆ?



ಛೇ ಎಂಥಹ ಜನ್ಮವೆಂದುಕೊಳ್ಳುತ್ತ ವೇಂಕಣ್ಣ ಕತ್ತಲಾವರಿಸಿದೊಡನೆ ದನಗಳನ್ನು ಹೊಡೆದುಕೊಂಡು ಮನೆಗೆ ಬಂದು ಅವನ್ನು ಗ್ವಾದ್ಲಿಯಲ್ಲಿ ಕಟ್ಟಿಹಾಕಿ, ಅವುಗಳ ಮುಂದೆ ನೀರಿಟ್ಟು, ದೇವರದೀಪ ಹಚ್ಚಲು ಹೋಗುತ್ತಿದ್ದ. ದೇವರ ಮನೆಯಲ್ಲಿ ನಂದಾದೀಪದ ಬತ್ತಿ ದೊಡ್ಡದು ಮಾಡಿ ಬೆಳಗುತ್ತಿದ್ದ ಅದನ್ನೇ ನೋಡುತ್ತ ಹೇಳಿಕೊಳ್ಳುತ್ತಿದ್ದ.

“ದೇವರೇ, ನನ್ನ ಮನಸ್ಸಿನ ಕತ್ತಲನ್ನು ಕಳೆದು ನನ್ನ ಆತ್ಮಜ್ಯೋತಿಯನ್ನು ಬೆಳಗುವಂಥಹ ದೀಪವನ್ನು ನೀನು ಯಾವತ್ತು ಕರುಣಿಸಿ ಹಚ್ಚುತ್ತಿ, ಎಷ್ಟು ದಿವಸ ಎಷ್ಟು ಕಾಲ ಈ ಅಂಧಕಾರದಲ್ಲಿ ಬೆಳಲಿ ಬೆಂಡಾಗಲಿ? ಎಂದು ಕಣ್ಣೀರು ತುಂಬಿ ದೇವರ ಮಂಟಪದಲ್ಲಿದ್ದ ದೇವರ ಮೂರ್ತಿಯನ್ನು ನೋಡುತ್ತಿದ್ದ. ಈ ವಿಗ್ರಹಗಳಲ್ಲಿ ದೇವರಿದ್ದಾನೆ ಎಂದು ನಂಬುವುದು ಹೇಗೆ? ಇದ್ದಿದ್ದರೆ, ನನ್ನ ಕಷ್ಟಗಳನ್ನು, ನನ್ನ ಹಂಬಲಗಳನ್ನು ಯಾಕೆ ತಿಳಿಯುತ್ತಿಲ್ಲ. ವೇಂಕಣ್ಣನ ವಯಸ್ಸು ಸಣ್ಣದಿದ್ದರೇನಾಯ್ತು. ಅವನ ವಿಚಾರ ಮಂಥನ ಪಕ್ವವಾಗುತ್ತಿತ್ತು. ಇಲ್ಲದಿದ್ದರೆ ಅಧ್ಯಯನದ ಹಂಬಲ ದೇವರನ್ನು ಕಾಣುವ ಹಂಬಲ. ಇಷ್ಟು ವಯಸ್ಸಿಗೆ ಬರಲು ಹೇಗೆ ಸಾಧ್ಯ? ಅವನ ಆತ್ಮಚೈತನ್ಯ ದೊಡ್ಡದು ಅಂತಲೇ ಸಾಮಾನ್ಯರಂತೆ ಅವನ ಯೋಚನೆಗಳ ಧಾಟಿ ಸಾಗುತ್ತಿರಲಿಲ್ಲ.

“ಏ. .ವೇಂಕಣ್ಣ, ಎಲ್ಲಿ ಹೋದಿ? ನಡುಮನೆಯಿಂದಲೇ ಕೂಗುತ್ತಿದ್ದಾರೆ ಅತ್ತಿಗೆ. ಧ್ವನಿಯಲ್ಲಿ ಸ್ವಲ್ಪವಾದರೂ ಪ್ರೀತಿ ಅಂತಃಕರಣ ಬೇಡವೇ? ಕೆಲವು ಸಲ ಈ ಮನುಷ್ಯ ಸಂಬಂಧಗಳು ಯಾಕೆ ಇಷ್ಟು ನಿಷ್ಠುರವಾಗುತ್ತವೆ. ಯಾಕೆ ಹೀಗೆ ಮನಸ್ಸಿನ ಕ್ಷೋಭೆಯನ್ನು ಹೆಚ್ಚಿಸುತ್ತವೆ?

“ಎಲ್ಲಿ ಹೋದಿ ವೇಂಕ್ಯಾ, ಕರ್ದದ್ದು ಕೇಳಸ್ತೋ ಇಲ್ಲೋ?”

“ಬಂದಿನ್ರಿ ವೈನಿ”

“ಮತ್ತೆ ಸೇರ್ದೆನು ದೇವರಮನಿ. ಅಸರಂತ ದೇವರ ಮನ್ಯಾಗ ಏನು ಕೆಲಸ ಇರ್ತದ. ಹೋಗು ಪಡಸಾಲ್ಯಾಗ ದೀಪ ಹಚ್ಚಿಡು. ಧಡವ ಆಗಿ ಎಲ್ಲ ಹೇಳ್ಬೇಕು. ಹಂಗ ಒಲಿ ಮುಂದ ನಾಕಕಟಿಗಿ ಒಯ್ದಿಡು. ಹಾಲ ಕಾಸಲಿಕ್ಕೆ ಒಲಿ ಹಚ್ಚಬೇಕು” ಬ್ಯಾಸಿಗ ದಿವಸ, ನಿಮ್ಮಣ್ಣಗ ಹಾಲು–ಮೊಸರು ಗಡದ್ದ ಬೇಕು, ನಾಕ ಕಡೆ ಅಡ್ಡಾಡುವರು” ಎನ್ನುತ್ತ ತನನ. . ಎಂದು ಹಾಡು ಹಾಡುತ್ತ ಆ ಕಡೆ ಈ ಕಡೆ ಅಡ್ಡಾಡುತ್ತಿದ್ದಾಳೆ.

ಖರೇ ಬ್ಯಾಸಗಿಯ ದಿನಗಳವು, ಕಾಲಮಾನದಲ್ಲಿ ಕಾಲ ಚಕ್ರಗಳು ಬದಲಾಗುತ್ತವೆ. ಜೀವನದಲ್ಲಿ ಏರು–ಪೇರು ಅನ್ನುವದುಂಟು. ತಾನು ಕಷ್ಟಕ್ಕೆ ಹೆಗಲುಕೊಟ್ಟು ಭಾರವಾಗಿದ್ದರೂ, ಆ ಕಾಲಮಾನವನ್ನು ಎಳೆದುಕೊಂಡು ಹೋಗುತ್ತಿದ್ದೇನೆ. ಆದರೆ ಇದಕ್ಕೆ ಅಂತ್ಯವೆಂದೂ ಅವನ ಮನಸ್ಸು ಯೋಚಿಸಿ, ಯೋಚಸಿ ಹೈರಾಣವಾಗುತ್ತಿತ್ತು.

ಎಂದಿನಂತೆ ಬೆಳಗಾಯಿತು.

ಮಲ್ಲಯ್ಯನಗುಡ್ಡ ಏರಿ, ಸೂರ್ಯ ಪ್ರಖರವಾಗುತ್ತ ನಡೆದ. ನದಿ ಸ್ನಾನ, ಸಂಧ್ಯಾನ, ಗಾಯಿತ್ರಿಜಪ ಎಂದು ಎಲ್ಲ ಮುಗಿಸಿ ಮಧ್ಯಾನ್ಹದ ಅಡಿಗೆಯ ಮುಸುರೆ ಭಾಂಡಿ ಉಪಕರಣೆ ಎಲ್ಲ ತೊಳೆದಿಟ್ಟ. ಅಣ್ಣ ಮುಂಜಾನೆ ಹೊಗುವಾಗಲೇ ಹೇಳಿದ್ದ ಸಮೀಪದ ಹಳ್ಳಿಯಲ್ಲಿ

ಯಾರದೋ ದೇಸಾಯರ ಮನೆ ಲಗ್ನವಂತೆ ಅದರ ಪುರೋಹಿತಕೆ ಜವಾಬ್ದಾರಿ ಎಲ್ಲ ತನ್ನದೇ. ಬರುದು ನಾಕೆಂಟು ದಿನ ಆಗಬಹುದು. ಇಬ್ಬರು ಸಂಭಾಳಿಸಿಕೊಮಡು ಇರ್ರಿ" ಎಂದು ಹೇಳಿಹೋಗಿದ್ದ. ಅಣ್ಣ ಊರಲಿಲ್ಲ ಎಂದರೆ ಆಯಿತು. ಹರಿಬಿಟ್ಟ ಹಾವಿನಂತೆ ಅವಳ ವರ್ತನೆ. ಸುರುವಾಗುತ್ತದೆ ಕೆಲಸದ ಸರಪಳಿ.

"ವೇಂಕಣ್ಣ ಅಡಗಿ ಮನಿಕಸಾ ಉಡುಗು, ನಾಕುಕೊಡ ಕುಡಿನೀರು ಜಗ್ಗಿ ಹಾಕಿ, ಈಕಾ ನದಿಗೆ ಹೋಗಿ ನಮ್ಮ ಅರಬಿ ಒಕ್ಕೊಂಡು ಬಾ' ಉಡುಸಾರಣಿ ಮಾಡಿ ಕಲಗಚ್ಚು ಒಯ್ದು ದನಕ್ಕ ಹಾಕು"

ಒಂದಲ್ಲ ಎರಡಲ್ಲ, ಕೆಲಸದ ಸರಪಣಿ ಒಂದರ ಮೇಲೊಂದು ಕೊಂಡಿ ಹಾಕುತ್ತೆ. ವೇಂಕಣ್ಣನ ಕೈಗೆ ಬೇಡಿ ಹಾಕಿದಂತಿರುತ್ತಿತ್ತು.

"ಎಷ್ಟು ದಿನ ಎಷ್ಟು ವರ್ಷ ಈ ಚಾಕರಿ ದೇವರೆ, ಒಂದು ಗಳಿಗೆ ನಿನ್ನ ಧ್ಯಾನದಾಗ ಕಣ್ಮುಚ್ಚಿ ಕೂಡಬೇಕಂದ್ರ ಯಾಕ ಇಂಥಾ ಜಂಜಾಟ. ಒಂದು ಹಿಡಿ ಅನ್ನಕ್ಕೆ ಇವರ ಕಣ್ಣು ಕೈ ಕಾಯಕೋತ ಕೂಡಬೇಕಲ್ಲ" ಎನ್ನುವ ದುಃಖ ಅವನಿಗೆ.

ಮಧ್ಯಾನ್ಹ ಎರಡು ಹೊಡೆದ ಮೇಲೆ ವೇಂಕಣ್ಣ ಅತ್ತಿಗೆ ಹಾಕಿದ ಎರಡು ಒಣ ಭಕ್ಕರಿ, ಖಾರಪುಡಿ ಎಣ್ಣೆ ಎಂದು ಹಚ್ಚಿಕೊಂಡು ಊಟ ಮಾಡಿದ. ಯಾರದೋ ಮನೆಯಲ್ಲಿ ಅವರ ಮಗಳಿಗೆ ಕುಬಸವೆಂದು ಅವಳಿಗೆ ಊಟಕ್ಕೆ ಹೇಳಿದ್ದರಂತೆ. ಅದಕ್ಕಾಗಿ ಅವತ್ತು ಮನೆಯಲ್ಲಿ ಒಲೆ ಹೊತ್ತಿಸಿರಲಿಲ್ಲ. ಉಳಿದ ಎರಡು ತಂಗಳು ಭಕ್ಕರಿಯೇ ಅವನ ಹೊಟ್ಟೆಗೆ ಗತಿ ಕಾಣಿಸಬೇಕಿತ್ತು. ಬೆಳೆಯುವ ವಯಸ್ಸು. ಎರಡು ಒಣಭಕ್ರಿಯಾವ ಮೂಲೆಗೆ. ಆದರೆ ಅದನ್ನೇ ಅಮೃತವೆಂದು ತಿನ್ನಬೇಕಿತ್ತು. ಈ ಹೊತ್ತಿಗೆ ದೇವರು ತನಗೆ ಇದನ್ನೇ ಕರುಣಿಸಿದ ಎಂದು. ಆದರೆ ತಿಂದ ಮೇಲೆ ಖಾರಪುಡಿಯ ಪರಿಣಾಮವೋ ಎನೋ? ಹೊಟ್ಟೆಯಲ್ಲಿ ಉರಿ ಸುರುವಾಗುತ್ತಿತ್ತು. ಅದರೊಂದಿಗೆ ಹೊರಗಿನ ಬಿಸಿಲಿನ ಝಳ ಬಯಲುಸೀಮೆಯ ಬಿಸಿಲು ಬೇರೆ. ಕೆಂಡದಲ್ಲಿ ಹಾಕಿದಂತೆ.

ಮಧ್ಯಾನ್ಹ ಒಂದೆರಡು ಗಳಿಗೆ ಮಲಗಿ ವೇಂಕಣ್ಣ ಬಿಸಿಲು ಇಳಿಯುತ್ತಿದ್ದಂತೆ ದನಗಳನ್ನು ಬಿಚ್ಚಿಕೊಂಡು ಊರಾಚೆ ಬಯಲಿಗೆ ಹೋದ. ದನಗಳನ್ನು ಮೇಯಲು ಬಿಟ್ಟು ಒಂದು ಗಿಡದ ನೆರಳಿಗೆ ಕೂತ. ಯಾಕೋ ಎರಡು ದಿನಗಳಿಂದ ಮನಸ್ಸು ಸರಿಯಿರಲಿಲ್ಲ. ಯಾತಕ್ಕಾಗಿಯೋ ತಹ ತಹಿಸುತ್ತಿತ್ತು. ಅದು ಅವತ್ತು ಕೇಶವ ಸಿಕ್ಕು ಅಡಿದ ಅವನ ಮಾತುಗಳು ತನ್ನ ಜೀವನದ ವಿಶ್ಲೇಷಣೆಯನ್ನು ನಡೆಸಿರಬೇಕು ತನ್ನ ಬದುಕಿನ ಗುರಿ ಏನೆಂಬುದನ್ನು ಜಿಜ್ಞಾಸೆಗೆ ಹಚ್ಚಿರಬೇಕು.

"ಇವತ್ತು ಅಧ್ಯಯನದೊಳಗೆ ಭಾಗವತದ ಬಗ್ಗೆ ಹೇಳಿದ್ರು. ಭಾಗವತ ಅಂದ್ರ ಎನು ಗೊತ್ತೇನೋ ವೇಂಕಣ್ಣ ನಿನಗ. ಅದು ಬ್ರಹ್ಮಾಂಡ ಇದ್ದಂಗ. ನಿನಗೇನು ತಿಳಿದೀತು. ಬಿಡು ಅದರ ಮಹತ್ವ ಹೂಂ ನೀನು ಈ ದನಗಳು ಒಂದೇ ನೋಡು ಎನ್ನುವ ಅವನ ಮಾತುಗಳು. ಯಾಕಿಷ್ಟು ತನ್ನ ಅಂತರಂಗವನ್ನು ಕಲಕುತ್ತಿವೆ.



ಆ ಬ್ರಹ್ಮಾಂಡವೇ ಬೇಕೆನಿಸುವಷ್ಟು ಜ್ಞಾನದ ಹಸಿವು. ಅದರೊಡನೆ ಈ ಬೇಸಿಗೆಯ ಬಿಸಿಲಿನ ಝಳ ದೇಹ, ಒಳಗಿನ ಮನಸ್ಸು ಎರಡು ಸುಡುವಂತಿತ್ತು. ಒಣ ಭಕ್ರಿ ಖಾರಪುಡಿ ತಿಂದು ಹೊಟ್ಟೆಯಲ್ಲಿ ಅಗಿಷ್ಟಿಗಿ ತುಂಬಿದಂತೆ. ಆ ಉರಿಗೆ ತಣ್ಣನೆ ಎನಾದರೂ ಕುಡಿಯಬೇಕೆಂಬಾಶೆ ಎದ್ದುಹೋಗಿ ಹತ್ತಿರದಲ್ಲಿ ಹರಿಯುತ್ತಿರುವ ತಿಳಿಹಳ್ಳದಲ್ಲಿ ಒಂದೆರಡು ಬೊಗಸೆ ನೀರು ಕುಡಿದುಬಂದರೂ ಯಾಕೋ ಶಾಂತವಾಗುತ್ತಿಲ್ಲ. ಈ ಧಗೆ ವೇಂಕಣ್ಣ ಬಂದು ಮತ್ತೆ ಅದೇ ಗಿಡದ ನೆರಳಿಗೆ ಕುಳಿತ. ದನಗಳು ತಮ್ಮ ಪಾಡಿಗೆ ತಾವು ಮೇಯುತ್ತಲಿದ್ದವು. ಮೂಕಪ್ರಾಣಿಗಳಾದರೂ ತಮಗೆ ಬೇಕಾದ್ದನ್ನು ಎಲ್ಲಿ ಬೇಕಲ್ಲಿ ಮೇಯುವ ಸ್ವಾತಂತ್ರ್ಯವಿದೆ. ಹೊಟ್ಟೆ ತುಂಬುವತನಕ ಹಸಿರುಹುಲ್ಲಿಗೆ ಬಾಯಿಹಾಕಿ ಮೇಯುತ್ತವೆ. ಆದರೆ ತನಗೆ? ಅತ್ತಿಗೆ ಹಾಕಿದ್ದು ತಾನು ತಿನ್ನಬೇಕು. ಈ ಹೊಟ್ಟೆಯನ್ನುವ ಚಿಂತೆಯನ್ನು ಯಾಕೆ ಹಾಕಿದ ದೇವರು. ಹುಟ್ಟಿದ ಗಳಿಗೆಯಿಂದಲೇ ಹಸಿವನ್ನು ಕೂಡ ಹಚ್ಚಿ ಕಳಿಸಿರುತ್ತಾನೆ. ಖರೇ ತನಗೂ ಎಷ್ಟು ಸಂಕಟವಾಗುತ್ತಿದೆ ಈಗ ಹೊಟ್ಟೆಯಲ್ಲಿ ಮುಂಜಾನೆ ತಿಂದ ಒಣಭಕ್ರಿ. ಎಲ್ಲೋ ಅರಗಿ ಹೋಗಿದೆ. ಕೈಕಾಲುಗಳೆಲ್ಲ ನಿಸತ್ವವಾಗಿವೆ. ಬಿಸಿಲಿನ ಝಳಕ್ಕೆ ಹೊಟ್ಟೆಯಲ್ಲಿ ಕೂಡ ಉರಿ ಹತ್ತಿಕೊಂಡಿದೆ. ಹೋದೊಡನೆ ವೈನಿಯನ್ನು ಕೇಳಬೇಕು.

"ವೈನಿ ಈ ಬಿಸಿಲಿನ ಝಳಕ್ಕೆ ಹೊಟ್ಯಾಗ ಬೆಂಕಿ ಹಾಕಿದ್ಹಂಗ ಆಗೇದ್ರಿ ಸ್ವಲ್ಪ ಮಜ್ಜಿಗಿದ್ರ ಕೊಡ್ರಿ" ಎಂದು.

ಹುಚ್ಚಾ ಮಜ್ಜಿಗೆಗೆ ಶಾಂತವಾಗುವ ಉರಿ ಎನೊ ಇದು. ಊಹುಂ ಎಲ್ಲಿಯೋ ಅಂತರಂಗದ ಒಳಗೆ ಎನೋ ಬೇಕೆಂಬ ತಹ–ತಹಿಕೆಯ ಉರಿ. ಎಲ್ಲಿಯೋ ಒಂದು ಒಳದನಿ ಹೇಳುತ್ತಿದೆ. ವೇಂಕಣ್ಣ ನೀನು ಆರಿಸಬೇಕಾದುದು ಲೌಕಿಕದ ಈ ಹಸಿವಿನ, ಹೊಟ್ಟೆಯ ಉರಿಯಲ್ಲಪ್ಪಾ. ಅಲೌಕಿಕದ, ಜಿಜ್ಞಾಸೆಯ ಆತ್ಮ ಶೋಧನೆಯ ಉರಿ. ಅದು ಒಳಗೆಲ್ಲೋ ಅಡಗಿ ಕುಳಿತಿದೆ ಅಮೃತದಂಥಹ ಹನಿಗಳು. ಅಲ್ಲಿಂದ ಕಡೆದು ಬರಬೇಕು. ನಿನ್ನ ದಿವ್ಯ ಚೇತನವನ್ನು ಪುನಶ್ಚಿತಗೊಳಿಸಬೇಕು. ಅದು ನಿಜವಾದ ತಂಪು ನೀಡುವ ಹಾದಿ. ಆದರೆ ಆ ಧ್ವನಿ ಅವನಿಗೆ ಕೇಳಿಸುತ್ತಿಲ್ಲ.

ಅವನಿಗೆ ಹೆಚ್ಚು ಯೋಚಿಸಲು ಶಕ್ತಿ ಇರಲಿಲ್ಲ. ದನಗಳು ತಮ್ಮದು ಮೇಯುವದು ಮುಗಿದಿದೆ. ಮನೆಗೆ ಹೋಗಬೇಕು ಎನ್ನುವ ಸೂಚು ಕೊಡುವಂತ ಯಾವದೋ ದಿಕ್ಕಿಗೆ ತಲೆಎತ್ತಿ "ಅಂಬಾ" ಎಂದು ಕರೆಯಿತು. ಅದರ ಧ್ವನಿಗೆ ಇನ್ನೊಂದೆರಡು ಧ್ವನಿಗಳು ಪ್ರತಿಧ್ವನಿ ಕೊಟ್ಟವು. "ಅಂಬಾ", "ಅಂಬಾ"

ಮೂಕ ಪ್ರಾಣಿಗಳಾದರೂ ದೇವರು ಎಂಥಹ ಪ್ರಜ್ಞೆ ಕೊಟ್ಟಿದ್ದಾನೆ. ಅವಕ್ಕೆ ಬೆಳಿಗ್ಗೆ ಎದ್ದರೆ ಹುಲ್ಲು ಬೇಕು ಎನ್ನುವಂತೆ 'ಅಂಬಾ" ಎಂದು ಕರೆಯುತ್ತವೆ. ಹಾಲು ಹಿಂಡುವ ಮೊದಲು ಕೆಚ್ಚಲು ತುಂಬಿ ತನ್ನ ಕಂದನನ್ನು ಕರೆಯುತ್ತವೆ ಅಂಬಾ ಎಂದು. ಕರು ಹಾಲು ಕುಡಿದ ಮೇಲೆಯೇ ಹಾಲು ಹಿಂಡಲು ಬಿಡುತ್ತವೆ. ಸಂಜೆಯಾದರೆ ಮೇಯುವ ಹೊತ್ತಾಯಿತೆಂದು ಒಂದರ ಹಿಂದೊಂದು ಅಂಬಾ ಎನ್ನುತ್ತ ಒಂದು ಧ್ವನಿಯಿಂದ ಮತ್ತೊಂದು ಧ್ವನಿಗೆ ಪ್ರತಿಧ್ವನಿ ಕೊಡುತ್ತ ಮನೆಯಾತನನ್ನು ಕರೆಯುತ್ತವೆ.

ಮೇಯುವುದು ಮುಗಿದ ಮೇಲೆ ಮನೆಗೆ ಹೋಗುವ ಹೊತ್ತಾಯಿತೆಂದು ಕರೆಯುತ್ತವೆ. ದೇವರ ಸೃಷ್ಠಿಯ ಈ ನಿಯಮದ ಅಗಾಧತೆಯನ್ನು ಅರಿಯುವವರು ಯಾರು? ಪ್ರತಿಯೊಂದು ಜೀವಿಯ ಚೇತನಕ್ಕೆ ಅವನೇ ಕಾರಣ. ತಾನು ಈ ಜಗತ್ತಿಗೆ ಬರುವ ಮೊದಲೆ ತನ್ನ ಕಷ್ಟದ ಪಟ್ಟಿ ಮಾಡಿ ತನ್ನ ಹಣೆಗೆ ಹಚ್ಚಿ ಕಳುಹಿಸಿದನೋ ಹ್ಯಾಗೆ?

ವೇಂಕಣ್ಣ ನಿನ್ನ ಹುಟ್ಟೆ ಕಷ್ಟದ ಮೂಲ. ನೀನು ಭೂಮಿಗೆ ಬಂದದ್ದೆ ಇದನ್ನು ಅನುಭವಿಸಲು. ಬೇರೆಯವರಿಂದ ಹೀನಾಯ ಅನುಭವಿಸಲು. ಆದರೆ ಈ ಕಷ್ಟಕ್ಕೆ ಪರಿಹಾರವನ್ನು ದೇವರು ಯಾಕೆ ಸೂಚಿಸಲಿಲ್ಲ? ಇಲ್ಲಾ ಈ ಕಷ್ಟದ ಹಿಂದೆ ಅಗಾಧ ಅನುಭೂತಿಯನ್ನು ಆ ಭಗವಂತ ಇಟ್ಟಿದ್ದಾನೋ ಹ್ಯಾಗೆ?

“ಅಂಬಾ” ದನವೊಂದು ಬಂದು ಅವನ ಮುಂದೆ ನಿಂತು ಕೂಗಿತು. “ಬಂದೆ ಬಂದೆ ನಡೆಯವ್ವಾ. ಹೋಗೋಣ ನಡಿ ಇಳಿ ಬಿಸಿಲು ನೆಲ ಸುದ್ದೆ ಕಾದು ಹಂಚಾಗ್ಯದ. ನನ್ನಂಗ ಈ ಬಿಸಿಲು ನಿಮಗ ತಡಿವಲ್ದು ಅಲ್ಲ? ನಡೀರಿ. . ಎಯ್ ಗೌರಿ, ಭಾಗಿರಥಿ, ಬರ್ರಿ ಬರ್ರಿ” ಎನ್ನುತ್ತಾ ವೇಂಕಣ್ಣ ಹೆಗಲ ಮೇಲಿದ್ದ ಪಂಚೆಯಿಂದ ಮುಖ ಮೈ ಕೈ ಒರಸಿಕೊಳ್ಳುತ್ತೆ. ಉಶ್ಯಪಾ ಎನು ಶೆಖಿ ಎನ್ನುತ್ತ ಮನೆಯ ಹಾದಿ ಹಿಡಿದ. ಮನೆಗೆ ಬಂದಾಗ ವೈನಿ ಪಡಸಾಲೆಯಲ್ಲಿ ಕುಳಿತು ತನ್ನ ಕುಪ್ಪಸವನ್ನೇನೋ ಹೊಲೆದುಕೊಳ್ಳುತ್ತಿದ್ದರು. ವೇಂಕಣ್ಣ ಒಳಬಂದು ದನದ ಕೊಟ್ಟಿಗೆಯಲ್ಲಿ ದನಗಳನ್ನು ಕಟ್ಟಿ, ಗಂಗಾಳದ ತುಂಬ ನೀರನ್ನು ಅವುಗಳ ಮುಂದಿಟ್ಟು ಕುಡೀರಪ್ಪಾ ಎನ್ನುತ್ತ ಪ್ರೀತಿಯಿಂದ ಅವುಗಳ ಬೆನ್ನು ತಟ್ಟಿ, ಅದೇ ಪಡಸಾಲೆಗೆ ಬಂದು ಕುಳಿತ. ಬಿಸಿಲಲ್ಲಿ ಬಂದಿದ್ದರಿಂದ ಯಾಕೋ ಮೈ ಕೈ ಬಿಸಿ ಎಂದಂತಾಗಿ. ಎಲ್ಲೋ ಒಳಗಿನ ಝುಳ ಮೈ ತುಂಬ ಆವರಿಸಿತು. ಗಂಟಲೊಣಗಿ ಆರಿ ಅಂಗಾರವಾಗಿದೆ. ನೀರು ಕುಡಿದು ಬಂದರೂ ತಣಿಯದ ದಾಹ, ನಿನ್ನೆ ರಾತ್ರಿ ವೈನಿ ದೊಡ್ಡ ಗುಂಡಿ ತುಂಬ ಅಣ್ಣನಿಗಾಗಿ ಮೊಸರು ಹೆಪ್ಪು ಹಾಕಿದ್ದಾರೆ. ಇವತ್ತು ಅಣ್ಣ ಊರಲ್ಲಿಲ್ಲ. ಮೊಸರು ಮಜ್ಜಿಗೆ ಉಳಿದಿದ್ದರೆ ಸ್ವಲ್ಪ ಕೇಳಿ ಕುಡಿದು ಈ ದಾಹವನ್ನು ಆರಿಸಿಕೊಳ್ಳಬೇಕು. ಕೇಳಲೊ? ಬೇಡವೋ? ಕೇಳಿದರೆ ವೈನಿ ಎನನ್ನುತ್ತಾರೋ? ಆದರೂ ಇದು ತನ್ನ ಮನೆಯಲ್ಲವೆ? ತಾನು ಹುಟ್ಟಿ ಬೆಳೆದ ಮನೆ ಒಂದು ಲೋಟ ಮಜ್ಜಿಗೆಗಾಗಿ ತಾನು ದಾಕ್ಷಿಣ್ಯ ಮಾಡಿಕೊಳ್ಳಬೇಕೆ?

ವೇಂಕಣ್ಣ ಒಂದೊಂದೆ ಶಬ್ದಗಳನ್ನು ಜೋಡಿಸುತ್ತ ಕೇಳಿದ.

“ವೈನಿ . . .ಇವತ್ತು ಬಿಸಿಲು. ಝುಳ. . .ಬ್ಹಾಳದ ಅಲ್ರಿ?”

“ಹೂಂ ಅದ. . .ಕುಬುಸಕ್ಕೆ ಟಿಬ್ಬಿ ಹಾಕುತ್ತಲೇ ಹೇಳಿದಳು.

“ನನ್ನ ಗಂಟಲ ಆರಿ ಅಂಗಾರ ಆಗೇದ್ರಿ, ವೈನಿ ಮೈ ಕೈ ಎಲ್ಲ ಝುಳ ತುಂಬಿದ್ಹಂಗ ಆಗೇದ. . .

“ಹೂಂ, ಬಿಸಿಲಿನ ಧಗಿಗೆ ಹಂಗೇಲ್ಲ ಆಗೂದ. . .ಹಂಗಂತ ನಾಳಿಂದ ದನಾ ಮೇಯಸ್ಲಿಕ್ಕೆ ಆಗಂಗಿಲ್ಲಂತ ನೆವಾ ತೆಗೀಬ್ಯಾಡ ಮತ್ತ”

“ಅದಕಲ್ರಿ, ನಾ ಹೇಳಿದ್ದು, ನಾ ಯಾವತ್ತರ ಇಂಥಾ ಕೆಲಸಕ್ಕೆ ಇಲ್ಲ ಅಂದಿನೇನ್ರಿ?”



“ಇಲ್ಲ ಅಂತ. ..ಹೇಳಕ್ಕೆ ನೆವಾ ಒಂದು ಬೇಕಾಗಿರತಾವಲ್ಲ” ಎಂದು ಹೊಲಿಯುತ್ತಿದ್ದ ಕುಪ್ಪಸದಿಂದ ಸೂಜಿ ತೆಗೆದು ದಾರದುಂಡೆಗೆ ಸಿಕ್ಕಿಸಿ ಕುಪ್ಪಸ ಮಡಚಿಟ್ಟು ಎದ್ದಳು.

“ವೈನಿ”

“ಎನಪಾ ಮತ್ತೇನು? ನಿನ್ನ ಪುರಾಣಾ ಕೇಳ್ಳಿಕೆ ನನಗೆ ವ್ಯಾಳಾ ಇಲ್ಲ ನೋಡು”

“ಹಂಗಲ್ರಿ ನನಗೆ ಹೊಟ್ಯಾಗ ಝುಳ ತುಂಬಿದ್ಹಂಗ ಆಗಿ ಬ್ಹಾಳ ತ್ರಾಸ ಆಗ್ಲಿಕ್ಕೆ ಹತ್ತೇದ್ರಿ. ಒಂದು ವಾಟಗಾ ಮಜ್ಜಿಗಿ ಇದ್ರ ಕೊಡ್ರಿ” ಹೊಂಟವಳು ಉರಿಗಣ್ಣು ಮಾಡುತ್ತಲೇ ತಿರುಗಿ ನಿಂತಳು.

“ಎಲ್ಲಿಂದ ಬರ್ತಾವ ಮಜ್ಜಿಗಿ? ತಂದಿಟ್ಟಿ ಎನು ನಿಮ್ಮಪ್ಪನ ಮನಿಗಂಟು”

“ಹಂಗನ್ಬ್ಯಾಡ್ರಿ ವೈನಿ, ನಾ ಕೇಳಿದ್ದು ಒಂದು ವಾಟಗಾ ಮಜ್ಜಿಗಿ ನಿನ್ನೆ ಗುಂಡಿ ತುಂಬ ಹಾಲು ಹೆಪ್ಪು ಹಾಕಿರಿ. ಅಣ್ಣನು ಬರಂಗಿಲ್ಲ ಉಳಿದಿರಬೇಕು ಅಂತ ಕೇಳಿದೆ. ಒಂದು ವಾಟಗಾ ಮಜ್ಜಿಗೀಗೂ ನಮ್ಮಪ್ಪಗೂ ಯಾಕ ಗಂಟ ಹಾಕ್ತೀರಿ”

“ಎಲ್ಲಿಂದ ಬಂದಿತ್ತೊ ರೌಸು” ಕಾಲಪ್ಪಳಿಸುತ್ತ ಅವನ ಹತ್ತಿರ ಬಂದಳು. “ಅಂದ್ರ ಮನಿ ಸಾಮಾನು ಲೆಕ್ಕ ಹಾಕಲಿಕ್ಕೆ ಕಲ್ತಿ ಅನ್ನು. ಹಾಲು, ಮೊಸರು, ಅಕ್ಕಿ ಗೋಧಿ ಅಂತ ತಿನ್ನು ಸಾಮಾನು ಲೆಕ್ಕ ಹಾಕಾಂವಾ ನಾಳೇ ಎನೇನು ಪಾಲಿ ಪಂಕ್ತಿ ಅಂತೀಯೋ. ಬರ ಬರುತಾ, ಛಲೋ ಮಾತಾಡ್ಲಿಕ್ಕೆ ಕಲ್ತಿ. . .ಎದೀ ಸೀಳಿದ್ರಿ ಒಂದು ಅಕ್ಷರ ಇಲ್ಲ. ಹಸಿದಡ್ಡ. ಒಂದು ಧಮಡಿ ಘಳಿಸು ಯೋಗ್ಯತಾ ಇಲ್ಲ. ಪಾಪ ನಿಮ್ಮಣ್ಣ ಮುಂಜಾನೆ ಹೋದವ್ರು ರಾತ್ರಿ ತನಕಾ ಆ ಮನಿ ಈ ಮನಿ ಆ ಹಳ್ಳಿ, ಈ ಹಳ್ಳಿ ಅನ್ನೋತ ಕಾಲಿಗೆಚಕ್ರ ಕಟಗೊಂಡು ತಿರುಗಾಡಿ ಉಳಿಸಿಕೊಂಡು ಬರ್ತಾರ ನೀನು? ಒಂದು ದುಡ್ಡು ಘಳಿಸೋ ಯೋಗ್ಯತಾ ಇಲ್ಲ. ಮಜ್ಜಿಗಿ ಬೇಕಂತ ಮಜ್ಜಿಗಿ. . .ಮೈ ಝುಳಾ ಆಗ್ತದ ಮಜ್ಜಿಗಿ ಕೊಡ್ರಿ ಅಂತಾನ. ಶೆಟೀಲಿ ನನ್ನ ರಾಶಿ ಮ್ಯಾಲೆ ಬಂದ ಕೂತಿ ಕಾಣಸ್ತದ ನೀನು. ಹೋಗಬಾರದೆ ಎಲ್ಲರ ನಿನ್ನ ಹಾದಿ ನೀ ಹುಡಿಕ್ಕೊಂಡು, ಇವತ್ತು ಮೈ ಝುಳಾ ಆಗೇದ ಮಜ್ಜಿಗಿ ಕೊಡ್ರಿ ಅಂತಿ. ನಾಳೆ ಮೈ ಬಿಸಿ ಏರೇದ. ಮಗ್ಗಲಕ್ಕ ಹೇಣ್ತಿ ಬೇಕ್ರಿ ಅಂತಿ” ಎನ್ನುತ್ತ ಹತ್ತಿರ ನಿಂತ ಅವನ ಕಿಂವಿ ಹಿಂಡಿ,

“ನಾ ಹಾಕಿದ್ದು ತಿನ್ಕೊಂಡು ಈ ಮನ್ಯಾಗ ಬಿದ್ದಿರ್ತೀದ್ರ ಇರು ಇಲ್ಲಾ ಹೋಗು ಎಲ್ಲಾರ ಹಾಳಾಗಿ” ಎಂದು ಒಳಹೋದಳು.

ಮೈಮೇಲೆ ಕೆಂಡದ ಮಳೆ ಸುರಿದಂತೆ ಮಾತುಗಳು. ದಿಘ್ಮೂಡನಾಗಿ ಕುಳಿತೆ ಇದ್ದ ಇವನು.

ಶಾಂತಂ ಪಾಪಂ, ಶಾಂತಂ ಪಾಪಂ ಒಂದು ವಾಟಗಾ ಮಜ್ಜಿಗಿಗೆ ಇಂಥಹ ಮಾತುಗಳನ್ನು ಕೇಳಬೇಕಾಯ್ತು ! ಮಾನ ಅಭಿಮಾನ ಎಲ್ಲ ಬಿಟ್ಟು, ತನ್ನ ದೇಹವನ್ನು ಹಿಡಿ ಮಾಡಿ ಒಳಗಿನ ಸಂಕಟಕ್ಕೆ ಒಂದು ವಾಟಗಾ ಮಜ್ಜಿಗಿ ಕೇಳಿದೆ. ಅತ್ತಿಗೆಯಿಂದ ಇಂಥಹ ಮಾತೆ? ಮಗ್ಗಲಿಗೆ ಹೇಣ್ತಿನ್ನ ಬೇಡ್ತಿ ಎಂದು ಹೇಳುವಷ್ಟು ಹೀನಾಯವಾದೇನೆ ತಾನು? ಇಷ್ಟು ತುಚ್ಛವಾಗಿ ಇಷ್ಟು

ನಿಕೃಷ್ಟವಾಗಿ ಒಬ್ಬ ಮನುಷ್ಯ. ಅದು ತಾಯಿ ಹೃದಯದ ಹೆಣ್ಣು. ಮಗನ ಸಮಾನನಾದ ಗಂಡಸಿಗೆ ಹೇಳಬಹುದೆ? ಅಂದ ಮೇಲೆ ತನ್ನ ಅಸ್ತಿತ್ವ ಎನಾಯ್ತು? ತನ್ನ ಬದುಕಿನ ಮಾನ ಏನಾಯ್ತು?

ತಾನು ಬದುಕಿದ್ದೆ ಹಿಡಿ ಕೂಳಿಗೆ. ತಾನು ಜೀವಿಸುವುದೇ ಒಂದು ವಾಟಾಗಾ ಮಜ್ಜಿಗೆಗೆ ಅನ್ನುವಂತೆ ಆಡಿದರಲ್ಲ. ತನ್ನ ಚೈತನ್ಯವನ್ನೇ ಸುಟ್ಟು ಹಾಕುವಂಥ ಮಾತು. ತನ್ನ ಅಸ್ತಿತ್ವಕ್ಕೆ ಇದಕ್ಕಿಂತ ಅವಮಾನ ಬೇಕೆ? ಎಲ್ಲಿಯಾದರೂ ಹಾಳಾಗಿ ಹೋಗು ಅಂದರಲ್ಲ ಅಂದರೆ ತಾನು ಈ ಮನೆಯಲ್ಲಿರುವ ಅವರಿಗೆ ಸರ್ವಥಾ ಇಷ್ಟವಿಲ್ಲ.

ದೇವರೇ ಎಂಥೆಂಥ ಮಾತುಗಳನ್ನು ಕೇಳಿದೆ ಇವತ್ತು ಇಂಥ ಮಾತುಗಳನ್ನು ಕೇಳುವುದಕ್ಕಾಗಿಯೇ ನನ್ನನ್ನು ಬದುಕಿಸಿದೇಯಾ ಹೇಗೆ? ಬೇಕೇ ನನಗೆ ಇಂಥ ಜೀವನ. ಇಂಥಹ ಬದುಕು? ಇಷ್ಟು ದಿನ ಇದೇ ಅಂಗಳದಲ್ಲಿ ಆಡಿ ಬೆಳೆದೆದ್ದೆನಲ್ಲ ಇಲ್ಲೆ ನನ್ನವ್ವ ಕೂಸಿದ್ದಾಗ. ನನಗೆ ಹೆಜ್ಜೆ ಊರಿ ನಿಲ್ಲುವುದನ್ನು ಕಲಿಸಿದ್ದಳು. ನಿನ್ನಿಂದ ಈ ಮನೆ ಉದ್ಧಾರವಾಗಬೇಕು ಕಂದ. ಈ ಮನೆ ಬೆಳಗಬೇಕು ಎಂದಿದ್ದಳು. ಹಾಗಾದರೆ ಅವಳಾಡಿದ ಎಲ್ಲ ಮಾತುಗಳು ಎಲ್ಲಿ ಹೋದುವು. ಇಲ್ಲೆ ಇದೇ ಅಂಗಳದಲ್ಲಿ ನನ್ನ ಹೆಜ್ಜೆ ಗುರುತು ಸಮೇತ ಕರಗಿ ಹೋದವೆ?

ಅವನ ಧ್ವನಿ ಆರ್ತರವದಿಂದ ಕೂಗುತ್ತಿದೆ.

"ಅವ್ವಾ, ಎಲ್ಲಿದ್ದೀಯವ್ವಾ? ಎಲ್ಲಿದ್ದಿ? ನೋಡ್ದೇನು ನಿನ್ನ ಮಗನ ಸ್ಥಿತಿ. . ವೇಂಕಣ್ಣಾ ನೀ ಬೆಳ್ಳಿ ಬೆಳಕೋ ಕಂದಾ. . .ನಮ್ಮ ಮನಿ ಗೌರವ ನಿಂದ್ರಸಾಂವಾ ನೀನsss. ನಿನ್ನಿಂದ ಅಗಾಧ ಕಾರ್ಯ ಆಗಬೇಕಾಗ್ಯದ ಅಂತಿದ್ದಿ. ಎಲ್ಲಿ ಹೋತವಾ ನಿನ್ನ ಆಶೀರ್ವಾದದ ಮಾತು ಈಗ ನೋಡು. ನಾ ಅಂದ್ರ ಇಲ್ಲೆ ತೃಣಸಮಾನ ಮನಿ ಅಂಗಳ ಪಡಸಾಲೆ ಗುಡಿಸಿದ್ದಂಗ ಗೂಡಿಸಿ ನನ್ನ ಎಲ್ಲೊ ಒಗೆದಾರ. ಈ ಮನಿಗೆ ಗಾಣದೆತ್ತ ದುಡದ್ಹಂಗ ದುಡದೆ. ಆದ್ರ ಎನಾತು? ಇವತ್ತು ಒಂದು ವಾಟಗಾ ಮಜ್ಜಿಗಿಗೆ ಅನಬಾರ್ದ ಮಾತು ಅಂದ್ರು.

ಹಂಗಾರ ಈ ಮನಿಗೆ ನಾನು ಎನೂ ಅಲ್ಲೇನು? ಇಂಥಾ ಮಾತು ಕೇಳಿಕೋತ ನಾ ಇನ್ನು ಎಷ್ಟು ವರ್ಷ ಬದುಕಬೇಕು. ಒಂದು ದಮಡಿ ಘಳಿಸೂ ಯೋಗ್ಯತಾ ಇಲ್ಲ ಅಂದ್ರು. ಖರೇ ಅವರನ್ನೂದು ಖರೇ ಎದಿ ಸೀಳಿದ್ರ ಎರಡು ಅಕ್ಷರ ಇಲ್ಲದಂವಗ. ಎನೂ ಕಲಿದಂವಗ ಅಣ್ಣನ್ಹಂಗ ಪಂಡಿತ ಆಗಿ, ಪುರಾಣಾ ಪುಣ್ಯಕಥಿ ಹೇಳಿ ಹೊಟ್ಟಿ ತುಂಬಿಸಿಕೊಳ್ಳುವ ಯೋಗ್ಯತಾ ಎಲ್ಯದ ನಾನss ಇನ್ನೊಬ್ಬರ ಹಂಗಿನ್ಯಾಗ ಇರಬೇಕಾಗೈದ.

"ಹುಚ್ಚಾ, ಪುರಾಣ ಪುಣ್ಯಕಥಿ ಹೇಳೂದು ವೇದಾಧ್ಯಯನ ಮಾಡೂದು ಬರೀ ಹೊಟ್ಟಿ ತುಂಬಿಸಿಕೊಳ್ಳಲಿಕ್ಕೆ ಅಲ್ಲಪ್ಪಾ. ಮನಸ್ಸಿನ ಒಳಗಿನ ಜ್ಞಾನ ಹೆಚ್ಚಲಿಕ್ಕೆ. ಜ್ಞಾನದ ಮುಖಾಂತರ ದೇವರನ್ನ ಕಾಣಲಿಕ್ಕ ಅದಕ್ಕ ಜ್ಞಾನ ಒಂದೇ ಮುಖ್ಯ ಅಲ್ಲ. ಪರಿಜ್ಞಾನ ಬೇಕು, ಭಕ್ತಿ ಬೇಕು. ಅಂದ್ರ ಮನಶ್ಯಾ ಅದರಾಗ ಆಳವಾಗಿ ಇಳಿತಾನ. ತನ್ನ ತಾ ಬೆಳಕು ಕಂಡಕೋತಾನ ಅಂತರಂಗ ಕಣ್ಣು ತಗದ್ರೆ. ಆತ್ಮದ ಕಣ್ಣು ತಾನss ತಗೀತದ".



ಯಾರೋ ಒಳಗಿನಿಂದ ಹೇಳುತ್ತಿದ್ದ ಮಾತುಗಳು ಮನಸ್ಸಿನ ಯವದೋ ಒಂದು ಮೂಲೆಯಲ್ಲಿ ಅಡಗಿ ಕುಳಿತು ಹೇಳುತ್ತಿವೆ.

"ವೇಂಕಣ್ಣಾ ನಿನ್ನ ಒಳಗಿನ ಝಳಕ್ಕ, ನಿಮ್ಮ ವೈನಿ ಆಡಿದ ಮಾತು, ಬೆಂಕಿ ಹಂಗ ಇರಬಹುದು. ಅದರಿಂದ ನಿನ್ನ ಸ್ವಾಭಿಮಾನಕ್ಕೆ ಧಕ್ಕೆ ಆತು ಅಂತ ತಿಳ್ಕೊಬ್ಯಾಡಪಾ. ಬೆಂಕಿಯಿಂದ ಬೆಂಕಿ ಇನ್ನು ಪ್ರಜ್ವಲಿಸಲಿಕ್ಕೆ ಹಾದಿಯಾಗ್ತದ. ಅದ ನಿನ್ನ ಬೆಳಕಿನ ಹಾದಿ"

ಇಲ್ಲ ಅದು ಬೆಂಕಿ ಒಂದೇ ಅಲ್ಲ. ತನ್ನ ಆತ್ಮಘಾತ ಮಾಡಿದ್ದು ಅವ್ವ ಹೋದ ಮ್ಯಾಲೆ ಇಷ್ಟ ವರ್ಷ ತಾನು ಅನಾಥ ಆಗಿ ಬೆಳೆದೆ. ಇದೇ ಅಂಗಳದಾಗ ಅಪ್ಪನ ಕೈ ಹಿಡಕೊಂಡು ನಡೆದೆ. ಅಮ್ಯಾಲೆ ಆ ಹಿಡದ ಕೈನೂ ಕೊಸರಕೊಂಡು ನಂದು ನಿಂದು ಇಷ್ಟೆ ಋಣಾನಪಾ ಎಂದು ಕೊಸರಿಕೊಂಡು ಹೋತು. ತಾ ಇನ್ನು ಅನಾಥ ಆದೆ. ಆದ್ರ ತಾ ಅನಾಥ ಆದ್ರೂ ಸುದ್ದೆ ಅವ್ವನ ಧ್ವನಿ ಮಾತು ಮಾತ್ರ ತನ್ನ ಸೂತ್ತ ಯಾವಾಗ್ಲೂ ಸುತ್ತಿತ್ತು. ಓಣಿಜನ ತನ್ನ ಪರದೇಶಿತನಕ್ಕೆ ಆಸರಾದ್ರು, ಸಮಾಧಾನ ಮಾಡ್ತೀದ್ರು. ಸೀತಕಕ್ಕಿ ಮುಂದ ಕರದು ಗದ್ವ ತುಟಿ ಹಿಡಿದು ರಮಿಸಿ, ಅವ್ವ ಇಲ್ಲ ಅನ್ನೂದನ್ನ ಮರಸಿದ್ಲು ವಯಸ್ಸಾತು ಸೀತಾಕಕ್ಕಿ ಹೋದ್ಲು. ಅಣ್ಣನ ಲಗ್ನ ಆತು ವೈನಿ ಬಂದರು ಆದ್ರ ಎನಾತು? ಕಾವೇರಿ ಬಂದ್ಲು ಇನ್ನ ವೇಂಕಣ್ಣನ ಚಿಂತಿ ಬಿಡ್ತು. ಅವನನ್ನು ತಾಯಿಗತೇ ನೋಡ್ಕೋಳಿಕೆ ಬಂದಾಳ. ಆದರಸೂ ಆಕೆ ಬಂದಾಳ ಅಂತ ಓಣಿ ಮಂದಿ ಅತ್ತಿತ್ತ ಸರದ್ರು. ಆದ್ರ ದಿನ ದಿನಕ್ಕ ತನ್ನ ಕಷ್ಟ ಜಾಸ್ತಿ ಆತು. ತಾನು ಈ ಮನಿಗೆ ಲೆಕ್ಕಕ್ಕ ಇಲ್ಲದ್ಹಂಗ ಬೆಳೆದೆ. ತಾ ತ್ರಾಸ ಪಡೂದು ಆಜೂ ಬಾಜೂದವ್ರಿಗೆ ಗೊತ್ತಾಗ್ತಿತ್ತು. ಆದ್ರ ಅವರರೇ ಎನು ಮಾಡ್ತಾರ. ವೈನಿಗೆ ಎನಾರ ಹೇಳ್ಳಕ್ಕೆ ಬಂದ್ರ

"ನಮ್ಮನಿ ಉಸಾಬರಿ ನಿಮಗ್ಯಾಕ? ನಿಮ್ಮದು ನೀವು ನೋಡ್ಕೋಳ್ರಿ. ಇಲ್ಲಾದ್ರ ಅವನ್ನ ನಿಮ್ಮನಿಗೆ ಕರ್ಕೊಂಡು ಹೋಗಿ ಇಟಗೊಳ್ಳಿ" ಅಂತಿದ್ರು. ವೈನಿ ಬಾಯಿಗಂಜಿ ಓಣಿ ಮಂದಿ ತಮ್ಮ ಮನಿ ಉಸಾಬರಿ ಬಿಟ್ಟು. "ವೇಂಕಣ್ಣಾ ಇದು ನಿನ್ನ ಕರ್ಮಪಾ ಅನುಭೋಗಿಸು. ನಿನ್ನ ಕಾಲಮ್ಯಾಲೆ ನೀನು ನಿಂತಮ್ಯಾಲೆ ಈ ಮನಿಬಿಟ್ಟು ಹೋಗಿ ನಿನ್ನ ಹಾದಿ ನೀ ನೋಡ್ಕೋ" ಅಂದ್ರು.

ಹಂಗಾರ ತನ್ನ ಕರ್ಮ ಅನ್ನೂದು ಯಾವದು? ಹುಟ್ಟೀದ ಕೂಡ್ಲೆ ಬೆಳೀತ ಪರದೇಶಿ ಆಗೂದ? ಇಲ್ಲ ಎಲ್ಲಾರೂ ಓದುಬರಿ ಅಂತ ನಾಲ್ಕಕ್ಷರ ಕಲಿಯೋ ಮುಂದ ತಾನು ವೈನಿ ಕೈಯಾಗ ಕಸ ಮುಸುರಿ ಮಡ್ಕೋತ ಅಡ್ಡಾಡಿದ್ದ. ಅವ್ರು ಅಂದದ್ದು ಅನಿಸಿಕೊಂಡು ಇರೋದು. ದನಾ ಮೇಯಿಸೋದು, ಕೇಶವನ ಮಾತು ಸುದ್ದೆ ಅವತ್ತೆ ತನ್ನ ಮನಸ್ಸನ್ನು ಎಷ್ಟು ಇರಿದ್ಹಂಗ ಆಗಿತ್ತು. ಅಂವಾ ಹೇಳಿದ್ದು ಸುದ್ದೆ ಖರೇನ. ದನದ ಜೋಡಿ ತಾನು ದನಾ ಆಗಿ ಬಿಟ್ಟೀನಿ. ಖರೇ ಎನು ಅನ್ನೂದು ಅಂವಾ ಎತ್ತಿ ತೋರಿಸಿದ. ಹಂಗ ಆಗ್ಬ್ಯಾಡಪಾ ಅನ್ನೂ ಕಳಕಳಿ ಇರ್ಬೇಕು.

ದೇವರೇ, ಇಷ್ಟು ನನ್ನ ಜೀವನದ ಮಿತಿ ಇದ್ರ ಹಿಂಗsss ನಾ ಬಾಳ್ಬೇಕು ಅಂತ ನಿನ್ನ ಸಂಕಲ್ಪ ಇದ್ರ. ನನ್ನ ಯಾಕ ಈ ಭೂಮಿಗೆ ತಂದಿ. ಯಾಕ ಸೃಷ್ಟಿ ಮಾಡಿದಿ ಈ ಜೀವನಾ. ಇಂಥಾ ಜನ್ಮ ನನಗ ಯಾಕ ಅಂತ ವೇಂಕಣ್ಣನ ಮನಸ್ಸು ಹುಯಿಲಿಡುತ್ತಿತ್ತು.

ಸಂಜೆ ಕಳೆದು ರಾತ್ರಿಯಾಯ್ತು. ಮನಸ್ಸಿಗೆ ಎಷ್ಟೆ ದುಃಖವಾಗಲಿ ವ್ಯಥೆಯಾಗಲಿ, ಜೀವನದ ಗತಿಯನ್ನು ಬಿಡುಂತಿರಲಿಲ್ಲ ಹೊರಗಿನ ಕತ್ತಲೆಯೊಂದಿಗೆ ಮನಸ್ಸಿಗೂ ಕತ್ತಲೇ ತುಂಬುತ್ತಿತ್ತು. ವೇಂಕಣ್ಣ ಎದ್ದು ಕಂದೀಲು ತೆಗೆದುಕೊಂಡು ಪಾವು ಒರೆಸಿ, ಎಲ್ಲ ಮನೆಗೂ ದೀಪ ಹಚ್ಚಿ ತೂಗು ಹಾಕಿದ. ದೇವರ ಮುಂದೆ ಮಾತ್ರ ನಂದಾದೀಪ ಶಾಂತವಾಗಿ ಉರಿಯುತ್ತಿತ್ತು. ಅದಕ್ಕೆ ಎಣ್ಣೆ ಹಾಕಿ ಬತ್ತಿ ತುಸು ದೊಡ್ಡದು ಮಾಡಿದ. ಆ ಬೆಳಕಿನಲ್ಲಿ ದೇವರ ಮೂರ್ತಿಗಳನ್ನು ತದೇಕದಿಂದ ನೋಡುತ್ತ ಕುಳಿತ. ಮಂಟಪದಲ್ಲಿ ಜೀವ ತುಂಬಿದಂತೆ ನಿಂತ ತಿರುಪತಿ ವೇಂಕಪ್ಪನ ಮೂರ್ತಿ.

ತಮ್ಮ ಮನೆದೇವರು.

"ಮನೆ ದೇವ್ರು ಅಂದ್ರ ತಾಯಿ ತಂದಿ ಇದ್ದಂಗ. ಅವನ ಎಲ್ಲಾದಕ್ಕೂ ಕಾಯಾಂವಾ. ಕಷ್ಟ ಸುಖ–ದುಃಖ ಎಲ್ಲಾ ನಿಂದೇನಪಾ ಅಂತ ಗಟ್ಟಿ ಕಾಲು ಹಿಡಿದ್ರ ಸಂಗಾತ್ಲೆ ಬಂದು ಕಾಯೂ ಕರುಣಾನಿಧಿ ಅಂವಾ" ಎಂದು ಅವ್ವ ಯಾವಾಗಲೂ ಹೇಳುತ್ತಿದ್ದಳು.

ಹೌದು ಆ ಕರುಣಾಮಯಿಯೇ ತನಗಿನ್ನು ಗತಿ. ಅನನ್ಯವಾಗಿ ಅವನನ್ನೇ ಚಿಂತಿಸಬೇಕು, ಭಜಿಸಬೇಕು, ಭಾವುಕನಾಗ್ಬೇಕು. ಆರ್ತರವದಿಂದ ಅವನಲ್ಲಿ ಮೊರೆಯಿಡಬೇಕು. ಅವನಿಗಾಗಿ ಹಂಬಲಿಸಬೇಕು. ಇದು ಬಿಟ್ಟರೆ ತನಗೆ ಬೇರೆ ದಾರಿಯಿಲ್ಲ.

ಖರೇ, ಆದರೆ ಏನೆಂದು ಭಜಿಸಬೇಕು. ಹಾಡಿ ಕೊಂಡಾಡಬೇಕು. ನಾಲ್ಕಕ್ಷರ ಕಲಿಯದ ತಾನು ದೇವರನ್ನು ಹ್ಯಾಗೆ ಭಜಿಸಲಿ? ಹ್ಯಾಗೆ ಕೊಂಡಾಡಲಿ. ಅವ್ವ ಹೇಳುತ್ತಿದದ ನಾಕಾರು ಪುರಂದರದಾಸರ ಪದಗಳ ಬಾಯಿಪಾಠವುಂಟು. ಸಂಜೆಯಾದಾಗ, ಪಡಸಾಲೆಯಲ್ಲಿ ಕುಳಿತು ಕಂದೀಲು ಹಚ್ಚುತ್ತ ಅವ್ವ ದಾಸರಪದಗಳನ್ನು ಹಾಡುತ್ತಿದ್ದಳು. ಅದರಲ್ಲಿ ಭಕ್ತಿಯಿತ್ತು, ಮೊರೆಯಿತ್ತು. ಆರ್ತರವದ ಭಾವವಿತ್ತು.

ಆದರೆ ಅವರ ಪದಗಳು ತನ್ನ ಹೃದಯದ ಮೊರೆಯಾಗಲಾರದಲ್ಲ ದೇವರೆ ಹ್ಯಾಗೆ ಭಜಿಸಲಿ ನಿನ್ನ? ಹ್ಯಾಗೆ ಸ್ತುತಿಸಲಿ? ಎಲ್ಲೆಂದು ನಿನ್ನ ಹುಡುಕಿಕೊಂಡು ಬರಲಿ.

ಮತ್ತೆ ಕೂತರೇ, ನಿಂತರೇ, ಮಲಗಿದರೆ, ವೈನಿ ಅಂದ ಮಾತುಗಳು ಚಾಟಿ ಏಟುಗಳಂತೆ ತನ್ನನ್ನು ಬಡಿದು ಎಬ್ಬಿಸುತ್ತಿದ್ದುವು. ಆ ಹೀನಾಯದ ಭಾವ ತನ್ನನ್ನು ಹಣ್ಣು ಮಾಡುತ್ತಿತ್ತು. ಇದು ನಿನ್ನ ಜಾಗಾ ಅಲ್ಲ ವೇಂಕಣ್ಣ. ಇದರಿಂದ ನೀ ಎಂದೂ ಉದ್ಧಾರ ಆಗಂಗಿಲ್ಲ. ನಿಮ್ಮ ಅವ್ವ ಹೇಳಿರಲಿಲ್ಲ ನೀ ಸಾಧಿಸೂದು ಬ್ಹಾಳ ಅದನಪಾ, ನೀ ಬರೀ ಈ ಮನಿ ಬೆಳಕಲ್ಲ ಸಮಾಜದ ಬೆಳಕಾಗಬೇಕು ಅಂತ. ಎಳು, ಹೊರಡು, ನಿಮ್ಮ ವೈನಿಯಿಂದ ಮನಿಬಿಟ್ಟು ಹೋಗು ಅನಿಸಿಕೊಂಡ್ರು, ಮತ್ತ್ಯಾಕ ಇದ್ದಿ ಇಲ್ಲೆ. ಕತ್ತು ಹಿಡದು ದಬ್ಬು ಸ್ಥಿತಿಗೆ ಬರಬ್ಯಾಡಾ" ಈ ಎಲ್ಲ ಧ್ವನಿಗಳು ತನ್ನನ್ನು ಎಲ್ಲಿಯೋ ಕರೆದುಕೊಂಡು ಹೋಗುವುದಕ್ಕೆ ಸಿದ್ಧವಾದಂತಿದ್ದುವು.

ಹಾಗಾದರೆ ಇದು ತನ್ನ ಜಾಗವಲ್ಲವೆಂದರೆ, ಎಲ್ಲಿ ಹೋಗಲಿ? ತಾನು, ತನ್ನಂಥವರಿಗೆ ಎಲ್ಲಿದೆ ಜಾಗ? ಹುಟ್ಟಿದ ಮನೆಯಂಗಳವೇ ತನ್ನದಾಗಲಿಲ್ಲ. ಅಂದ ಮೇಲೆ ಮತ್ತ್ಯಾವ ನೆಲೆ ಆರಿಸಿಕೊಂಡು ಹೋಗಲಿ.



ಸಂಜೆ ರಾತ್ರಿ ಕಳೆದು ಬೆಳಗಾಯ್ತು. ಯಾಕೋ ಮನಸ್ಸಿನ ತುಮುಲ. ಆಂತರೀಕ ವೇದನೆ. ಹೊಯ್ದಾಟ ತಪ್ಪುತ್ತಿಲ್ಲ. ಕೂಳಿಗೆ ಭಾರವಾಗಿ ತಾನಿಲ್ಲಿ ಇರಬಾರದು. ಆದರೂ ಆರಿಸಿಕೊಂಡು ಹೋಗುವ ಜಾಗವಾದರೂ ಎಲ್ಲಿ. ಮನಸ್ಸಿನಲ್ಲಿ ಎಷ್ಟೇ ವೇದನೆ ಇದ್ದರೂ, ತನ್ನ ಪಾಲಿನ ಕೆಲಸ ಮುಗಿಸಿದ. ನದಿಗೆ ಹೋಗಿ ಅಣ್ಣ, ಅತ್ತಿಗೆಯ ಬಟ್ಟೆ ಒಗೆದು ಸ್ನಾನ ಮುಗಿಸಿ, ಎಷ್ಟೋ ಹೊತ್ತು ಕಲ್ಲು ಸಾರಿನ ಮೇಲೆ ಕುಳಿತ. ಇಷ್ಟು ದೊಡ್ಡ ಪ್ರಪಂಚದಲ್ಲಿ ತನ್ನವರೆನ್ನುವವರು ಯಾರು ಇಲ್ಲವೆ? ಎನಿಸಿತು. "ಹುಚ್ಚಾ, ಯಾರೂ ಇಲ್ಲದವ್ರಿಗೆ ದೇವರಿದ್ದಾನ ಆ ತಿರುಪತಿ ವೇಂಕಪ್ಪ. ಭಕ್ತರಗೆ ಉದ್ಧಾರ ಮಾಡಬೇಕೆಂತ ಅಂವಾ ಬಂದು ನಿಂತಾನ" ಎಂದಿದ್ದಳು ಅವ್ವ.

ಎಲ್ಲಿ ಹುಡುಕಿಕೊಂಡು ಹೋಗಲಿ, ಅವನನ್ನು ಎನಿಸಿತು. ಮನೆಗೆ ಬಂದು ಊಟ ಮಾಡಿದ ಮಲಗಿದ. ಮನೆಯ ಒಂದೊಂದು ಮೂಲೆಯೂ ಅವನನ್ನು ಕತ್ತು ಹಿಡಿದು ದಬ್ಬಿದಂತೆ ಎನಿಸುತ್ತಿತ್ತು. ಮಧ್ಯಾನ್ಹವಾಗಿರಬೇಕು ಬಿಸಿಲಿನ ಝಳತೆ ಕಣ್ಣು ತೂಗುವಂತೆನಿಸಿ ಗಳಿಗೆ ಅಂಗಳದ ಕಟ್ಟೆಗೆ ಕೂತ. ಯಾಕೋ ಒಂದು ರೀತಿಯ ಮಂಪರು.

ಎಲ್ಲಿಯೋ ದೂರದಲ್ಲಿ ಜಾಗಟೆ, ತಮಟೆಗಳ ಸದ್ದು. ನಡು ನಡುವೆ ಮಂಗಳಾರತಿ ಮಾಡುತ್ತಿರುವ ಗಂಟೆಯ ನಿನಾದ. ಜೈ ಜೈ ಕಾರದ ಸದ್ದು. ಕಾಲ್ಗೆಜ್ಜೆ ಕಟ್ಟಿ ಕುಣಿಯುವ ಸದ್ದು. ತಂಬೂರಿ ಮೀಟುತ್ತ ಅನನ್ಯವಾದ ಭಕ್ತಿಯಿಂದ ಹಾಡುವ ಸದ್ದು. ಎಲ್ಲಿಂದ ಬರುತ್ತಿವೆ. ಈ ಧ್ವನಿಗಳು ಮಂಗಳವಾದ್ಯದ ಧ್ವನಿಗಳು

ಜೈ ಜೈ ಗೋವಿಂದ ಹರಿ ಹರಿ ಗೋವಿಂದ

ತಿರುಮಲ ಗೋವಿಂದ, ದೀನ ರಕ್ಷಕ ಗೋವಿಂದ

ಅನಾಥ ಬಂದು ಗೋವಿಂದ

ಹೌದು ಯಾರಂವ ಅನಾಥ ಬಂಧು– ಎಷ್ಟು ಇಂಪಾಗಿ ಕೇಳಿಸುತ್ತಿವೆ.

ಹಾಡು– ತಾಳ– ತಂಬೂರಿ ರಾಗದ ಧ್ವನಿ. ಎಷ್ಟು ಅನನ್ಯ ಅಂತಃಕರಣಂದಿಂದ ಸಮರ್ಪಣ ಭಾವದಿಂದ ಕರೆಯುತ್ತಿದ್ದಾರೆ. ಯಾವದೋ ಒಂದು ಸೆಳೆತ ತನ್ನನ್ನು ಹಿಡಿದೆಳೆಯುತ್ತಿದೆ ಎನಿಸಿತು. ನಿನಗಾಗಿ ದಾರಿ ತೆರೆದಿದೆ ಎಳು ಹೆಜ್ಜೆ ಹಾಕು ಎನ್ನುವಂತೆ. ವೇಂಕಣ್ಣ ಕುಳಿತವ ಎದ್ದುನಿಂತ. ಅದೇ ಹಾದಿಯಲ್ಲಿ ಹೋಗುತ್ತಿದ್ದಾನೆ ಗೆಳೆಯ ಕೇಶವ.

"ಕೇಶವ" ನಿಂತು ಅವನು ಏನು ಅನ್ನುವಂತೆ

"ಅಲ್ಲ. ಎಲ್ಲಿಂದೋ ಹಾಡಿನ ಧ್ವನಿ. ತಂಬೂರಿ ಧ್ವನಿ. ಜಾಗಟೆ ಸದ್ದು ಕೇಳಸ್ತದಲ್ಲಾ ಏನದು?"

"ಹೂಂ ನಾನು ಅಲ್ಲೆ ಹೊಂಟಿನಿ. ಗೊತ್ತಿಲ್ಲೇನು ನಿನಗ. ದೇಸಾಯರ ಮನಿಗೆ ಛಪ್ಪರ ದೇವರು ಬಂದಾರ. ಇವತ್ತ ಇದ್ದು ನಾಳೆ ಮತ್ತೆ ತಿರುಪತಿಗೆ ಹೊಂಟಾರ

"ಅಂದ್ರ?"

"ಅಂದ್ರೇನು ನಿನೊಂದು ಎಬ್ಬಂಕ ಇದ್ದಂಗ. ಏನೂ ಗೊತ್ತಿಲ್ಲ ಛಪ್ಪರ ದೇವರಂದ್ರ. ಪ್ರತಿವರ್ಷ ದಿಂಡಿ ಉತ್ಸವ ಅಂತ ಮಾಡ್ತಾರ. ಎಲ್ಲಾ ಕಡೆಯಿಂದ ಪಾದಯಾತ್ರಾ ಮಾಡ್ಕೋತ. ದೇವರನ್ನು ಪಲ್ಲಕ್ಕಿಯೊಳಗ ಇಟ್ಟುಕೊಂಡು ಮೆರವಣಿಗೆ ಮಾಡ್ಕೋತ. ಮುಂದ ಪಾದಾಯಾತ್ರಾ ಮಾಡ್ಕೋತ ತಿರುಪತಿಗೆ ಹೋಗ್ತಾರ. ಒಂದೊಂದು ಊರಾಗ ತಂಗಿ ಅಲ್ಲಿ ಪೂಜೆ ಪುನಸ್ಕಾರ ಭೋಜನ ಮುಗಿಸಿಕೊಂಡು ನಡಕೋತ ಮುಂದಿನ ಊರಿಗೆ ಹೋಗ್ತಾರ. ಕಡೀಕೆ ಅವರು ತಿರುಪತಿಗೆ ಹೊಗಿ ಉತ್ಸವ ಮುಗಸ್ತಾರ. ಇವತ್ತು ದೇಸಾಯರ ಮನ್ಯಾಗ ಅವರಿಗೆಲ್ಲ ವ್ಯವಸ್ಥಾ ಆಗೇದ. ಇಲ್ಲೇ ಮುಗಿಸಿಕೊಂಡು ಇನ್ನು ಪಾರ – ನಾಳೆ ತಿರುಪತಿಗೆ ಹೊರಡುತಾರ. ನಾ ನೋಡ್ಲಿಕ್ಕೆ ಹೊಂಟಿನಿ ಬರ್ತಿ ಏನು ನೀನು? ಏನಪಾ ವೇಂಕಣ್ಣಾ ಊರಾಗ ಇಂಥ ಸಂಭ್ರಮ ನಡದ್ರೂ ಏನು ಗೋತ್ತಿಲ್ದಂಗ. ದನಾ ಕಾಯಿಕೊಂಡು ಕೂತಿಯಲ್ಲಾ ನಡಿ ನಡಿ"

ಎಂದು ನಡೆದ ಅವನೊಡನೆ ಇವನು ಹೆಜ್ಜೆ ಹಾಕಿದ. ಮುಂದಿನ ದಿನದವರೆಗೆ ವೇಂಕಣ್ಣನ ಮನಸ್ಸು ಯಾವ ಯಾವದೋ ಯೋಚನೆಗಳಿಂದ ಸುತ್ತುವರಿದು ಸುಳಿಯಲ್ಲಿ ಸಿಕ್ಕಹಾಕಿತ್ತು ಆಯಿತು. ದೇಸಾಯರ ಮನೆಯಲ್ಲಿ ಪಲ್ಲಕ್ಕಿ, ದೇವರ ಪೂಜೆ ಪುನಸ್ಕಾರ ಮಂಗಳಾರತಿಗಳಾದವು. ಮರುದಿನ ಉತ್ಸವಕ್ಕೂ ವೇಂಕಣ್ಣ ಹೋಗಬಂದ ಅಲ್ಲಿದ್ದ ಒಬ್ಬಿಬ್ಬರು ಹಿರಿಯರ ಪರಿಚಯ ಮಾಡಿಕೊಂಡ. ತಿರುಪತಿಗೆ ಯಾರು ಬೇಕಾದರೂ ಬರಬಹುದೇ ಎಂದು ಕೇಳಿ ತಿಳಿದುಕೊಂಡ. ಛಪ್ಪರ ದೇವರು ಈ ಊರು ಬಿಡುವದರೊಳಗೆ ವೇಂಕಣ್ಣನಲ್ಲಿ ತಾನು ಕಾಲ್ನಡಿಗೆಯಿಂದ ತಿರುಪತಿಗೆ ಹೋಗಬೇಕೆಂಬ ನಿರ್ಧಾರ ಗಟ್ಟಿಯಾಗಿತ್ತು. ಎಂಥಹ ಸುಸಂದರ್ಭ ಆ ದೇವರನ್ನು ಹುಡುಕಿಕೊಂಡು ಎಲ್ಲಿ ಹೋಗಲಿ ಎನ್ನುವಂತೆ. ಕರು–ತಾಯಿ ಹಸುವನ್ನು ಹುಡುಕುವಂತೆ ಹಂಬಲಿಸುತ್ತಿದ್ದೇನಲ್ಲ. ಈಗ ಸುಸೂತ್ರವಾಗಿ ಮನೆ ಸಂದರ್ಭ ಒದಗಿ ಬಂತು. ವೈನಿ ಬೇರೆ ಮನೆಬಿಟ್ಟು ಹೋಗಲು ಅಪ್ಪಣೆ ಕೊಟ್ಟಂತೆ ಹೇಳಿಬಿಟ್ಟಿದ್ದರು. ಈಗ ಅವರು ಬೇಡವೆಂದೂ ತಾನು ತನ್ನ ನಿರ್ಧಾರ ಬಿಡುವುದಿಲ್ಲ.

ಮನಸ್ಸು ಯಾವದೋ ತೆರನಾದ ಉಲ್ಲಾಸದಲ್ಲಿ ಈಜಿದಂತಿತ್ತು. ಯಾವದೋ ಒಂದು ದಡ ತನಗೆ ಸಿಕ್ಕಿದೆ ಎನ್ನುವ ಆಶೆ. ಆದರೂ ಈ ಗುಂಪಿನಲ್ಲಿ ತನ್ನನ್ನು ಕರೆದುಕೊಂಡು ಹೊಗುತ್ತಾರೆಯೆ? ಹೋಗುವುದು ಎಂದರೆ ವೇಂಕಣ್ಣ ಅನುಮಾನಿಸುತ್ತ ಅಲ್ಲಿ ಗುಂಪಿನಲ್ಲಿ ಕೂತಿದ್ದ ಹಿರಿಯರೊಬ್ಬರನ್ನು ಕೇಳಿದ.

"ಸ್ವಾಮಿ ನೀವೆಲ್ಲ ಮುಂದ ತಿರುಪತಿ ಕಡೆ ಹೊಂಟಿರೇನ್ರಿ?"

"ಹೂಂ, ನಪಾ ಹೌದು. ಯಾಕ?"

"ಅಲ್ಲಿಗೆ ಯಾರು ಬೇಕಾದ್ರು ಬರಬಹುದೇನ್ರಿ ?"

"ಬರಬಹುದಪಾ ದೇವರ ಕಡೆ ಯಾರು ಏನು ಅಂತ ಇಲ್ಲ ಅವನ ದರ್ಶನಕ್ಕ ಯಾರು ಬೇಕಾದ್ರೂ ಹೋಗಬಹುದು.

"ನಾನು? ನಾನು ಬರಬಹುದೇನ್ರಿ ನಿಮ್ಮ ಜೋಡಿ"

"ಯಾಕಪಾ ಹಂಗ್ಯಾಕಂತಿ. ಹೇಳಿದ್ನಲ್ಲಾ ಯಾರ ಬೇಕಾದ್ರೂ ಬರಬಹುದಂತ. ತಿರುಪತಿ ಅಂದ್ರ ಭೂವೈಕುಂಠ ಇದ್ದಂಗಪಾ. ಕರುಣಾಮಯ ಅಂವಾ. ಭಕ್ತರನ್ನು ಉದ್ಧಾರ ಮಾಡಬೇಕೆಂತ



ವೈಕುಂಠ ಬಿಟ್ಟು ಭೂಮಿಮ್ಯಾಲೆ ಬಂದು ನಿಂತಾನ. ದರ್ಶನ ಮಾಡಿದ್ರ ಜೀವನಾ ಸಾರ್ಥಕ ಆಗ್ತೇದಪಾ"

"ಹಂಗಾರ ನಾಳೆ ನಿಮ್ಮ ಜೋಡಿ ನಾನು ಬರ್ತೀನ್ರಿ"

"ಅಗತ್ಯ" ಎಂದರು ಅವರು. ಯಾವದೋ ಧನ್ಯತಾಭಾವದಲ್ಲಿ ವೇಂಕಣ್ಣ ಮನೆಗೆ ಬಂದ. ಎಲ್ಲ ಕೆಲಸ ಮುಗಿಸಿದ ವೈನಿ ಏನಾದರೂ ಅನ್ನಲಿ. ತಾನು ಮನಸಿಗೆ ಹಚ್ಚಿಕೊಳ್ಳಬಾರದು. ಮುಂಜಾನೆ ಎದ್ದರೆ, ಸ್ನಾನ ಸಂಧ್ಯಾನ ಮುಗಿಸಿ ತನ್ನೆರಡು ಬಟ್ಟೆ, ಕೈ ಚೀಲದಲ್ಲಿ ಹಾಕಿಕೊಂಡು ಹೋಗಬೇಕು. ಮನಸ್ಸು ನಿರ್ಧರಿಸಿದೊಡನೆ ವೇಂಕಣ್ಣ ಪಡಸಾಲೆಯಲ್ಲಿ ಚಾಪೆ ಹಾಸಿಕೊಂಡು ಗಡದ್ದು ಮಲಗಿದ್ದೊಂದೇ ಗೊತ್ತು. ಮತ್ತ್ಯಾವ ಹೋಯ್ದಾಟವು ಅವನನ್ನು ಕಾಡಲಿಲ್ಲ.

ಎಂದಿನಂತೆ ಮುಂಜಾನೆ ಎದ್ದಾಗ ಮನಸ್ಸು ಹಗುರವಾಗಿತ್ತು. ದನದ ಕೊಟ್ಟಿಗೆಗೆ ಹೋಗಿ ಸ್ವಚ್ಛಮಾಡಿ. ದನಗಳಿಗೆ ಹುಲ್ಲು ಹಾಕಿ ಅವುಗಳ ಮೈ ಸವರಿ "ಅವ್ವಂದ್ರಾ ನನ್ನ ಕ್ಷಮಾ ಮಾಡ್ರಿ. ನಿಮ್ಮನ್ನ ನಿಮ್ಮ ಪ್ರೀತಿ ಅಂತಃಕರಣಾಗ ಬಿಟ್ಟುಹೊಂಟಿನಿ" ಎಂದು ಬೆನ್ನು ಸವರಿ ಹೊರಬಂದ. ದೇವರ ಮನೆ, ಪಡಸಾಲೆ, ಅಂಗಳ ಎಂದು ಕಸ ಉಡುಗಿ ತನ್ನ ದಿನನಿತ್ಯದ ಕೆಲಸ ಮುಗಿಸಿ ಸ್ನಾನ, ಸಂಧ್ಯಾನ ಮುಗಿಸಿ, ಒಂದು ಗಳಿಗೆ ಅದೇ ಪಡಸಾಲೆಯ ತುದಿಕಟ್ಟಿಗೆ ಕೂತ. ಇಷ್ಟು ದಿನ ಆಡಿ ಬೆಳೆದ ಮನೆಯಲ್ಲವೆ? ಮತ್ತಿಲ್ಲಿ ತಿರುಗಿ ಬರುತ್ತೇನೋ ಇಲ್ಲವೊ? ಇದು ಅವ್ವ ಯಾವಾಗಲೂ ಕೂಡುತ್ತಿದ್ದ ಜಾಗವಲ್ಲವೆ? ಇಲ್ಲೆ ಕೂತು ಹೂಬತ್ತಿ ಹವನೂಲು ಎಂದು ಮಾಡುತ್ತೆ. ತನ್ನನ್ನು ಮುಂದೆ ಕೂಡಿಸಿಕೊಂಡು ಏನೇಲ್ಲ್ ಹೇಳುತ್ತಿದ್ದಳು. "ಆ ಭಗವಂತನೇ ನಿನ್ನ ಅವ್ವಾ ಅಪ್ಪಾ ತಿಳಿಯಪಾ ನಾವಿಲ್ಲಂದ್ರ..

"ಹೌದವಾ ನೀ ಹೇಳಿದ್ಹಂಗ ಆ ವೇಂಕಪ್ಪನೇ ನನ್ನ ಅವ್ವಾ ಅಪ್ಪಾ ಅನ್ಕೊಂಡು ಹೊಂಟೀನಿ. ಅವನನ್ನು ಹುಡುಕು ಅಂತರ್ ಜ್ಞಾನಾ ಹುಟ್ಟಿಸಿದಾಕಿ ನೀನನವ್ವಾ ಅವ್ವಾ ನೀ ಹೇಳ್ತಿದ್ದಿ ವೇಂಕಣ್ಣ ಕತ್ತಲಬಾಜೂಕ ಯಾವಾಗಲೂ ಬೆಳಕ ಇರ್ತದಪಾ. ಆ ಬೆಳಕನ್ನ ಹುಡುಕು ಹಾದಿ ಹಿಡಿಬೇಕು ಅಂತಿದ್ದಿ. ಹೌದವ್ವಾ ಆ ಬೆಳಕು ಹುಡಿಕ್ಕೊಂಡು ಹೊಂಟೀನಿ ಈಗ. ನೀ ಹೇಳ್ತಿದ್ದ ಮಾತೆಲ್ಲ ನನಗ ದಾರಿದೀಪವ್ವಾ ಇನ್ಮುಂದ ನನ್ನ ಸೂತ್ತಲಿರು ಕತ್ತಲು ಕಳದ್ಹೋಗ್ಲಿ ಅಂತ ಆಶೀರ್ವಾದ ಮಾಡು" ಎನ್ನುತ್ತ, ವೇಂಕಣ್ಣ ಅಲ್ಲಿ ಬಂದು ನಿಂತ ಅತ್ತಿಗೆಯನ್ನು ನೋಡಿದ.

"ಯಾಕಪಾ ಮುಂಜಾನೆದ್ದು ಕೂಡಲೇ ಹಿಂಗಕೂತಿ– ಬ್ಯಾರೆ ಕೆಲಸ ಇಲ್ಲೇನು?"

". . . ."

"ಮಾತಾಡು ಹಿಂಗ್ಯಾಕ ಮೂಕ ಬಸವಣ್ಣನಗತೇ ಕೂತಿ" ಎಂದಳು ವೇಂಕಣ್ಣ ಎದ್ದು ತನ್ನ ಕೈ ಚೀಲ ತೆಗೆದುಕೊಂಡು ಬಂದು ಕಾವೇರಿ ಕಾಲಿಗೆ ಬಾಗಿ ನಮಸ್ಕಾರ ಮಾಡಿ.

"ವೈನಿ, ಮೊನ್ನೆ ಮನಿಬಿಟ್ಟು ಹೋಗು ಮಾತಾಡಿದ್ರಿ ಆತು. ಇವತ್ತು ಈ ಮನಿ ಋಣಾ ಮುಗೀತು ಬರ್ತಿನ್ರಿ, ನನ್ನ ಹಾದಿ ನಾನು ಹುಡಿಕ್ಕೊಂಡು ಹೊಂಟೀನಿ. ಅಣ್ಣ ಬಂದ್ರ ಹೇಳ್ಬಿಡ್ರಿ" ಎನ್ನುತ್ತಾ ಹೊರಟ. ಅಂಗಳ ದಾರಿ ಕಿಲ್ಲೇಯ ಹಾದಿಗುಂಟ ಹೊರಟ. ಅವನನ್ನು ಏನು

ಅರ್ಥವಾಗದಂತೆ ನೋಡುತ್ತಲೇ ನಿಂತವಳು ಒಂದು ಹೆಜ್ಜೆ ಮುಂದೆ ಬಂದು "ಎಯ್, ವೇಂಕಣ್ಣ ನಿಂದ್ರಲ್ಲೆ" ಎಂದು ಅವಳು ಕರೆಯುತ್ತಿದ್ದರೂ.

ತನ್ನದೇ ಹಾದಿಯಲ್ಲಿ ಹಾದಿಗುಂಟ ಹೊರಟ, ಅವನಿಟ್ಟ ಹಿಂದಿನ ಹೆಜ್ಜೆಗಳು ಮಾಯವಾಗುತ್ತೆ. ಹೊಸ ಹೆಜ್ಜೆಗಳು ಮಾತ್ರ ಅವನ ಬದುಕಿನ ಪಥದಲ್ಲಿ ತನ್ನದೆ ಆದ ಗುರುತನ್ನು ಉಳಿಸುತ್ತ ಹೊರಟಿತ್ತು. ಆ ಗುರುತು ಅನಂತಾನಂತ ಜನ್ಮದ ಪುಣ್ಯ ಫಲವಾದಂತೆ. ಅವು ಎಷ್ಟು ಜನಗಳ, ಎಷ್ಟು ಜೀವಿಗಳ ಬದುಕಿಗೆ ಹಾದಿ ಸೃಷ್ಟಿಸಲಿದೆಯೋ" ಎನ್ನುವಂತೆ.

ವೇಂಕಣ್ಣ ಸೀದಾ ಬಂದದ್ದು ದೇಸಾಯರ ಮನೆಗೆ ಅಲ್ಲಿ ಆಗಲೇ ಉತ್ಸವ ಮುಗಿಸಿದ ಭಕ್ತರ ಗುಂಪು ಥಪ್ಪರ ದೇವರನ್ನು ಪಲ್ಲಕ್ಕಿಯಲ್ಲಿರಿಸಿ ಕೊಂಡು, ಹೊರಟಿತ್ತು. ಮಂಗಳ ವಾದ್ಯಗಳು, ತಾಳ ತಂಬೂರಿಗಳನ್ನು ಬಾರಿಸುತ್ತ, ಉದಿಸುತ್ತೆ. ಮಂಗಳಾರತಿ ಎತ್ತಿ ಜಾಗಟೆ ಬಡಿಯುತ್ತೆ "ಹರೀ ಗೋವಿಂದ, ಗೋವಿಂದ" ಎನ್ನುತ್ತಾ ಭಕ್ತರ ಗುಂಪು ಹೊರಡುತ್ತಿರುವಾಗ ವೇಂಕಣ್ಣ ತಾನು ಆ ಗುಂಪು ಸೇರಿಕೊಂಡ ನಿನ್ನೆ ಸಿಕ್ಕ ಒಂದಿಬ್ಬರ ಹಿರಿಯರ ಗುರುತಾಗಿತ್ತು. ವೇಂಕಣ್ಣ ಅವರ ಹತ್ತಿರ ಹೋಗಿ "ಅಜ್ಜಾ ನಾನು ಬಂದಿನ್ರಿ, ನಿಮ್ಮ ಜೋಡಿ ತಿರುಪತಿಗೆ ಬರ್ತೀನಿ, ನನಗೂ ಏನರ ಸೇವ ಹೇಳ್ರಿ" ಎಂದ.

"ಬಾರಪ್ಪಾ ಅಗತ್ಯ ಬಾ ಎಂಥಾ ವಿವೇಕಪಾ ತಮ್ಮ ನಿನಗ. ಬ್ಹಾಳ ಪುಣ್ಯಾ ಮಾಡಿಯಪಾ ಅದಕ ವೇಂಕಪ್ಪ ದರ್ಶನ ಕೊಡ್ಲಿಕ್ಕೆ ಹತ್ಯಾನ. ಈಕಾ ಈ ಜಾಗಟೆ ತಗೊ, ಎಲ್ಲೆಲ್ಲಿ ನಿಂದ್ರಸಿ, ದೇವರಿಗೆ ಮಂಗಳಾರತಿ ಆಗ್ತೇದೋ ಅಲ್ಲೇ ಬಾರಿಸು" ಎಂದರು.

"ಆತ್ರಿ" ಎನ್ನುತ್ತ ವೇಂಕಣ್ಣ ಅವರೊಡನೆ ಹೆಜ್ಜೆ ಹಾಕಿದ ಯಾರೋ ಹಾಡುತ್ತಿದ್ದರು. ಯಾರೋ ರಾಮನಮ ಜಪ ಮಾಡುತ್ತಿದ್ದರು. ಇನ್ಯಾರೋ ಹಾಡಿಗೆ ತಕ್ಕ ಹಾಗೆ ತಂಬೂರಿ ಮೀಟಿ ಕುಣಿಯುತ್ತಿದ್ದರು.

"ನಿನಗ ತಿರುಪತಿಗೆ ಹೋಗುದ ಯಾಕ ತಲ್ಯಾಗ ಬಂತಪಾ"

"ನಮ್ಮವ್ವ ಯಾವಾಗ್ಲೂ ಹೇಳ್ತಿದ್ಲು ಅಜ್ಜಾ, ನಿಮ್ಮ ಹೆಸರೇನ್ರಿ"

"ಶೀನಪ್ಪಂತ"

"ಶೀನಪ್ಪಜ್ಜಾ, ನಮ್ಮನಿ ಕುಲದೇವರು ತಿರುಪತಿ ತಿಮ್ಮಪ್ಪಂತ ಅಜ್ಜಾ, ತಿರುಪತಿಗೆ ಹೊಂಟದ್ದು ನಿಧಿ ಸಿಕ್ಕಂಗ್ಹ ಆಗೇದ್ರಿ. ನನಗ ಅಷ್ಟು ಸಂತೋಷ ಆಗೇದ".

"ಹೌದಪಾ ಅವನ ದರ್ಶನ ಭಾಗ್ಯ ಅಂದ್ರ ಸುಮ್ನೇನ್" ಎಂದರಾತ. ಹೌದು ಅವನ ದರ್ಶನವೆಂದರೆ ಮಹಾಭಾಗ್ಯವೆ. ಯಾರೋ ತನ್ನ ಮುಂದೆ ಅಮೃತ ಕಳಶವನ್ನು ಹಿಡಿದು ಕುಡಿ ವೇಂಕಣ್ಣಾ ಇದರಿಂದ ಹೊಟ್ಟೆ ಅಷ್ಟ ಅಲ್ಲ, ಮನಸ್ಸು ದೇಹ ಎಲ್ಲ ತಂಪಾಗ್ತದ ಅನ್ನುವಷ್ಟರ ಮಟ್ಟಿಗೆ ತನಗೆ ಆನಂದವಾಗಿತ್ತು.



ಅಣ್ಣ ಊರಲ್ಲಿರಲಿಲ್ಲ. ಅವನನ್ನು ಕೇಳದೆ ಬರಬಾರದು ಎಂಬ ಆಲೋಚನೆಯೂ ತನಗೆ ಬರಲಿಲ್ಲ. ಆದರೂ ವೈನಿ ಹಿರಿಯರು ತಾಯಿ ಸಮಾನ ಎನ್ನುತ್ತದೆ ಲೋಕ. ಆಕೆ ತಾಯಿಯಾಗದಿದ್ದರೇನಾಯ್ತು ಮಗು ಮಗನಾಗಿ ಕಾಲು ಹಿಡಿದು ಆಶೀರ್ವಾದ ಕೇಳಿದೆ.

ಒಂದು ರೀತಿಯಿಂದ ಅತ್ತಿಗೆ ಅಲ್ಲ ಆಕೆ. ತನಗೆ ಬೆಳಕಿಗೆ ದಾರಿ ತೋರಲು ಹಿಡಿದ ದೀಪ. ಅವರು ಆಡಿದ ಮಾತುಗಳು ಕಟೋಕ್ತಿಗಳಲ್ಲ. ತನ್ನನ್ನು ಕೈ ಹಿಡಿದು ಕತ್ತಲಿನಿಂದ ಬೆಳಕಿನೆಡೆಗೆ ಕರೆದು ಕೊಂಡು ಹೋಗುವ ಆಸರೆಯ ಕೋಲಾಗಿರಬಹುದು. ಸುಪ್ತವಾಗಿ ಮಲಗಿದ್ದ ತನ್ನೊಳಗಿನ ಪ್ರಜ್ಞೆಯನ್ನು ಹೊಡೆದೆಬ್ಬಿಸಿದ ಬೆತ್ತವಿರಬಹುದು. ಇಲ್ಲದಿದ್ದರೆ ಕಾಣದೆ ಇದ್ದ ಆ ಶ್ರೀ ಹರಿಗಾಗಿ. ಆ ತಿರುಪತಿಯ ವೇಂಕಪ್ಪನಿಗಾಗಿ ತಾನಿಷ್ಟು ಹಂಬಲಿಸಿ ಹೋಗಲು ಸಾಧ್ಯವಿತ್ತೆ? ಈಗ ತನ್ನ ತಲೆಯಲ್ಲಿ ಏನೂ ಇಲ್ಲ ಇವರುವದೊಂದೆ ಆ ತಿಮ್ಮಪ್ಪನ ದರ್ಶನ ಮಾಡಬೇಕು. ಈ ಭಾವದ ಬಂಧನದಿಂದ ತೊಳಲಾಡುತ್ತಿರುವ ತನ್ನ ಮನಸ್ಸನ್ನು ಅವನ ಸನ್ನಿಧಿಗೆ ಒಯ್ಯಬೇಕು. ದಾರಿಗುಂಟ ಇದೇ ಯೋಚನೆ ಅವನನ್ನು ಕಾಡುತ್ತಿತ್ತು.

ಅವನು ತುಳಿಯುತ್ತಿದ್ದ ಹಾದಿ ಉದಾತ್ತದ ಹಾದಿಯಾಗಿತ್ತು. ಅವನ ಕಣ್ಣು, ಮನ, ದೇಹದ ಪ್ರತಿಯೊಂದು ಕಣವೂ ಆ ಭಗವಂತನ ದರ್ಶನಕ್ಕಾಗಿ, ಅವನ ಸಾಮೀಪ್ಯಕ್ಕಾಗಿ ಹುಯಿಲಿಡುತ್ತಿತ್ತು. ಹಂಬಲಿಸುತ್ತಿತ್ತು. ಏನೋ ಬೇಕು ತನಗೆ ಏನೋ ಕಾಣಬೇಕು, ಏನೋ ಪಡೆಯಬೇಕು.

ಯಾವುದದು? ತಾನು ಅರಿಸಿಕೊಂಡು ಹೋಗುತ್ತಿದ್ದುದು ಏನನ್ನು? ವೇಂಕಣ್ಣ ಥಪ್ಪರ ದೇವರ ಭಕ್ತರ ಗುಂಪಿನೊಡನೆ ನಡೆಯುತ್ತಿದ್ದ ಮುಂದೆ ದೇವರ ಪಲ್ಲಕ್ಕಿ ಹಿಂದೆ ಭಕ್ತ ಜನ. ಭಗವಂತನ ಕೀರ್ತನೆಗಳನ್ನು ಹಾಡುತ್ತಾ, ಹಾಡುತ್ತಾ, ಮೈಮರೆತು ಕುಣಿಯುತ್ತಿದ್ದಾರೆ. ಎರಡು ಕೈ ಮೇಲೆತ್ತಿ ಆಕಾಶಕ್ಕೆ ಮುಖಮಾಡಿ ಆರ್ತರವವಾಗಿ ಕುಣಿಯುತ್ತಿದ್ದಾರೆ.

"ಗೋವಿಂದ, ನಾರಾಯಣ, ಹರಿ ಸರ್ವೋತ್ತಮ"

ಅವನ ಹೆಸರು ಹೆಸರಲ್ಲ ಬರೀ ನಾಮಾವಳಿಗಳಲ್ಲ. ಕ್ಷೀರಸಮುದ್ರದಿಂದ ತೇಲಿಬಂದ ಅಮೃತ. ಅದನ್ನು ಕುಡಿದು ಪಾವನವಾಗುತ್ತಿದೆ ಈ ಭಕ್ತಿ ಜನ, ಆದರೂ ತಣಿಯುತ್ತಿಲ್ಲ ಅವರ ದಾಹ. ಬೇಕು ಇನ್ನೂ ಬೇಕು ಎಂಬಂತಹ ತಹಿಕೆ.

ಹೌದಲ್ಲ ಹರಿ ಎನ್ನುವುದೇ ಒಂದು ಅಮೃತನಿಧಿ. ಅಮೂಲ್ಯ ನಿಧಿ. ಹಿಡಿಯ ಹೋದರೆ ನುಸುಳಿಕೊಂಡು ಓಡಿ ಹೋಗುವಂಥಹದು ಸಾಮಾನ್ಯರಿಗೆ ಸಿಗುವುದಲ್ಲ ಆ ನಿಧಿ. ಸರ್ವವನ್ನೂ ತ್ಯಾಗಮಾಡಿ ಸಂಸಾರ ಸಮುದ್ರವನ್ನು ದಾಟಿ ಬಂದವರಿಗೆ ಮಾತ್ರ ಕೈಗೆಟಕುವ ನಿಧಿ.

ವೇಂಕಣ್ಣ ಶೀನಪ್ಪನೊಡನೆ ಹೆಜ್ಜೆ ಹಾಕುತ್ತಿದ್ದ ಅವನನ್ನು ಜೊತೆಗೆ ಬಾರೆಂದು ಕರೆದವರೇ ಅವರು ಮಾಗಿದ ಜೀವ. ಮಾಗಿದ ಬದುಕು. ತಿದ್ದಿ-ತೀಡಿದಂತೆ ಗಂಧಾಕ್ಷತೆ; ಸದಾ ಹರಿನಾಮ ಸ್ಮರಣೆಯೊಂದೇ ಧ್ಯೇಯವಿದ್ದಂತೆ, ನೋಡಿದರೆ ಎಷ್ಟು ಗೌರವ ಭಾವನೆ ಬರುವಂತಿದ್ದಾರೆ. ಕಿರಿಯ ವಯಸ್ಸಿನವರನ್ನೆಲ್ಲಾ ಮಕ್ಕಳಂತೆ ಅಂತಃಕರಣದಿಂದ ಕಾಣುವ ಪಕ್ಕದಲ್ಲಿ ತಮ್ಮೊಡನೆ ಬರುತ್ತಿದ್ದ ಇವನನ್ನು ಕೇಳಿದರು.

"ನಿನ್ನ ಹೆಸರು ವೇಂಕಣ್ಣ ಅಂದೆಯಲ್ಲೇನೋ ಬಾಳಾ"

"ಹೌದು"

"ತಿರುಪತಿ ವೇಂಕಪ್ಪನ ಹೆಸರು ಇಟಗೊಂಡೆ ಹುಟ್ಟಿಬಿಡು. ಅವನ ಕೃಪಾ ನಿನ್ನ ಮ್ಯಾಲೆ ಬ್ಹಾಳಾದಪಾ ಹಂಗರ. ಇಷ್ಟು ಸಣ್ಣ ವಯಸ್ಸಿಗೆ ಇಷ್ಟು ದೇವರ ಮ್ಯಾಲೆ ಭಕ್ತಿ. ನಿನಗೆ ಯಾರಿಲ್ಲವೇನು? ಮುಖ ನೋಡಿದ್ರೆ ಜೀವನದ ನೋವೆಲ್ಲ ನೀನು ಅನುಭೋಗಿಸಿದ್ಹಂಗ ಕಾಣಸ್ತದ. ಅವ್ವಾ ಅಪ್ಪಾ. . ."

"ಈಗ ಹುಡಕ್ಕೊಂಡು ಹೊಂಟಿದ್ದು ಅವ್ವಾ ಅಪ್ಪನ್ನರಿ"

"ಅಂದ್ರ?"

"ನಮ್ಮವ್ವ ಇದ್ದಾಗ ಹಗಲೆಲ್ಲ ಹೇಳ್ತಿದ್ಲು ವೇಂಕಣ್ಣ ಯಾರಿಲ್ಲದವರಿಗೆ ಆ ಶ್ರೀಹರಿ ಇದ್ದಾನೆ. ಅವನನ್ನು ನಂಬು ಅನಂತವಾಗಿ ನಂಬು, ನಂಬಿದವ್ರಿಗೆ ಅಕ್ಷಯ ಪಾತ್ರ ಇದ್ಹಂಗ ಅಂವಾ ಆಸರಿ ಇಲ್ಲದ್ವರಿಗೆ ಅವ್ವಾ ಅಪ್ಪಾ ಅವನ ನಂಬಿದವ್ರಿಗೆ ಕತ್ತಲಿಯೊಳಗಿನ ಬೆಳಕಿನ ಕೋಲಿದ್ಹಂಗ ಬಾಳಾ. ಅದನ್ನು ಹಿಡಕೊಂಡು ನಡಿ ಅಂತ. ಈಗ, ಈಗ ಆ ಆಸರಿ ಕೋಲು ಹುಡಿಕ್ಕೊಂಡು ಹೊಂಟಿನ್ರಿ ಶೀನಪ್ಪತಾತಾ ಸಿಗ್ತೇದೇನ್ರಿ ಅದು?"

ಶೀನಪ್ಪ ಅವನ ಹೆಗಲ ಮೇಲೆ ಕೈಯಿಟ್ಟರು. ಅನನ್ಯ ಅಂತಃಕರಣದಿಂದ ಅವನ ತಲೆ ಸವರಿದರು.

"ಹುಚ್ಚಪ್ಪಾ ಹುಚ್ಚಪ್ಪಾ ಸಿಗ್ತದೇನು ಅಂತ ಕೇಳ್ತಿಯಲ್ಲಪ್ಪಾ, ನಿನ್ನ ಹೃದಯದಾಗ ಭಕ್ತಭಂಡಾರ ತುಂಬೇದಪಾ ಸಿಗ್ತಾನ ಅಂವಾ"

"ಆದ್ರ. . .ತಾತಾ. . .ನನಗ ಜ್ಞಾನ ಭಂಡಾರಾನ ಇಲ್ಲಲ್ರಿ ಇಷ್ಟು ವರ್ಷ, ಓದಬೇಕು, ಓದಬೇಕು, ಜ್ಞಾನ ಪಡಿಬೇಕು, ಶಾಸ್ತ್ರ ವೇದಗಳನ್ನು ಅಧ್ಯಯನ ಮಾಡಬೇಕು. ಶ್ರೀ ಹರಿನ್ನ, ಆ ಭಗವಂತನ್ನ ಹ್ಯಾಂಗ ಹಾಡಿ ಆರಾಧಿಸಬೇಕು ಅನ್ನೂ ಅರಿವಿಲ್ಲ ಅಭೋದ ಅಜ್ಞಾನಿ ನಾನು ಇಂಥಾವಗ ಒಲಿತಾನೇನ್ರಿ ಆ ವೇಂಕಪ್ಪ"

"ವೇಂಕಣ್ಣ ಆ ಭಗವಂತ ಒಲಿಯೂದು ಬರೀ ಪಂಡಿತರಿಗಷ್ಟೇ ಅಲ್ಲಪ್ಪಾ, ಶುದ್ಧ ಭಕ್ತಿಗೆ,. ನಿರ್ಮಲ ಮನಸ್ಸಿಗೆ, ಶ್ರೀ ಹರಿ, ಎಲ್ಲಾ ನಿಂದss ಎಲ್ಲಾ ನಿನ್ನ ಇಚ್ಛಾನಪಾ ಅನ್ನೂ ಸಮರ್ಪಣಾ ಭಾವಕ ಖರೇ ಭಕ್ತಿಗೆ ಅಂವಾ ದಾಸ ಆಗ್ತಾನಪಾ. ಕೇಳಿಲ್ಲ ಎಂಥೆಂತಾ ಪುರಾಣ ಪುಣ್ಯಕಥಿಯೊಳಗೆಲ್ಲ. ಆ ಭಗವಂತ ಎಂಥೆಂಥವ್ರಿಗೆ ಒಲದಾ ಅನ್ನೂದನ್ನೇ. ನಡೀ ನಮಗ ತಿರುಪತಿ ಸೇರ್ಲಿಕ್ಕೆ ಎನಿಲ್ಲಂದ್ರೂ ಪಾದಯಾತ್ರಾದಿಂದ ತಿಂಗಳಾದ್ರೂ ಬೇಕು. ಹಾದಿ ಸವಿಬೇಕು ಬೆಟ್ಟ ಹತ್ತಬೇಕು, ಇಳೀಬೇಕು. ಹೋಗ್ತ ಹೋಗ್ತೆ. ನಿನಗ ಭಗವದ್ಭಕ್ತರ ಕಥಿ ಹೇಳಕೋತ ಹೋಗ್ತೀನಿ"

ಆ ಹಿರಿಯರ ಜೊತೆ ನೆರಳಿನಂತೆ ನಡೆದಿದ್ದ ವೇಂಕಣ್ಣ

ಹೇಳುತ್ತ ನಡೆದಿದ್ದರು ಆ ವೃದ್ಧರು.



ಭಕ್ತ ಪ್ರಲ್ಹಾದನ ಕಥೆಯಂತೆ. ಧ್ರುವನ ಕಥೆಯಂತೆ ಭಕ್ತಿ ಭಾವವಿಲ್ಲದಿದ್ದರೂ ಅಂತ್ಯಕಾಲದಲ್ಲಿ ನಾರಾಯಣ ಎಂದು ಕರೆದು ಮುಕ್ತಿಕಂಡ ಅಜಾಮಿಳನಂತೆ ತುಂಬಿದ ಸಭೆಯೊಳಗೆ ಮಾನ ಹೋಗುತ್ತಿದ್ದ ದ್ರೌಪತಿ ಎರಡು ಕೈ ಎತ್ತಿ ಕೃಷ್ಣ ನೀನೇ ಗತಿ ಎಂದು ಕರೆದವಳಿಗೆ ಕ್ಷಣದಲ್ಲಿ ಅವಳ ಮಾನ ಕಾಪಾಡಿದ್ದ.

ಇವರೆಲ್ಲ ಪಂಡಿತರಾಗಿರಲಿಲ್ಲ. ವೇದಾಧ್ಯಯನ ಮಾಡಿರಲಿಲ್ಲ. ಹರಿನಾಮದಲ್ಲಿ ಅಮೃತ ಕಂಡವರು. ತೃಪ್ತಿಯಾಗುವಷ್ಟು ಅದರ ಸವಿಯನ್ನು ಕುಡಿದವರು. ತಮ್ಮನ್ನೇ ಹರಿಗೆ ಸಮರ್ಪಿಸಿಕೊಂಡವರು.

ಇಷ್ಟು ಚೆನ್ನಾಗಿ ಮನಸ್ಸು ಕೂಡ ಪಕ್ವವಾಗುವಂತೆ ಹೇಳುತ್ತಿದ್ದರು ಶೀನಪ್ಪ. ಕೇಳುತ್ತ ಕೇಳುತ್ತ ವೇಂಕಣ್ಣ ಅವರೊಡನೆ ಹಾದಿ ತುಳಿಯುತ್ತಿದ್ದ ಅವನು ಹಾಕುತ್ತಿದ್ದ ಪ್ರತಿಯೊಂದು ಹೆಜ್ಜೆಯಲ್ಲೂ ಆ ಹರಿಯನ್ನು ಸೇರಬೇಕೆಂಬ ತವಕವಿತ್ತು. ಅವರು ಹೋಗುತ್ತಿದ್ದ ಹಾದಿ ಅಲ್ಲಲ್ಲಿ ಸಿಗುವ ಅಗಾಧವಾದ ಗುಡ್ಡಗಳು, ಹಸಿರುಗಿಡ ಮರ, ಸ್ವರ್ಗದ ಹಾದಿ ಇದೇ ವೇಂಕಣ್ಣ ಅನ್ನುವಂತಿತ್ತು. "ಇದು ನಿನ್ನೊಬ್ಬನ ಹಾದಿ ಮಾತ್ರವಲ್ಲಪ್ಪ ನಿನ್ನಂತೆ ಆತ್ಮಜ್ಯೋತಿಯನ್ನು ಆರಿಸಿಕೊಂಡು ಬಂದವರು. ಅನೇಕ ಭಕ್ತರು ವ್ಯಾಸರಾಜರು, ವಾದಿರಾಜರು ಶ್ರೀರಾಘವೇಂದ್ರರು, ಪುರಂದರದಾಸರು, ವಿಜಯದಾಸರು ಹೇಳುತ್ತಲೇ ಹೋದರೆ ಅದಕ್ಕೆ ಕೊನೆಯಿಲ್ಲ ಇವರೆಲ್ಲ ಭೂ ವೈಕುಂಠವನ್ನು ಕಂಡಿದ್ದು ಇಲ್ಲಿಯೇ. ವೇಂಕಣ್ಣ" ಎಂದಿದ್ದರು. ನೋಡು ಆ ವೃಕ್ಷದಲ್ಲಿ ಅವನಿದ್ದಾನೆ. ಹರಿಯುವ ನೀರಿನಲ್ಲಿ ಅವನಿದ್ದಾನೆ. ಈ ಬೆಟ್ಟ ಗುಡ್ಡಗಳಲ್ಲಿ ಚಿಗುರಿದ ಹಸಿರಿನಲ್ಲಿ ಅವನಿದ್ದಾನೆ ಜಗತ್ತಿನ ಚರಾ–ಚರ ವಸ್ತುಗಳಲ್ಲೂ ಅವನಿದ್ದಾನಪ್ಪ ಅದಕ್ಕೆ ಅವನಿಗೆ ಅನಂತ, ಅಕ್ಷಯ, ಬ್ರಹ್ಮಾಂಡ, ಸರ್ವೋತ್ತಮ ಎಂದು ಕರೆಯುತ್ತಾರೆ. ಸಕಲ ಜೀವ ರಾಶಿಗಳನ್ನು ತನ್ನ ಒಡಲಲ್ಲಿ ಇಟ್ಟುಕೊಂಡು ರಕ್ಷಿಸುವವನು ಅವನೇ" ಎನ್ನುತ್ತಿದದರು.

"ಆದ್ರ ತಾತಾ ಅಂವಾ ಎಲ್ಲಾರಿಗೂ ಅಷ್ಟು ಸರಳಗ ಒಲಿಯಂಗಿಲ್ಲಂತ ನಮ್ಮಪ್ಪ ಹೇಳ್ತಿದ್ರು. ಅವನ್ನ ಒಲಿಸಿಕೊಳ್ಳಿಕ್ಕೆ ನನ್ನ ಹತ್ರ ರೊಕ್ಕ ಇಲ್ಲ. ಹಾಡಿ ಹೊಗಳಲಿಕ್ಕೆ ವಿದ್ಯಾ ಇಲ್ಲ. ನನ್ನಂಥ ಅಜ್ಞಾನಿಗೆ ಅಂವಾ ಹ್ಯಾಂಗ ಒಲಿತಾನ?"

"ಹುಚ್ಚಪ್ಪ ನಾ ಹೇಳ್ಲಿಲ್ಲ ನಿನಗೆ? ದೇವರನ್ನು ಒಲಿಸಿಕೊಳ್ಳಕ್ಕೆ, ಭಕ್ತಿ ಸಮರ್ಪಣಾ ಭಾವ ಒಂದಿದ್ರ ಸಾಕಪ್ಪಾ ಅಂತ. ವೇಂಕಣ್ಣ, ನೀ ಎನಂತ ನಿನಗ ಗೊತ್ತಿಲ್ಲ, ನಾ ಎನಂತ ನನಗೆ ಗೊತ್ತಿಲ್ಲ. ಅವನ ಚಿತ್ತ ಹ್ಯಾಂಗದನೋ ಯಾರಿಗ್ಗೊತ್ತು? ವೇಂಕಣ್ಣ, ಮನಸ್ಸಿನ ಎಲ್ಲ ಚಿಂತಿಬಿಡು. ಮುಂದ ಎನಾಗ್ಬೇಕು ಅನ್ನೂದರ ಧ್ಯಾನಾ ಮಾಡು. ಅವನ ಸಾನಿಧ್ಯಕ್ಕ ಹೊಂಟೀವಿ. ಅಂವಾ ಹ್ಯಾಂಗ ಹಾದಿ ತೋರಸ್ತಾನೋ ಹಂಗ ನಡೆಯೂದು ಎಲ್ಲಾನೂ ಅವನ ಪಾದಕ್ಕ ಸಮರ್ಪಣ ಮಾಡಿ ನಡೆಯೂದು ನೋಡಪಾ" ಎಂದು ಅಂತಃಕರಣದಿಂದ ಅವನ ಹೆಗಲು ತಟ್ಟಿದರು. ಇವರು ಶೀನಪ್ಪ ತಾತಾ ಅಲ್ಲ, ಯಾವದೋ ಒಂದು ಭರವಸೆಯ ಬೆಳಕು ತನ್ನನ್ನು ಕೈ ಹಿಡಿದು ನಡೆಸುತ್ತಿದೆ ದಾರಿ ತೋರಸುತ್ತಿದೆ ಎನಿಸಿತವನಿಗೆ.

ಕಾಲಹಾದಿ ನಡೆಯುತ್ತ, ನಡೆಯುತ್ತ, ಅನೇಕ ತಿರುವುಗಳನ್ನು ದಾಟಿ ಕಲ್ಲು, ಮುಳ್ಳು, ತಗ್ಗು ದಿನ್ನೆ, ಕಲ್ಲು ಬಂಡೆಗಳನ್ನು ಹತ್ತುತ್ತ ಇಳಿಯುತ್ತ ನಡೆಯುತ್ತಿದ್ದರು. ನಡು, ನಡುವೆ

ಅನೇಕ ಊರುಗಳಲ್ಲಿ, ದೇಸಾಯರ ದೇಶಪಾಂಡೆ, ಊರಿನ ಮುಖ್ಯಸ್ಥರ ಮನೆಗಳಲ್ಲಿ ಪಲ್ಲಕ್ಕಿ ಇಳಿಸಿ ಅಲ್ಲಲ್ಲಿ ಪೂಜೆ ಪುನಸ್ಕಾರಗಳಾಗುತ್ತಿದ್ದವು. ಭಜನೆ ಕೀರ್ತನೆಗಳಾಗುತ್ತಿದ್ದವು. ಎಲ್ಲಿ ನೋಡಿದರೂ ಭಕ್ತಿ ಮಹಾಪೂರ ಹರಿಯುತ್ತಿತ್ತು. ಅದರಲ್ಲೂ ತನ್ನ ಮನಸ್ಸು ಮುಳುಗುತ್ತ ಯಾವದೋ ಒಂದು ಅನುಭಾವದ ಆನಂದ ತನ್ನಲ್ಲಿ ಆಗುತ್ತಿತ್ತು. ಯಾವತ್ತೂ ತಾನು ತಿಳಿದಿಲ್ಲ ಇಂಥಹ ಒಂದು ಮನಸ್ಥಿತಿಯನ್ನು ತನ್ನ ಜೀವನದ ಪರಮಗುರಿ ಈ ಯಾತ್ರೆ ಎನಿಸುತ್ತಿತ್ತು ಅವನಿಗೆ. ಅಲ್ಲಲ್ಲಿ ಪೂಜೆ ನೈವೇದ್ಯ, ಊಟಗಳಾದ ಮೇಲೆ ಮತ್ತೆ ಛಪ್ಪರ ದೇವರ ಪಲ್ಲಕ್ಕಿ ಹೊತ್ತು, ಮುಂದಿನ ಊರಿಗೆ ಸಾಗುತ್ತ ಬಂದದ್ದು ಭೂವೈಕುಂಠದ ಸನ್ನಿಧಿಗೆ ಗೋವಿಂದರಾಜ ಪಟ್ಟಣಕ್ಕೆ.

ಹಗಲು–ರಾತ್ರಿ ಕಳೆಯುತ್ತ, ಎಲ್ಲರೊಳಗೆ ಒಂದಾಗಿ ಗೋವಿಂದ ಗೋವಿಂದ ಎನ್ನುತ್ತ, ಸ್ವಾಮಿ ಪುಷ್ಕರಣಿಯಲ್ಲಿ ಸ್ನಾನ ಮಾಡಿದ. ಬೆಟ್ಟದಿಂದ ಇಳಿದುಬರುವ ನೀರಿನಧಾರೆ. ಪವಿತ್ರವಾದ ಜಲದ ಸಾನಿಧ್ಯ. ಯಾವದೋ ಒಂದು ಅಗಾಧತೆಯಲ್ಲಿ ಮೀಯುತ್ತಿದ್ದೇನೆ. ಯಾವದೋ ಒಂದು ಅಕ್ಷಯ ಭಂಡಾರಕ್ಕೆ ಕೈ ಹಾಕುತ್ತಿದ್ದೇನೆ. ಯಾವದದು? ಸಿಗುವುದೇ ತಾನು ಬಯಸಿದ ವಸ್ತು.

ಯಾವದದು ಅನಂತತೆ? ಯಾವುದದು ಅಕ್ಷಯ ಭಂಡಾರ ಅಸ್ಪಷ್ಟವಾದ ಯಾವುದೋ ಬೆಳಕು ತನ್ನನ್ನು ಕೈ ಹಿಡಿದು ಕೊಂಡು ಎಲ್ಲಿಂದೆಲ್ಲಿಗೆ ಕರೆದುಕೊಂಡು ಬಂದಿದೆ. ಎನಿದು ಸಪ್ತಗಿರಿಯ ವೈಭವ. ಇಂಥಹ ದೇವತಾ ಸಾನಿಧ್ಯವನ್ನು ತಾನು ಜನ್ಮದಲ್ಲಿ ಕಾಣುತ್ತೇನೆಂಬ ಅರಿವಿತ್ತೆ? ಅಗಾಧವಾಗಿ ಹರಡಿದ ಬೆಟ್ಟಗಳು, ಸ್ವತಃ ನಾರಾಯಣನೇ ಬಂದು ನಿಂತಿದ್ದಾನೆ ಅಲ್ಲಿ ಎನ್ನುತ್ತಿದ್ದಳು ಅವ್ವ. ಅಂತಲೇ ಈ ಜಾಗ ಇಷ್ಟು ಪರಮಪವಿತ್ರ. ಈ ಅನಂತ ಗುಡ್ಡಬೆಟ್ಟ ನದಿಗಳಲ್ಲಿ, ಅವನು ಸರ್ವಾಂತರಯಾಮಿಯಾಗಿ ನಿಂತಿದ್ದಾನೆ.

ಆದರೆ ತನ್ನ ಮುಂದಿನ ದಾರಿ ಯಾವದು? ಅವನನ್ನು ಕಾಣುವ ಬಗೆ ಹೇಗೆ? ಗುಂಪಿನೊಡನೆ ತಾನು ಗೋವಿಂದ ಗೋವಿಂದ ಎಂದ ಭಕ್ತಿ ಪರವಶತೆಯಿಂದ ನಡೆಯುತ್ತಲೇ ಇದ್ದಾನೆ ವೇಂಕಣ್ಣ. ತಿರುಪತಿಗೆ ಬಂದ ಗಳಿಗೆ ಕಪಿಲ ತೀರ್ಥದಲ್ಲಿ ಮಿಂದು ಬಂದರೆ ಎಂಥ ಪುನೀತ ಅನುಭವ.

ಪಾಪನಾಶಿನಿ, ಆಕಾಶಗಂಗೆ ಮಹಾದೇವರ ದರ್ಶನ.

ತಾಯಿ, ಪದ್ಮಾವತಿಯ ನಿರ್ಮಲ ಅಂತಃಕರಣದ ರೂಪ ಆ ವೆಂಕಟೇಶ ತಂದೆಯಾದರೆ ಇವಳು ತಾಯಿಯಲ್ಲವೆ. ವೇಂಕಣ್ಣ ಕಣ್ಮುಚ್ಚಿಕೊಂಡು ದೇವಿಯ ಮೂರ್ತಿಯ ಮುಂದೆ ನಿಂತಿದ್ದ. ಕಣ್ಣಲ್ಲಿ, ತುಂಬಿದ ನೀರು, ಎಷ್ಟು ಜನ್ಮಗಳ ಪುಣ್ಯ ತನ್ನದು. ತಾಯಿ ಜಗತ್ತನ್ನು ರಕ್ಷಿಸುವವಳು ನೀನು. ಈ ಪಾಪಿಯನ್ನು ಮನ್ನಿಸುವ ಲೌಕಿಕದ ಯಾವದೋ ಒಂದು ಆಶೆ. ನನ್ನನ್ನು ಇಲ್ಲಿಗೆ ಕರೆತಂದಿದೆ. ಅದು ಯಾವದು ನನಗೆ ಗೊತ್ತಿಲ್ಲ ತಾಯಿ ನನ್ನ ವಾಂಛೆ ಎನು? ನನ್ನ ಗುರಿ ಎನು? ಯಾತಕ್ಕಾಗಿ ಇಲ್ಲಿಗೆ ಬಂದೆ ಎಂಬ ಸ್ಪಷ್ಟವಾದ ಗುರಿಯೂ ಇಲ್ಲ ತಾಯಿ ಈ ಅನಂತತೆಯನ್ನು ಕಾಣುವ ಕಣ್ಣನ್ನು ನನ್ನ ಆತ್ಮಕ್ಕೆ ಹೆಚ್ಚು ಅದು. ನಿನ್ನಿಂದ ಮಾತ್ರ ಸಾಧ್ಯ. ಎನ್ನುವಂತೆ ವೇಂಕಣ್ಣ ಎಷ್ಟೋ ಹೊತ್ತು ದೇವಿಯ ಮೂರ್ತಿಯ ಎದುರು ನಿಂತಿದ್ದ.



ಜಗದೊಡೆಯನನ್ನು ಒಲಿಸಿದವಳಲ್ಲವೆ ನೀನು? ನವರಾತ್ರಿ ಬಂದರೆ ಸಾಕು. ಅಪ್ಪ, ಪಡಸಾಲೆಯ ಜಗಲಿಯ ಮೇಲೆ ಕೂತು ದೀಪ ಹಚ್ಚಿ, ವೇಂಕಟೇಶ ಕಲ್ಯಾಣ ಓದುತ್ತಿದ್ದ. ವೆಂಕಟೇಶ ಪಾರಿಜಾತ ಓದತ್ತಿದ್ದ. ಇದು ವೆಂಕಟೇಶ ಕಲ್ಯಾಣ ಅಷ್ಟೆ ಅಲ್ಲ ಜಗತ್ತಿನ ಕಲ್ಯಾಣ ನಿತ್ಯ ಕಲ್ಯಾಣಿಯಾದವನಿಗೆ ಇನ್ನಾವ ಕಲ್ಯಾಣ. ಇದು ನೆಪ ಮಾತ್ರ ನಾರಾಯಣ ಶ್ರೀನಿವಾಸನಾಗಿ ಬಂದದ್ದೆ. ಭೂಲೋಕದ ಜನರ ಉದ್ಧಾರಕ್ಕೆ. ತಾಯಿ ಅಂಥ ಕಲ್ಯಾಣಕ್ಕೆ ಕಾರಣವಾದವಳಲ್ಲವೆ ನೀನು? ಆ ಜಗದೀಶನನ್ನು ಕಾಣುವ ದಾರಿ ತೋರುವ ಜಗಜ್ಜನನಿ ಎಂದು ಅನನ್ಯತೆಯಿಂದ ಕಣ್ಣೀರು ತುಂಬಿ ಕೇಳಿದ.

ಮನಸ್ಸು ಇನ್ನು ಎನನ್ನೊ ಹಂಬಲಿಸುವ ಹಾದಿಯಲ್ಲಿತ್ತು. ಅದೇ ಭಕ್ತಿವೃಂದದೊಡನೆ ಬೆಟ್ಟ ಹತ್ತುತ್ತಿದ್ದಂತೆ. ಮನಸ್ಸು ಪರಮಾನಂದದ ಉತ್ತುಂಗಕ್ಕೆ ಎರಿತೋ ಎನೋ? ಆ ಭಕ್ತ ವೃಂದ ಕೂಡ  ಭಕ್ತಿಯ ಪರಾಕಾಷ್ಠೆಯನ್ನು ಮುಟ್ಟಿತ್ತು. “ಗೋವಿಂದ, ಗೋವಿಂದ ಎನ್ನುವ ಅವರ ಹೃದಯದ ಕೂಗು ಇಡಿ ಬೆಟ್ಟಗುಡ್ಡಗಳಲ್ಲಿ ಪ್ರತಿಧ್ವನಿಸಿ ಮತ್ತೀವರ ಅಂತರಂಗಕ್ಕೆ ಬಂದು ಸೇರುತ್ತಿತ್ತು. ಹರಿಯನ್ನು ಸೇರುವ ದಾರಿ. ಅವನನ್ನು ಕಾಣುವ ಹಾದಿ. ಕಷ್ಟಕರವಾದದ್ದೆ. ಕಲ್ಲು ಮುಳ್ಳು ಹತ್ತಲು ಕಷ್ಟಕರವಾದ ಬಂಡೆಗಳು ಯಾವುದರ ಅರಿವಿಲ್ಲದೆ ಅವನನ್ನು ಕಾಣುವದೊಂದೆ ಹಂಬಲವಾಗಿ ಆ ಪರಮಮೂರ್ತಿಯ ದರ್ಶನಕ್ಕೆ ಇಹದ ಅರಿವನ್ನು ಮರೆಯುತ್ತ ಮುಂದೆ ಸಾಗುತ್ತಿದ್ದಾರೆ. ಜನ ತನ್ನದು ಅದೇ ಸ್ಥಿತಿಯಲ್ಲವೆ? ಎನಿಸಿತು ವೇಂಕಣ್ಣನಿಗೆ.

ಬೆಟ್ಟದ ಮಹಿಮೆ ಬಗ್ಗೆ ಒಬ್ಬೊಬ್ಬರು ಒಂದೊಂದು ಬಗೆಯ ವರ್ಣನೆ ಮಾಡುತ್ತಿದ್ದಾರೆ. ಇದು ಬರಿ ಬೆಟ್ಟವಲ್ಲ ಸ್ವರ್ಗದ ಬಾಗಿಲಿಗೆ ಹಾದಿ ಸೋದೆಯಿಂದ ಬಂದ ಶ್ರೀ ವಾದಿರಾಜರಂಥ ಮಹಾಮಹಿಮರಿಗೆ ಬೆಟ್ಟದ ಬದಲು ಬರೇ ಸಾಲಿಗ್ರಾಮಗಳೇ ಹಾದಿಗುಂಟ ಕಾಣಿಸಿತಂತೆ ಅದು ಅವರ ಭಕ್ತಿಯ ಪರಮಾವಧಿ. ಅವರ ನಿಷ್ಠೆ ಅಷ್ಟು ಕಠೋರವಾಗಿತ್ತಂತೆ. ಆ ಶ್ರೀಹರಿಯಲ್ಲಿದ್ದ ಅವರ ಶ್ರದ್ಧೆ, ವೈಕುಂಠದಿಂದ ಬಂದು ನಿಂತ ಭಗವಂತನ ಸಾನಿಧ್ಯ. ಬರೀ ಕಲ್ಲಿನ ಬೆಟ್ಟ ಹೇಗಾದೀತು? ಹೆಜ್ಜೆ ಮುಂದಿಟ್ಟು ಹೋದರೆ, ಬರೀ ಸಾಲಿಗ್ರಾಮದ ಶಿಲೆಗಳಂತೆ ಅದಕ್ಕೆ ಪಾದ ಉರದೆ ಮೊಳಕಾಲಿನಿಂದ ಅವರು ಬೆಟ್ಟ ಹತ್ತಬೇಕಾದರೆ ಅವರ ಅಂತರಂಗದ ನಿಷ್ಠೆ, ಸಾಮರ್ಥ್ಯ ಸಮರ್ಪಣಾ ಭಾವ ಹೇಗಿರಬೇಕು. ಹತ್ತಿರದಲ್ಲಿ ಬರುತ್ತಿದ್ದ ವೃದ್ಧರು ಕೂಡ ಅದನ್ನೇ ಹೇಳಿದ್ದರು.

ಇಂಥ ಭಕ್ತಿಯ ಸಾಮರ್ಥ್ಯ ತನ್ನಲ್ಲಿದ್ದೀತೆ? ತನಗಿರುವ ಒಂದೇ ಹಂಬಲ. ಆ ಹರಿಯ ಹೊರತು ತನಗೆ ಯಾರಿಲ್ಲ. ಯಾರೂ ದಿಕ್ಕಿಲ್ಲ ಬಾಲ್ಯದಲ್ಲಿ ಅವ್ವ ಹೇಳುತ್ತಿದ್ದ ಮಾತೊಂದೆ ತನ್ನ ಅಂತರಂಗದಲ್ಲಿ ಯಾವಾಗಲೂ ತಂತಿಯಂತೆ ಮೀಟುತ್ತಿದೆ. “ಯಾರಿಲ್ಲದವ್ರಿಗೆ ಆ ದೇವರ ನಪಾ ದಿಕ್ಕು ಅನನ್ಯ ಅಂತಃಕರಣದಿಂದ ಎನೂ ನಂದಲ್ಲ. ಎಲ್ಲಾ ನಿಂದ ಅಂತ ಹಂಬಲಿಸಿ ಕರದ್ರ ಬರ್ತಾನ ಅಂವಾ. ಮನಸ್ಸಿನ್ಯಾಗ ಆರ್ತರವ ಇರ್ಬೇಕು. ಹಂಬಲಿಸಬೇಕು. ಕೂಸು ತಾಯಿಯನ್ನು ಕರೆದ್ಹಂಗಿರಬೇಕು. ಬಾಳಾ ತನ್ನ ಭಕ್ತರ ಕರೆಗೆ ಓಗೊಟ್ಟು ಕೊಂಡು ಬರ್ತಾನಪಾ ವೇಂಕಣ್ಣ. ನಾವು ಈಗಷ್ಟ ನಿನಗೆ ತಂದಿ ತಾಯಿ ಇರಬಹುದು. ಆದ್ರ ಅಂವಾ ಜಗತ್ತಿಗೇ ತಂದಿ ತಾಯಿ ಅನಾಥೋ ದೇವ ರಕ್ಷಕ ಅಂತಾರ. ಯಾರಿಲ್ಲದವ್ರಿಗೆ ಆ ಭಗವಂತ ಇದ್ದಾನೆ. ಎಂದಿದ್ದಳು.

ಹೌದಲ್ಲ ಅಮ್ಮ ಈ ಅಜ್ಜ ಹೇಳಿದ್ದಂಗ ಯಾರಿಲ್ಲದ ಧ್ರುವಗೆ ಅವನೇ ಬಂದು ಕಾಯ್ದು. ಪ್ರಲ್ಹಾದ ಭಕ್ತಿ ಅವನನ್ನು ಕಾಯ್ತು. ಕೃಷ್ಣಾ ನೀನ ಅಂದ ದ್ರೌಪದಿಗೆ ಅವನ ಕಾಯ್ದ ವಾದಿರಾಜರ ಭಕ್ತಿ ಅಂಥಾ ಸರ್ವಾಂತರ್ಯಾಮಿ ಅಂತ ತೋರಸ್ತು, ಇವತ್ತೆ ಜಗತ್ತನ್ನೇ ಉದ್ಧಾರ ಮಾಡ್ತೀನಂತ ಭೂಲೋಕಕ್ಕೆ ಬಂದು ನಿಂತಾನಲ್ಲ. ಅಂಥಾ ನನ್ನ ಕರೆಗೆ, ನನ್ನ ಮೊರೆಗೆ ನನ್ನ ಹಂಬಲಕ್ಕೆ ನನ್ನ ಆರ್ತರವಕ್ಕ ಉತ್ತರಾ ಕೊಡ್ತಾನೇನು?

ಬೆಟ್ಟ ಹತ್ತಿ ಇಳಿದು, ಹತ್ತಿ ಇಳಿದು, ಮನಸ್ಸಿನ ಎಲ್ಲ ಆಂತರೀಕ ಗೊಂದಲಗಳನ್ನು ದಾಟುತ್ತ ಬಂದಂತೆ, ಹೆಜ್ಜೆ ಹಾಕುತ್ತಿದ್ದಂತೆ. ಅಗೋ ಕಾಣುತ್ತಿದೆ. ಗಾಳಿಗೋಪುರ ಅದನ್ನು ದಾಟಿ ಕೆಳಗಿಳಿದು ಕಾಲು ಹಾದಿಗುಂಟ ಉದ್ದಕ್ಕೂ ಸಾಗುತ್ತಿದ್ದರೆ ಕಾಣತ್ತಿದೆ. ಗುಡಿಯ ಗೋಪುರ, ಗೋಪುರ ಕಾಣುತ್ತಿದ್ದಂತೆ. ಭಕ್ತ ವೃಂದದಲ್ಲಿ ಉತ್ಸಾಹ ಆವೇಶ, ಭಕ್ತಿಯ ಪರಾಕಾಷ್ಠತೆ ತುಂಬಿದಂತೆ ಜೈ ಜೈ ಕಾರಗಳು "ಹರೇ ಶ್ರೀನಿವಾಸ ಹರೇ ವೇಂಕಟರಮಣ, ಗೋವಿಂದ ಗೋವಿಂದ ಮುಕುಂದ.

ಎಂಥಹ ಆರ್ತನಾದವಿತ್ತು ಆ ಭಕ್ತಿವೃಂದದ ಮುಖಾರವಿಂದದಲ್ಲಿ ಇದಕ್ಕೆ ವೇಂಕಣ್ಣನೇನೋ ಹೊರತಾಗಿರಲಿಲ್ಲ. ಗುಡಿಯ ಗೋಪರ ಕಾಣುತ್ತಿದ್ದಂತೆ. ಮನಸ್ಸು ದೇಹ ಎಲ್ಲ ಕಣ್ಣಾದವನಂತೆ ನೋಡುತ್ತಲೇ ನಿಂತಿದ್ದ. ಇದು ಕನಸೋ ಇಲ್ಲಾ ಭ್ರಮೆಯೋ ತಾನು ನಿಜವಾಗಿಯೂ ಆ ವೇಂಕಟರಮಣನ ಸನ್ನಿಧಿಗೆ ಬಂದಿದ್ದೇನೆಯೇ? ಆ ನಮ್ಮಪ್ಪನ ಗುಡಿಯ ಗೋಪುರವೆ ಇಷ್ಟು ತನ್ಮಯ ಭಾವನೆ ಹುಟ್ಟಿಸುತ್ತಿದ್ದರೇ ಇನ್ನು ಆ ವೇಂಕಟರಮಣ? ಹೇಗಿದ್ದೀತು ಅವನ ರೂಪ ಹೇಗಿದ್ದೀತು ಅವನು ನಿಂತ ಚೆಂದ? ಹೇಗಿದ್ದೀತು ಅವನ ನಯನ ಮನೋಹರ ಮೂರ್ತಿ.

ಈಗ ವೇಂಕಣ್ಣನಿಗೆ ಗುಡಿಯ ದಾರಿ. ಬರೀ ಕಾಲುದಾರಿಯಾಗಿರಲಿಲ್ಲ. ಭೂಮಂಡಲಕ್ಕೆ, ಕರೆದೊಯ್ಯುವ ಆ ದಿವ್ಯ ಸನ್ನಿಧಿಗೆ ಅವನನ್ನು ಮುಟ್ಟಿಸುವ ಕೈ ದೀವಿಗೆಯಾಗಿತ್ತು.

ಸೂತ್ತಲಿನ ಗದ್ದಲ, ಗುಂಪು. . .ಎಲ್ಲೆಲ್ಲಿಂದಲೂ ಬರುತ್ತಿರುವ ಹರಿನಾಮ ಸ್ಮರಣೆಗಳು. ಗೊವಿಂದ ಗೋವಿಂದ ಎನ್ನುವ ತಾರಕ ಶಬ್ದಗಳು. ಅವನ ಕಿವಿಗೆ ವೀಣೆಯ ಝೇಂಕಾರದಂತೆ ಕೇಳುತ್ತಿತ್ತು. ಅವೇಲ್ಲ ತನ್ನನ್ನು ಸೂತ್ತುವ ವರ್ತುಲಗಳಾಗಿ ತಾನದರ ನಡುವೆ ಒಂದು ಶೂನ್ಯಬಿಂದುವಾಗಿ ಆ ವೃತ್ತಗಳಲ್ಲಿ ಚಲಿಸುತ್ತ ಚಲಿಸುತ್ತ, ಹರಿಯ ಆ ದಿವ್ಯ ಪಾದಗಳನ್ನು ದರ್ಶನ ಮಾಡಬೇಕು. ಆದರೆ ವೇಂಕಣ್ಣನಿಗೆ ಅರಿವಿರಲಿಲ್ಲ. ಶೂನ್ಯವೆಂದು ತಿಳಿದ ತಾನು ಶೂನ್ಯದಿಂದಲೇ ಬ್ರಹ್ಮಾಡ ಸೃಷ್ಟಿಯಾಗುವಂತ ತನ್ನಿಂದ ಏನೋ ಘಟಿಸುವದಿದೆ. ಅದು ಜನ ಕಲ್ಯಾಣಕ್ಕೆ ಕೂಡ ಕಾರಣವಾಗುತ್ತದೆ. ಆ ದಿವ್ಯ ಪಾದಗಳೇ, ತನ್ನ ಸಾನಿಧ್ಯವಾಗುತ್ತಿದೆ ಎಂದು.

ಆದರೂ ಅವನ ಮನದಲ್ಲಿ ಯಾವದೋ ಅನುಮಾನದ ಛಾಯೆ ಹುಟ್ಟುತ್ತಿತ್ತು. ಅನಾಥವಾಗಿದ್ದ ತನ್ನನ್ನು ಆ ಹರಿ ಕರುಣಿಸುವನೇ? "ಬಾ ವೇಂಕಣ್ಣ, ನಿನಗಾಗಿ ನಾನಿದ್ದೇನೆ ಎಂದು ಎದೆಗೊತ್ತಿಕೊಂಡು ಸಂತೈಸುವನೆ? ಭವಸಮುದ್ರ ದಾಟಿ ಬಂದವರಿಗೆ ಒಲಿಯುವನು."

ಆ ಶ್ರೀಹರಿ ಎಂದು ಯಾರೋ ತಂಬೂರಿ ಮೀಟುತ್ತಾ ಹಾಡುತ್ತಿದ್ದಾರೆ. ಆದರೆ ತಾನು ಭವದಲ್ಲಿ ಹೊರಳಾಡುತ್ತಲೇ ಇದ್ದವನು. ತಂದೆ ತಾಯಿಯನ್ನು ಕಳೆದುಕೊಂಡು ಅನಾಥನಾದವನು. ಅನಾಥನಾದವನಿಗೆ ಯಾರಾದರೂ ಪ್ರೀತಿಸಬೇಕು. ಅಂತಃಕರಣ ಬೇಕು ಎಂದು ಹಂಬಲಿಸಿ



ಹಗಲು ರಾತ್ರಿಗಳನ್ನು ಕಳೆದವನು. ಓದು ಬರಹ ಪಾಂಡಿತ್ಯವಿಲ್ಲದೆ ಪಾಮರನಾಗಿ ದನಗಳನ್ನು ಕಾಯುತ್ತ ದಿನ ಕಳೆದವನು. ಹಿಡಿ ಅನ್ನಕ್ಕಾಗಿ ಅತ್ತಿಗೆಯ ಕಠೋರೋಕ್ತಿಗಳನ್ನು ಸಹಿಸಿಕೊಂಡವನು. ತೃಣಕ್ಕಿಂತ ಕಡೆಯಾಗಿ ಬಾಳಿ, ಈಗ ಯಾರೂ ಇಲ್ಲದೆ, ಇವನೇ ಪರದೈವ ಎಂದಕೊಂಡು ಬಂದವನು. ಆದರೂ ತನ್ನ ನಂಬಿಕೆಯಲ್ಲಿ, ಹಂಬಲಿಕೆಯಲ್ಲಿ ಸ್ವಾರ್ಥವಿತ್ತು. ಹುಟ್ಟಿ ಬೆಳೆದ ಮನೆಯಲ್ಲಿ ನೆಲೆಸಿರದೆ, ಆಸರೆ ಸಿಗದೆ ಅಲ್ಲಿ ಇರಲು ಆಗದಷ್ಟು ಮನಸ್ಸು ರೋಸಿದಾಗ ಈ ಹರಿಯನ್ನು ಹುಡುಕಿಕೊಂಡು ಬಂದದ್ದು ಸ್ವಾರ್ಥವಲ್ಲವೆ? ಅಕಸ್ಮಾತ್ ಅವ್ವ ಅಪ್ಪ ಬದುಕಿದ್ದರೆ? ಅತ್ತಿಗೆ ತನ್ನನ್ನು ಅಂತಃಕರಣದಿಂದ ಸಹಾನುಭೂತಿಯಿಂದ ನೋಡಿಕೊಂಡಿದ್ದರೆ, ತಾನು ಇಲ್ಲಿಗೆ ಬರಲು ಹಂಬಲಿಸುತ್ತಿದ್ದೇನೆ? ಹರಿಯ ದರ್ಶನ ಅವನ ಕಾರುಣ್ಯ ಬೇಕೆಬೇಕೆಂದು ಹಂಬಲಿಸುತ್ತಿದ್ದೇನೆ?

ಆದರೂ ಬಂದಿದ್ದೀಯಾ ವೇಂಕಣ್ಣ. ಶ್ರೀ ಹರಿಯ ದಿವ್ಯ ಮೂರ್ತಿಯನ್ನು ಕಂಡು ಜನ್ಮ ಸಾರ್ಥಕ ಮಾಡಿಕೊ. ಹರಿಯನ್ನು ಕಾಣುವದು ಕೂಡ ಒಂದು ಪಾರಮಾರ್ಥಿಕ ಸ್ವಾರ್ಥವಲ್ಲವೆ? ವೇಂಕಣ್ಣ ಇದು ಲೌಕಿಕಕ್ಕೆ ಸೇರಿದ ಸ್ವಾರ್ಥವಲ್ಲ, ಅವನನ್ನು ಕಾಣಬೇಕೆಂಬ ಸ್ವಾರ್ಥದಲ್ಲೂ ಕೂಡ ನಿನ್ನ ಬದುಕಿನ ಉನ್ನತಿಯಿದೆ.

ವೇಂಕಣ್ಣ ಒಂದು ಗಳಿಗೆ ಪ್ರಕಾರದಲ್ಲಿ ಕಣ್ಮುಚ್ಚಿ ನಿಂತ ಜನ ಒಬ್ಬೊಬ್ಬರಾಗಿ ದರ್ಶನಕ್ಕೆ ಹೋಗುತ್ತಿದ್ದಾರೆ. ತಾರಕಕ್ಕೆ ಏರಿದ ಅವರ ಹರಿಸ್ಮರಣೆಯಲ್ಲೂ ಎಂಥಹ ಆರ್ತರವವಿದೆ.

ಅವರೊಡನೆ ತಾನು ಗೋವಿಂದ ಗೋವಿಂದ ಎನ್ನುತ್ತ ಹೆಜ್ಜೆ ಹಾಕುತ್ತಿದ್ದಾನೆ ವೇಂಕಣ್ಣ, ಗರ್ಭ ಗುಡಿಯ ಕಡೆ ಬರುತ್ತಿದ್ದಾರೆ ಎಲ್ಲ, ಅವನು ಬಂದು ನಿಂತ. "ಗೋವಿಂದ ಹರೇ ನಾರಾಯಣ, ಅನಾಥ ಬಂಧೊ ರಕ್ಷಿಸು ರಕ್ಷಿಸು" ಹೌದು ಅಷ್ಟುಬಿಟ್ಟರೆ ತನ್ನ ಅಂತರಂಗದ ವೇದನೆಯನ್ನು ಹೇಳಿಕೊಳ್ಳಲು ತನಗ್ಯಾವ ಶಬ್ದಗಳು ಬರುವುದಿಲ್ಲ. ಅದೊಂದೆ ಕೂಗು ಅವನ ಅಂತರಂಗಕ್ಕೆ ಸೇರಬೇಕು.

ಕೆಲವೊಮ್ಮೆ ಕಣ್ಣು ಮುಚ್ಚಿ ಧ್ಯಾನಿಸುತ್ತ ಕೆಲವೊಮ್ಮೆ ಕಣ್ತೆರೆದು ಹಲಬುತ್ತ. ಗರ್ಭಗುಡಿಯೊಳಗೆ ಬಂದು ನಿಂತರೆ ಏನಿದೆ? ಹೇಗಿದ್ದಾನೆ ಜಗದೊಡೆಯ? ಬ್ರಹ್ಮಾಂಡದಂಥಹ ಭಾವನೆ ಹೆಪ್ಪುಗಟ್ಟುತ್ತ ಅವನ ಅನಂತ ಮೂರ್ತಿಯನ್ನು ನೊಡುತ್ತಲೇ ನಿಂತ ಆ ಭಗವಂತನನ್ನು ನೋಡುತ್ತಿದ್ದಂತೆ ಎಂಥಹ ಆನಂದದ ಅನುಭವ ಹರಿಯ ಮುಂದೆ ಕೈಮುಗಿದು ನಿಂತ ವೇಂಕಣ್ಣ, ದಿನಾಲೂ ಅಪ್ಪ ಅನ್ನುತ್ತಿದ್ದ, ಶ್ರೀ ವಿಷ್ಣುಸ್ತುತಿ ನೆನಪಾಗುತ್ತಿದೆ. ಹೇಗೆ ಕಣ್ಮುಂದೆ ಕಟ್ಟುವಂತೆ ಆ ಭಗವಂತನ ವರ್ಣನಾರೂಪವನ್ನು ಮಾಡುತ್ತಿದ್ದರು. ಆ ಭಗವಂತನ ಮನೋಹರವಾದ ಚರಣಯುಗಳುವನ್ನು ನೋಡುತ್ತಿದ್ದಾನೆ. ಏನೆಂದು ಸ್ತುತಿಸುತ್ತಿದ್ದರು ಅಪ್ಪ, ಶ್ಲೋಕಗಳೊಂದಿಗೆ ಅರ್ಥವನ್ನು ಕೂಡ ಹೇಳುತ್ತ ವರ್ಣಿಸುತ್ತಿದ್ದರು.

ಭಗವಂತನ ಮನೋಹರವಾದ ದಿವ್ಯ ಪಾದಗಳು

ಕೆಂಪು ಮಣಿಯಂಥಹ ಉಗುರುಗಳು.

ಅದರಿಂದ ಹತ್ತು ಚಂದ್ರರೇ ಉದಯಿಸಿ ಬಂದಂತಹ ಚಿಮ್ಮಿದ ಬೆಳಕಿನ ಪುಂಜ. ಸತ್ವದ ಸಾಕ್ಷಾತ್ಕಾರವನ್ನು ಮಾಡುತ್ತಿದೆ.

ಎನಪ್ಪ ನಿನ್ನ ದಿವ್ಯಪಾದ.

ವೇಂಕಣ್ಣನ ಕಣ್ಣು ಆ ಭಗವಂತನ ಮನೋಹರವಾದ ರೂಪದಲ್ಲೆ ನಟ್ಟಿದೆ. ಸಹಜಶಾಂತಿಯಿಂದ ರೂಪಗೊಂಡ ಕಂಬಗಳಂತೆ ಕಂಗೊಳಿಸುವ ಆ ಭಗವಂತನ ಮೊಳಕಾಲುಗಳು ಲಕ್ಷ್ಮೀದೇವಿ ತನ್ನ ಕೈಗಳಿಂದ ಶೇಷನ ಹಾಸಿಗೆಯಿಂದ ಎತ್ತಿ ತನ್ನ ತೊಡೆಯ ಮೇಲಿರಿಸಿ ಕೊಂಡು, ಮೃದುವಾಗಿ ಒತ್ತುತ್ತಿದ್ದ ದಿವ್ಯ ಕಾಲುಗಳಲ್ಲವೆ? ಕಾಂತಿ ಚಿಮ್ಮುವ ಸುಂದರಮಣಿಗಂಟುಗಳು. ಎಂಥಹ ಪರಿಪೂರ್ಣವಾದ ಚೆಲುವು. ನನ್ನಪ್ಪನದು. ಕಣ್ಣು ಕುಕ್ಕುವ ಕಾಂತಿ ನುಣುಪು, ಸಾಮರ್ಥ್ಯ, ಪರಾಕ್ರಮ ಎಲ್ಲ ಗುಣಗಳು ತುಂಬಿದಂಥ ದೃಢವಾದ ಪರಿಪುಷ್ಠವಾದ ತೊಡೆಗಳು.

ಇನ್ನು ಆ ಪವಮಾನನಿಗೆ ತಂದೆಯಾದ ಭಗವಂತನ ಉಡಿದಾರ ಸೊಂಟಕ್ಕೆ ಸೂತ್ತುವರಿದ ಪಟ್ಟೆಯ ಪಿತಾಂಬರವನ್ನು ಬಿಗಿದು ಬೆಳಗುವ ಚೆಂದದ ಉಡಿದಾರ. ಇನ್ನು ಆನಾಭಿಯೊ?

ಚತುರ್ಮುಖ ಬ್ರಹ್ಮದೇವ ಮೂಡಿಬಂದ ನಾಭಿಯಲ್ಲವೆ? ಸರಿಯುಂಟೆ ಆ ಸೃಷ್ಠಿಗೆ? ಇನ್ನು ಆ ಭಗವಂತನ ಒಡಲು ಮುಕ್ತ ಜೀವರ ಗಡಣಕ್ಕೆ ಆಸರೆಯಾಗಿದೆ. ಮುತ್ತುಗಳ ಮಾಲೆಯಿಂದ ನಡುಕಟ್ಟಿನಿಂದ ಬಿಗಿಯಲ್ಪಟ್ಟಿದೆ. ಗುಣಾತೀತವಾದ ಸದ್ಗುಣಗಳಿಂದ ತುಂಬಿದ ಸೃಷ್ಠಿಯಲ್ಲಿ ವಿಶ್ವವನ್ನು ಹೊರಚೆಲ್ಲಿದ ಅದ್ಭುತವಾದ ಒಡಲು ಆ ದಿವ್ಯ ಮೂರ್ತಿಯದು.

ಅಂಥ ಒಡಲು ನಮ್ಮನ್ನು ಕಾಪಾಡಲಿ ಎಂದು ಭಗವದ್ಭಕ್ತರು ಆರ್ತರಾಗಿ ಬೇಡುತ್ತಿದ್ದಾರೆ.

ಇನ್ನು ಆ ದಿವ್ಯ ಮೂರ್ತಿಯ ಕೊರಳಲ್ಲಿ ಮುತ್ತಿನ ಮಾಲೆಯೊ? ಮುಕ್ತರಾದ ಚತುರ್ಮುಖರ ಗಣವೆ ನಿತ್ಯ ಮುಕ್ತನಾದ ಭಗವಂತನ ಕೊರಳಲ್ಲಿ ಮುತ್ತುಗಳಾಗಿ ಭಕ್ತಿಯಿಂದ ನೆಲೆಸಿವೆ. ಎನೋ ಎನ್ನುವಂತಿದೆ ಎದೆಯಲ್ಲಿ ನೆಲೆಸಿದ ಲಕ್ಷ್ಮಿಯ ಪಡಿನೆಳಲು. ಆ ಮುತ್ತುಗಳಲ್ಲಿ ಪಡಿ ಮೂಡಿವೆ.

ಚಕ್ರಪಾಣಿಯಾದ ಭಗವಂತನ ಆ ಎದೆ ಜ್ಞಾನಿಗಳ ಧ್ಯಾನಕ್ಕೆ ಗೋಚರವಾದ ಆ ಎದೆ ತನ್ನ ಅನುಪಮವಾದ ಲೀಲೆಯಿಂದ ಜಗತ್ತನ್ನೇ ಅಚ್ಚರಿಗೊಳಿಸಿದ ಆನಂದಮಯಿಯಾದ ಲಕ್ಷ್ಮೀದೇವಿಯ ನೆಲೆಮನೆಯಾದ ಎದೆ.

ಭಗವಂತನ ಕೊರಳಲ್ಲಿ ಶೋಭಿಸುವ ಆ ಕೌಸ್ತುಭ ಮಣಿಯೋ ಆ ಕರುಣಾಮಯಿ ಎದೆಯಲ್ಲಿ ಚಂದನಾದಿಗಳಿಂದ ಚೆಲುವುಗೊಂಡು ಎಲ್ಲೆಡೆಗೂ ತುಂಬಿ ಕಂಪು ಬೀರುವ ಆ ಸುಗಂಧ ಲೇಪ. ಸಹಜವಾಗಿ ಕಂಪು ತುಂಬಿದ ಎದೆಗೆ ಚಂದನ ಲೇಪವೆ? ನಿತ್ಯ ಸುಂದರವಾದ ಎದೆಗೆ ಈ ಎಲ್ಲ ಸಿಂಗಾರವೆ?

ಮೂರು ಲೋಕದ ತಂದೆ ನಾರಾಯಣನ ನೀಳಾದ ದುಂಡಗಿನ, ತೋಳುಗಳು, ಅತಿ ಸುಂದರವಾದ ಲೋಕವಿಲಕ್ಷಣ ತೋಳುಗಳು, ಶಂಖ ಚಕ್ರಾದಿಗಳಿಂದ ಅಂಕಿತವಾದ ತೋಳುಗಳು. ಎಷ್ಟು ಸರ್ವೋತ್ಕೃಷ್ಟ ಆ ಭಗವಂತನ ತೋಳುಗಳು. ಎತ್ತಿ ಹಿಡಿದ ತೋಳೂಗಳಲ್ಲಿ ಪ್ರಖರವಾಗಿ ಬೆಳಗುವ ಚಕ್ರ, ಒಂದು ಕೈಯಲ್ಲಿ ಪಾಂಚಜನ್ಯ ಶಂಖ, ದೈತ್ಯರನ್ನು ಸದೆಬಡಿಯಲು ಒಂದು ಕೈಯಲ್ಲಿ ಹಿಡಿದ ಗದೆ. ಎತ್ತರವಾದ ಹೆಗಲ ಮೇಲೆ ಕಂಗೊಳಿಸುವ ಹೂಮಾಲೆ. ಶ್ರೀ ಲಕ್ಷ್ಮೀ



ಜಗಜ್ಜನನಿ ಬಯಿಸಿ ವರಿಸಿದ ಅವನ ಮುಖಾರವಿಂದವೊ? ಅನಂತ ಪೂರ್ಣಚಂದ್ರರ ಚೆಲುವನ್ನು ಮೀರಿ ನಿಂತ ಮೋರೆ. ಮಕರಕುಂಡಲದ ಮಣಿಕಾಂತಿಗೆ ಚೆಲುವುಗೊಂಡ ಕೆನ್ನೆ, ಮಾಟವಾದ ಹುಬ್ಬುಗಳು, ಎತ್ತರವಾದ ಮೂಗು, ತಾವರೆಯಂಥಹ ಬೊಗಸೆ ಗಂಗಳು;ಕೆಂಪಾದ ಚೆಂದುಟಿ, ಎಲ್ಲದರಿಂದ ಚೆಲುವುಗೊಂಡ ಆ ನನ್ನಪ್ಪನ ಭಗವಂತನ ವರ್ಣನಾರೂಪ, ಅಪ್ಪ ಮಾಡುತ್ತಿದ್ದ ಶ್ರೀ ವಿಷ್ಣುಸ್ತುತಿಯಲ್ಲಿ ಇವತ್ತು ಅವನ ಮುಂದೆ ಸಾಕಾರಗೊಂಡು ನಿಂತಂತಿದೆ. ನೋಡುತ್ತಿದ್ದರೂ, ಕಣ್ಣು ಮನಸ್ಸು ತುಂಬುತ್ತಲೇ ಇಲ್ಲವಲ್ಲ. ತನ್ನ ಹೃದಯದ ಮನಸ್ಸಿನ ಒರತೆ ಇಷ್ಟು ಆಳವಾದದ್ದೆ, ನೋಡುತ್ತಲೇ ಇರಬೇಕು ಅವನ ಮನೋಹರ ಮೂರ್ತಿಯನ್ನು, ತೃಪ್ತಿಯಾಗುವಷ್ಟು.

ಊಹುಂ, ತೃಪ್ತಿಯುಂಟೆ ಈ ಹಂಬಲಕ್ಕೆ?

ಹರಿಯನ್ನು ಕಂಡು ಹೊರಬಂದರೆ, ಕಣ್ಣಮುಂದೆ ಅದೇ ಮೂರ್ತಿ ತುಟಿಯಂಚಿನಲ್ಲಿ ಮುಗಳ್ನಗುತ್ತ ದರ್ಶನ ಮಾಡಿದವಂಗೆ ಧನ್ಯತೆಯ ಭಾವವನ್ನು ಕೊಡುತ್ತೆ. ಸಾರ್ಥಕವಾಯಿತು ಜನ್ಮ ಆ ನನ್ನಪ್ಪನನ್ನು ನೋಡಿ ಎನ್ನುವಷ್ಟು.

ಆದರೆ ವೇಂಕಣ್ಣನಿಗೆ? ಊಹುಂ. ದೇವಸ್ಥಾನದಿಂದ ಹೊರಬಂದು, ಯಾವದೋ ಕಲ್ಲಿನ ಮೆಟ್ಟಿಲುಗಳ ಮೇಲೆ ಕುಳಿತ. ಯಾಕೋ ಮನಸ್ಸು ಸ್ಥಿರತೆಗೆ ಬರುತ್ತಿಲ್ಲ. ತಾನು ನೋಡಿ ಬಂದ ಭಗವಂತನ ಮೂರ್ತಿ ಅವನ ಕಣ್ಮುಂದೆ ನಿಂತು ಕಾಡುತ್ತಿತ್ತು. ಅಲ್ಲ ಅದು ಬರೀ ಕಲ್ಲಿನ ಮೂರ್ತಿ ಇರಲಿಲ್ಲ. ಸಾಕ್ಷಾತ್ತಾಗಿ ನಿಂತ ಭಗವದ್‌ರೂಪ. ಅಂತಲೇ ಕಣ್ಣುಗಳಲ್ಲಿ ಅಷ್ಟು ತೇಜವಿದೆ. ಮುಖದಲ್ಲಿ ಯಾವತ್ತೂ ಮಾಸ ಮುಗಳ್ನಗೆ ಇದೆ. ಬ್ರಹ್ಮಾಂಡ ಕೋಟಿ ಜೀವಿಗಳನ್ನು ಪೊರೆಯುವ ಅವನು ಕಲ್ಲಿನ ಮೂರ್ತಿ ಹೇಗಾದಾನು? ಅವ್ವ ಹೇಳುತ್ತಿರಲಿಲ್ಲವೆ? ಎಂಬತ್ತನಾಲ್ಕು ಲಕ್ಷ ಜೀವರಾಶಿಗಳನ್ನು ತನ್ನಲ್ಲಿಟ್ಟುಕೊಂಡು ರಕ್ಷಿಸುತ್ತಾನೆ ಆ ಶ್ರೀ ಹರಿ ಎಂದು.

ಇಲ್ಲ ಅವನನ್ನು ಕಾಣಬೇಕು. ಅಲ್ಲಿಗೆ ಶಿಲಾರೂಪದಲ್ಲಲ್ಲ. ಚೈತನ್ಯ ರೂಪಿಯಾಗಿ, ದೇವರೇ ನಾನು ನಿನ್ನನ್ನು ಬಿಡುವುದಿಲ್ಲ. ಹೌದು, ನಿನ್ನ ಮುಂದೆ ನಿಂತಾಗ ನನಗನಿಸಿರಲಿಲ್ಲವೇ? ವೇಂಕಣ್ಣ ಬಾ ಮಗು, ನಿನಗಾಗಿ ಕಾಯುತ್ತಿದ್ದೇನೆ" ಎನ್ನುವಂತಿತ್ತಲ್ಲ. ನಿನ್ನ ಮುಖದ ನಗು. ಇಲ್ಲಾ. ನನ್ನ ಹಾಗೇ ಎಲ್ಲರಿಗೂ ಅನ್ನಿಸುತ್ತಿದೆಯೇ?

ದೇವರ ದರ್ಶನವಾಗಿ ಬಂದ ಮೇಲೆ ವೇಂಕಣ್ಣ, ತನ್ನ ತನವನ್ನು ಮರೆತಂತಿತ್ತು. ಎಲ್ಲೋ ಬೆಟ್ಟದ ಮೇಲೆ ಹೋಗಿ ಕೂಡುತ್ತಿದ್ದ. ಎನೋ ಧೇನಿಸುತ್ತಿದ್ದ. ನೀರಿನ ತೊರೆಯ ಹತ್ತಿರ ಹೋಗಿ ಮಲಗುತ್ತಿದ್ದ. ಹಾಳು ಕಲ್ಲುಮಂಟಪವೊಂದರ ಮೇಲೆ ಮಲಗಿ ಅನಂತ ಆಕಾಶ ನೋಡುತ್ತಿದ್ದ ರಾತ್ರಿ ಹೊತ್ತು ಆಕಾಶದಲ್ಲಿ ಸಾವಿರಾರು ನಕ್ಷತ್ರಗಳು ಮಿನುಗುತ್ತಿವೆ. ಆ ನಕ್ಷತ್ರಗಳಲ್ಲೂ ಅವನ ಅನಂತ ರೂಪವಿದೆ. ಇಲ್ಲಾ ನಕ್ಷತ್ರಗಳೇ ಅವನ ಕಣ್ಣುಗಳಾಗಿವೆಯೇ ಟೊಂಕದ ಮೇಲೆ ಕೈಇಟ್ಟುಕೊಂಡು ಒಂದು ಕೈಯನ್ನು ಭೂಮಂಡಲ ಕಡೆ ಚಾಚಿ ನಿಂತ ಅವನ ನಿಲುವಿನಲ್ಲಿ ಎಂಥಹ ದಿವ್ಯ ತೇಜವಿದೆ. ಅವನ ಭುವನ ಮನೋಹರ ರೂಪವನ್ನು ಕಣ್ತುಂಬಿಕೊಂಡರೂ, ಮನಸ್ಸು ತುಂಬುತ್ತಿಲ್ಲ. ಎನೋ ಅತೃಪ್ತಿತನ. ಪೂರ್ಣವಾಗಿ ಯಾಕೆ ಮನಸ್ಸಿನಲ್ಲಿ ನಿಲ್ಲುತ್ತಿಲ್ಲ ಅವನ ರೂಪ. ಇನ್ನು ನೋಡಬೇಕು ಕಣ್ತುಂಬಿಕೊಳ್ಳಬೇಕು ಎನ್ನುವ

ಈ ತಹ ತಹಿಕೆಯ ಹಿಂದೆ ಎನಿದೆ? ಆ ಅತೃಪ್ತಿತನ ಪೂರ್ಣವಾಗವುದು ಹೇಗೆ? ಮನಸ್ಸಿನ ವಿಪ್ಲವವನ್ನು ಈ ಹಂಬಲವನ್ನು ಪೂರ್ತಿಗೊಳಿಸುವುದು ಹೇಗೆ?

ಒಂದು ದಿನ ಛಪ್ಪರ ದೇವರ ಪಲ್ಲಕ್ಕಿ ತಿರುಗಿ ಊರಿಗೆ ಹೋಗುವ ದಿನವಿರಬಹುದು. ಇವನು ಗುಡಿಯ ಮುಂಭಾಗದ ಕಲ್ಲಿನ ಮೇಲೆ ಕೂತಿದ್ದ. ಒಳಗಿನಿಂದ ದೇವರ ದರ್ಶನ ಮುಗಿಸಿ ಶೀನಪ್ಪ ಪಂಚೆಯಿಂದ ಮುಖದ ಬೆವರು ಒರೆಸಿಕೊಂಡು ಹೊರಬಂದರು. ಇವನನ್ನು ನೋಡಿದರು. ಮತ್ತೆ ಹತ್ತಿರದಲ್ಲಿ ಕುಳಿತ ಇವನ ಹೆಗಲ ಮೇಲೆ ಕೈಯಿಟ್ಟರು.

"ಯಾಕಪ್ಪಾ, ಮುಖ ಸಣ್ಣ ಆಗೇದಲ್ಲಾ, ತಿರುಗಿ ಊರಿಗೆ ಹೊಂಟೇವಿ ಬರ್ತೀಯಿಲ್ಲೊ?"

"ಇಲ್ರಿ ಬರಂಗಿಲ್ಲ"

"ಯಾಕಪ್ಪಾ ಮತ್ತೆ ಯಾವಾಗಾ ಬರಾಂವಾ. ಒಬ್ಬಾತ್ನೆ ಇಲ್ಲಿದ್ದು ಎನು ಮಾಡ್ತಿ. ಮತ್ತೆ ಒಬ್ಬಾತ್ನೆ ತಿರುಗಿ ಬರೂದು ಭೀರಿ ಆಗ್ತದೆ".

"ಇಲ್ಲ ಶೀನಪ್ಪ ತಾತಾ ನಾನು ನಿಮಗ ಬರೂ ಮುಂದ ಹೇಳಿರಲಿಲ್ಲ, ಅವ್ವಾ ಅಪ್ಪನ್ನ ಹುಡಿಕ್ಕೊಂಡ ಹೋಂಟೇನಿ ಅಂತ ಈಗ ವೇಂಕಪ್ಪ ಮೂರ್ತಿ ನೋಡಿದಾಗಿಂದ ನನಗ ಅವನ ಅಪ್ಪಾ ಅವ್ವಾ ಅನಸ್ತದ. ಅವನ ಕರುಣಾ ಪಡಿಯೂ ತನಕ ನಾ ಬರಂಗಿಲ್ಲ ತಾತಾ. ಇನ್ಮ್ಯಾಲೆ ಇದೆ ನನ್ನ ನೆಲ. ಇಲ್ಲೆ ಬದುಕು, ಸಾವು ಎಲ್ಲ."

ಶೀನಪ್ಪ ಒಂದೆರಡು ಗಳಿಗೆ ಹುಳು ಹುಳು ಅವನ ಮುಖ ನೋಡಿದರು. ಇದೇನು ಹುಚ್ಚಾಟದ ಮನಸ್ಸೋ ಇಲ್ಲ ಪರಿಪೂರ್ಣ ಭಕ್ತಿಯ ಒಂದು ಸ್ವರೂಪ. ಎಲ್ಲಾ ಆ ಭಗವಂತನಿಗೆ ಗೊತ್ತು" ಎಂದುಕೊಂಡು ಅವನ ಭುಜ ಸವರಿ

"ಆತಪಾ ಇರೂ. ನಿನ್ನ ಮನಸ್ಸಿಗೆ ತೃಪ್ತಿಯಾಗುವಷ್ಟು ದಿವಸ ಇರು, ಮತ್ತೆ ನಾ ಯಾವಾಗಾರೇ ಬಂದಾಗ ನಿನ್ನ ಭೇಟಿಯಾಗ್ತೀನಿ. ದೇವರ ಅನುಗ್ರಹ ಆಗಲಿ ನಿನಗ" ಎಂದು ಅಲ್ಲಿಂದ ಎದ್ದು "ವೇಂಕಣ್ಣ, ನಿನ್ಗ ಬೇಕಾದ್ರ ಇಲ್ಲೇ ಧರ್ಮಛತ್ರ ಅದ. ನನ್ನ ಗುರುತಿನವ್ರು ಇದ್ದಾರೆ. ನನ್ನ ಹೆಸರು ಹೇಳಿ ಅಲ್ಲಿರು ಬೇಕಾರ. ನಾನು ಒಂದು ಮಾತು ಹೇಳ್ತೀನಿ" ಎಂದು ಅಲ್ಲಿಂದ ಮರೆಯಾದರು.

ಹೌದು ಶೀನಪ್ಪ ತಾತಾ ಹೇಳಿದಂತೆ ಆ ದೇವರ ಅನುಗ್ರಹವಾಗಬೇಕು ತನಗೆ. ಆ ಮೂರ್ತಿಯ ಪೂರ್ತಿ ಸ್ವರೂಪ ಸಾಕ್ಷಾತ್ಕಾರವಾಗಬೇಕು. ಮನಸ್ಸು ದೇಹ, ಕಣ್ಣು ಕಣ-ಕಣದಲ್ಲೂ ಅವನೇ ತುಂಬುವಂತೆ. ಅವನನ್ನು ಆರ್ತರವಾಗಿ ಕರೆಯಬೇಕು. ಮೊರೆ ಹೋಗಬೇಕು. ಹಂಬಲಿಸಿ ಕೇಳಬೇಕು.

ಕೂತರೆ, ನಿಂತರೆ, ನಡೆದಾಡಿದರೆ, ವೇಂಕಣ್ಣನಿಗೆ ಇದೆ ಧೇನಿಸುವಂತಾಯ್ತು. ದಿನವೂ ಹೋಗುತ್ತಿದ್ದ ದೇವಸ್ಥಾನಕ್ಕೆ, ಮನಸ್ಸು ತುಂಬುವಷ್ಟು ದೇವರ ಮೂರ್ತಿಯನ್ನು ನೋಡುತ್ತಿದ್ದ. ಹೊರಬರುತ್ತಿದ್ದ. ಆದರೂ ಮನಸ್ಸು ತಣಿಯುತ್ತಿರಲಿಲ್ಲ.

ಇಲ್ಲ ನನ್ನ ಮನಸ್ಸು ಬರೀ ದೇವರ ದರ್ಶನ ಭಾಗ್ಯ ಒಪ್ಪುತ್ತಿಲ್ಲ. ಇನ್ನೇನೋ ಬೇಕೆನ್ನುವ ಹಂಬಲಿಕೆ.



ದಿನಗಳು ಉರುಳುತ್ತಿದ್ದವು. ವೇಂಕಣ್ಣಾ, ಮನಸ್ಸಿಗೆ ಚಕ್ರ ಕಟ್ಟಿಕೊಂಡು ಓಡಾಡುತ್ತಿದ್ದ. ಮುಂಜಾನೆ ನಸುಕು ಹರಿಯುವ ಮೊದಲೇ ಹೋಗಬೇಕು. ಸ್ವಾಮಿ ಪುಷ್ಕರಣಿಯಲ್ಲಿ ಸ್ನಾನ ಮಾಡಿ ವರಾಹದೇವರ ದರ್ಶನ ಮಾಡಿ, ಸ್ವಾಮಿಯ ಮುಂದೆ ನಿಂತು ಪರಿತಪಿಸುವಂತೆ ಕೇಳುತ್ತಿದ್ದ.

"ಭಗವಂತಾ, ಯಾವತ್ತ ನಿನ್ನ ದಯಾದೃಷ್ಟಿ ನನ್ನ ಮ್ಯಾಲೆ ಬೀಳ್ತದ. ಕರುಣಾಳು ಸಾಮಾನ್ಯ ಮನುಷ್ಯನಾನು. ನಿನ್ನ ಎನಂತ ಕರೀಲಿ ಬೇಕಾದ್ದು ಇಷ್ಟೆ. ನನಗೆ ಯಾರಿಲ್ಲ. ಅಜ್ಞಾನಿಯಾಗಿ ಬೆಳೆದೀನಿ ಹೀನ ಬಾಳು ಬಾಳೀನಿ. ಇದಕ ಮುಕ್ತಿಕೊಡು ಒಂದು ಸಲ ನಿನ್ನ ದರ್ಶನದ ಭಾಗ್ಯ ಕೊಡಪ್ಪಾ" ಎನ್ನುತ್ತಿದ್ದ. ಅವನನ್ನು ಒಲಿಸಬೇಕೆಂಬ ಕೊರಗು ಒಳಗೊಳಗೆ ಅವನ ಅಂತರಂಗವನ್ನು ಕೊರೆಯುತ್ತಿತ್ತು. ದಿನದ ಹಗಲು-ಸಂಜೆ-ರಾತ್ರಿ ಅವನಿಗೆ ಅದೆ ಜಪವಾದಂತಾಯ್ತು.

ಬೇಡ ಊಟ, ಬೇಡ ನಿದ್ದೇ, ಬೇಡ ದಿನದ ಯಾವ ಜಂಜಾಟವೂ ಬೇಡ ಈ ಪರದೇಶಿಗೆ. ಅವನ ಕರುಣೆಯೊಂದೆ ಸಾಕು ಎನ್ನುವ ಹಂಬಲಿಕೆಯಲ್ಲಿ. ಕೆಲವು ದಿನ ಊಟ, ನಿದ್ದೆಯಿಲ್ಲದೆ ಕಳೆಯುತ್ತಿದ್ದ, ದೇಹ ಸೊರಗುತ್ತಿತ್ತು. ಮನಸ್ಸು ಪಕ್ವವಾಗುತ್ತಿತ್ತು, ದಿನಗಳು ಕಳೆಯುತ್ತಿದ್ದವು.

ಹಾಗಾದರೆ ಜೀವಿತದ ಒಂದೊಂದೆ ದಿನದ ಅವಧಿ ಮುಗಿಯುತ್ತಿದೆಯೇ? ಅವನ ಕರುಣೆ ನನಗೆ ಯಾವಾಗ ಸಿಕ್ಕೀತು ಅವ್ವ ಹೇಳುತ್ತಿರಲಿಲ್ಲವೇ. ಯಾರಿಲ್ಲದವರಿಗೆ ಅವನೇ ಸಂರಕ್ಷಕ ಎಂದು. ಅನಾಥ ಬಂಧು ಎಂದು ನಿನ್ನನ್ನು ನಂಬಿ ಬಂದಿದ್ದೇನೆ ಸ್ವಾಮಿ ನನ್ನ ಮೇಲೆ ದಯೆ ತೋರಿ. ನನ್ನನ್ನೇ ಒಬ್ಬ ಮನುಷ್ಯನನ್ನಾಗಿ ಮಾಡು. ನನ್ನ ಈ ಅಜ್ಞಾನದ ಕತ್ತಲನ್ನು ಹೊಡೆದೋಡಿಸು ಎನ್ನುತ್ತಿದ್ದ ಮನಸ್ಸಿನ ದೇಹದ ಯಾವ ಅರಿವಿಲ್ಲದೆ ವೇಂಕಣ್ಣ ಎಷ್ಟೋ ಹೊತ್ತು ಕಣ್ಣು ಮುಚ್ಚಿಕೊಂಡು ಕೂಡುತ್ತಿದ್ದ.

ದೇವರೇ, ಎಷ್ಟ ದಿವಸ ಎಷ್ಟು ವರ್ಷ ಹೀಗೆ ಅಂಧಕಾರದಲ್ಲಿ ಕಳೆಯಲಿ. ಇಂಥ ಬದುಕು ಯಾಕ್ಬೇಕು? ಈ ಜೀವನದ ಪರ್ಯಾವಸನಮಾಡಿಬಿಡಬೇಕು. ಈ ಜೀವ ಈ ಬದುಕು, ಈ ಜೀವಿತದ ಅವದಿ ತನಗೆ ಬೇಡ ಎನಿಸುವಷ್ಟು ಮನಸ್ಸು ಸ್ಥಿತ್ಯಂತರಗೊಳ್ಳುತ್ತಿತ್ತು.

ಯಾಕೊ ಆವತ್ತಿನ ಕತ್ತಲು ಕಳೆಯುವುದು ಕೂಡ ಕಷ್ಟವೇನಿಸುವಷ್ಟು ಅವನ ಮನಸ್ಸು ಭಾರವಾಗಿತ್ತು.

ಪುಷ್ಕರಣಿಯಲ್ಲಿ ಮತ್ತೆ ಬೆಳಗು, ಮತ್ತೆ ಅದೇ ದಿನಚರಿ, ಎಳಬೇಕು ಸ್ನಾನ ಮಾಡಬೇಕು. ಮಾಡಿದ ಈಗೀಗ, ಅಂತರಂಗವೇ ಅವನಿಗೆ ಕಣ್ಣಾಗುತ್ತಿತ್ತು. ಅಷ್ಟಮಟ್ಟಿಗೆ ಅವನ ಮನಸ್ಸು ಭಕ್ತಿಯ ಸುರಳಿಯೊಳಗೆ ಸೇರಿಕೊಂಡಿತ್ತು ಸ್ನಾನ ಸಂಧ್ಯಾವಂದನೆ, ಗಾಯಿತ್ರಿ ಜಪ ಮುಗಿಸಿ ಹರಿನಾಮವನ್ನು ಜಪಿಸುತ್ತ ದೇವಸ್ಥಾನಕ್ಕೆ ಒಂದಿಷ್ಟು ಪ್ರದಕ್ಷಿಣೆಗಳನ್ನು ಹಾಕಿದ. ದೇಹ ದಣಿಯುವಷ್ಟು ಶ್ರಮವಾಗಿ ದೇವರೇ ಇನ್ನೊಂದು ಹೆಜ್ಜೆಯನ್ನು ನಾನು ಎತ್ತಿಡಲಾರೆ ಎನ್ನುವಂತಾದಾಗ ದೇವರೆದುರು ಬಂದು ನಿಂತ "ದೇವರೇ ಇದಿಷ್ಟು ಬಿಟ್ಟು ನನಗೇನು ಗೊತ್ತಿಲ್ಲಪಾ. ಅನವರತ ನೀ ಕೊಟ್ಟ ಶಕ್ತಿ ಎಷ್ಟೇದ ಅಷ್ಟ ಸೇವಾ ಮಾಡೂದು, ನಿನ್ನ ನಾಮ ಸ್ಮರಣೆ ಮಾಡೂದು, ನೀ

ಬೇಕು ಅನ್ನು ಹಂಬಲೊಂದ ನನಗ. ವೇಂಕಪ್ಪ ಯಾವತ್ತ ನೀ ನನಗ ದರ್ಶನಾ ಕೊಡ್ತಿ. ಯಾವತ್ತ ಮುಂದಕ ಕರದು, “ಬಾ ನನ್ನ ಕಂದಾ” ಅಂತ ಅಂತಃಕರಣದಿಂದ ಆದರಸ್ತಿಯಪಾ, ನಮ್ಮವ್ವ ಹೇಳ್ತಿದ್ಲು. ಯಾರಿಲ್ಲದವ್ರಿಗೆ ದೇವರಿದ್ದಾನ ಬಾಳಾ” ಎಂದು ಇವತ್ತೆ ನನಗ ನನ್ನವರು ಅನ್ನುವವರು ಯಾರಿಲ್ಲ. ನೀನೆ ನನ್ನ ತಂದಿ ತಾಯಿ ಎಲ್ಲ.  ನಾ ಅಜ್ಞಾನಿ ಪ್ರಭು, ನಿನ್ನನ್ನ ಯಾವ ಶಬ್ದದಿಂದ ಕೊಂಡಾಡಬೇಕು, ಹೊಗಳಬೇಕು ಗೊತ್ತಿಲ್ಲ. ನನ್ನಂಥ ಮಖೀನನ್ನ, ಅಜ್ಞಾನಿನ್ನ ಮನ್ನಿಸು ದೇವರೇ, ನಿನ್ನ ಕರಣಾ ನನ್ನ ಮ್ಯಾಲೆ ತೋರು ನನಗೆ, ಗೊತ್ತಿದ್ದದು ಇಷ್ಟ ಭಗವಂತ, ನನ್ನ ಕೈಹಿಡಿದು ನಡೆಸು, ನೀನ ನನಗ ಎಲ್ಲ. ನನಗ ಇದ್ದದ್ದು ಒಂದೇ ಹಂಬಲ ನಿನ್ನ ದಯಾ, ನಿನ್ನ ಕರುಣಾ, ನಿನ್ನ ಪ್ರೀತಿ ಎನ್ನುತ್ತ ವೇಂಕಣ್ಣ ಆ ಹರಿಯ ದಿವ್ಯ ಪಾದಗಳನ್ನು ದಿಟ್ಟಿಸುತ್ತಲೇ ನಿಂತಿದ್ದ. ಅವನ ಪಾದಗಳೇ ಪುಣ್ಯ ಕ್ಷೇತ್ರದಂತಿದೆ. ನೋಡಿದಷ್ಟು ನೋಡುತ್ತಲೇ ಇರಬೇಕೆಂಬ ಅನಂತ ಹಂಬಲ. ಇನ್ನು ಅವನ ಮೂರ್ತಿ ? ಯಾವುದನ್ನು ಅವಲೋಕಿಸಲಿ ಯಾವುದನ್ನು ಬಿಡಲಿ? ಆ ಕಣ್ಣುಗಳೂ, ಸೂರ್ಯ – ಚಂದ್ರರು, ಅನಂತವಾಗಿ ನೆಲಸಿರುವ ಕಣ್ಣುಗಳಲ್ಲವೆ? ಆ ತೇಜಃಪುಂಜವಾದ ಬೆಳಕನ್ನು ಹಿಡಿದಿಡುವ ಸಾಹಸ ಯಾರಿಗಿದೆ? ಜಗತ್ತಿಗೆ ಬೆಳಕನ್ನು ನೀಡುವ ಕಣ್ಣುಗಳು ಅವು. ಆ ಮುಖ, ಆ ಮುಳ್ನಗು, ಭಗವಂತ ಎಂಥ ದಿವ್ಯರೂಪ ನಿನ್ನದು.

ಎಲ್ಲಿಯೋ ಒಂದು ಕಡೆ ಅವ್ವ ಕಾಣುತ್ತಿದ್ದಾಳೆ ಅಲ್ಲಿ ಎನು ಹೇಳುತ್ತಿದ್ದಾಳೆ “ಬೀಳು ಮಗನೇ ಆ ದಿವ್ಯಪಾದಕ್ಕೆ ಬೀಳು. ಅದು ನಿನ್ನ ಸಕಲ ಸೌಭಾಗ್ಯಕ್ಕೆ, ಮುಕ್ತಿಗೆ ಹಾದಿ ಎನ್ನುತ್ತಿದ್ದಾಳೆಯೆ? ತನ್ನ ಅಂತರಂಗದಲ್ಲಿ ಆ ದಿವ್ಯ ಮೂರ್ತಿ, ಪ್ರತಿಷ್ಠಾಪನಗೊಳ್ಳುತ್ತಿದೆ. ಎನಿದೆ ಆ ಕಣ್ಣುಗಳಲ್ಲಿ? ಆ ನಗುವಿನಲ್ಲಿ, ಆ ಮುಖಾರವಿಂದದಲ್ಲಿ, ಆ ಕಣ್ಣುಗಳ ಬೆಳಕೆ ಹಾಕಿದ ವಜ್ರದ ಕಿರೀಟಕ್ಕೆ ಬಂದಿದೆಯೋ ಹೇಗೆ?

ದೇವರೇ ವರ್ಣಿಸಲು ತನಗೆ ಶಬ್ದಗಳೇ ಸಿಗುತ್ತಿಲ್ಲವಲ್ಲ ಎನೆಂದು ವರ್ಣಿಸಲಿ ಪ್ರಭು. ನನಗೆ ಶಬ್ದಜ್ಞಾನವಿಲ್ಲ ವೇದಗಳಿಂದ ಸ್ತುತಿಸಬೇಕೆಂದರೆ, ವೇದ ಜ್ಞಾನವಿಲ್ಲ. ಅಕ್ಷರಗಳಿಂದ ನಿನ್ನನ್ನು ಅಕ್ಷಯವಾಗಿ ಸ್ತುತಿಸ ಬೇಕೆಂದರೆ ನೀನೇ ಅಕ್ಷಯ, ಅನಂತ ಅಂಥ ಅಕ್ಷರಗಳನ್ನು ಯಾರೂ ತನ್ನ ತಲೆಯಲ್ಲಿ ಬಿತ್ತಲಿಲ್ಲ.

ದೇವರೇ, ನೀನೇ ಎಲ್ಲ. ಅಕ್ಷರ, ವೇದ, ಶಾಸ್ತ್ರ, ಶಾಸ್ತ್ರಮೂಲ, ಪಾಂಡಿತ್ಯದ ಉಗಮ, ನಿಗಮ, ಆಕರ, ನೀನೇ ಎಲ್ಲ. ನನ್ನನ್ನು ಉದ್ಧಾರ ಮಾಡುವುದು ನಿನಗೆ ಸೇರಿದ್ದು ತಂದೆ. ಸಾಕು ನನಗೆ ಈ ಭವದ ಬಂಧನ ಈ ಹೀನಾಯವಾದ ಬದುಕು. ಕಂಗೆಟ್ಟು ನಿನ್ನ ಪಾದವೆ ಗತಿ ಎಂದು ಬಂದವನು ನಾನು. ಶರಣಾಗತ ವತ್ಸಲ ಎನ್ನುತ್ತಾರೆ, ನಿನ್ನನ್ನು ಎಲ್ಲ ಹೀನಾಯಗಳಿಂದ ತಪ್ಪಿಸಿಕೊಂಡು ನೀನೇ ಎಂದು ಬಂದವನಿಗೆ ಕೈಹಿಡಿದೆತ್ತಿ ಅಕ್ಕರೆ ತೋರಪ್ಪಾ. ತಂದೆ ತಾಯಿ ನೀನು. ಕಗ್ಗತ್ತಲಿನಲ್ಲಿ ಸುತ್ತಿ ಸುಳಿದಾಡಿ ದಾರಿ ಕಾಣದೆ ಬಂದಿದ್ದೇನೆ ಪ್ರಭೋ. ಬೆಳಕಿನ ಯಾವ ದಾರಿಯೂ ಗೊತ್ತಿಲ್ಲ. ಕಗ್ಗತ್ತಲಿನಲ್ಲಿದ್ದ ನನ್ನ ಆತ್ಮಜ್ಯೋತಿಯನ್ನು ಹೊತ್ತಿಸಲಬೇಕಾದವನು ನೀನು ಸ್ವಾಮಿ, ಹೇಳು ಯಾವ ರೀತಿಯಿಂದ ನಿನ್ನನ್ನು ಕೊಂಡಾಡಲಿ. ಮೊರೆ ಹೋಗಲಿ, ಹಂಬಲಿಸಿ ಕೂಗಲಿ.



ವೇಂಕಣ್ಣನ ಕಣ್ಣಿಂದ ನೀರಿನಧಾರೆ ಸುರಿಯುತ್ತಿದೆ. ಅವನು ತನ್ನಂತರಂಗದ ಹೋಯ್ದಾಟದೊಳಗೆ ಸುಳಿಯುತ್ತ, ತೇಲಾಡುತ್ತ ಅಖಂಡ ದೇಹ ನಿನ್ನದೇ ಸ್ವಾಮಿ. ಇವನನ್ನು ಉದ್ಧರಿಸಬೇಕಾದವನು ನೀನೇ ಎಂದು ಕಣ್ಣೀರು ಸುರಿಸುತ್ತ, ಹಾಗೆಯೇ ಹರಿಯ ಪಾದಗಳ ಮೇಲೆ ಹಣೆಯಿಟ್ಟ. ಗರ್ಭಗುಡಿಯಲ್ಲಿ ನೀರಸವಾದ ಮೌನ ಯಾರೂ ಇಲ್ಲ. ತಾನೇ ತಾನು ಹರಿಯ ಪಾದವೇ ಪಾದ. ಇದನ್ನು ಬಿಟ್ಟು ತನಗೆ ಪ್ರಪಂಚ ಇಲ್ಲ. ತನಗೆ ಬೇಕೂ ಇಲ್ಲ.

ಆ ಹರಿಯ ದಿವ್ಯ ಪಾದಗಳ ಸ್ಪರ್ಶ, ಮೈಯಲ್ಲೆಲ್ಲ ಯಾವದೊ ದಿವ್ಯ ಚೇತನ ತುಂಬಿದಂತೆ ಕರುಣೆಯಿಂದ ಹಂಬಲಿಸಿ ಕಣ್ಣೀರು ತುಂಬಿ ಬೇಡುತ್ತಲೇ ಇದ್ದಾನೆ, ವೇಂಕಣ್ಣ ದೇವರೆ ಇದೇ ಕ್ಷಣಾ ಇದೇ ಗಳಿಗೆ ನನ್ನ ಪ್ರಾಣಜ್ಯೋತಿಯನ್ನು ನಿನಗೆ ಅರ್ಪಿಸುತ್ತಿದ್ದೇನೆ. ನೀನೆ ನನ್ನವನೆಂದು ನಂಬಿದವನು ನಾನು. ನನಗೆ ಎನೂ ಬೇಡ, ಜಗತ್ತಿನ ಯಾವ ಸಕಲ ಸಂಪತ್ತು ಬೇಡ. ಈ ದಿವ್ಯಪಾದವೇ ಸಾಕು. ಈ ಜಗತ್ತಿನಲ್ಲಿ ನನಗೆ ನಿನ್ನು ಬಿಟ್ಟು ಯಾರಿಲ್ಲ ತಂದೆ, ಹತ್ತಿರ ಕರೆದು ಮೈದಡವವರಿಲ್ಲ. ಅನಾಥ ರಕ್ಷಕನೆಂದು ಬಿರುದು ಹೊತ್ತವನಲ್ಲವೆ ನೀನು? ನಾನು ಅನಾಥನಾಗೇ ಬಂದಿದ್ದೇನೆ. ರಕ್ಷಿಸು ನನ್ನನ್ನು. ಯಾರೂ ಇಲ್ಲದವರಿಗೆ ನೀನೇ ತಂದೆ ತಾಯಿ. ಬಂಧು ಬಳಗ ಎಂದು ಹೇಳುತ್ತಿದ್ದಳು. ನನ್ನವ್ವ ನನಗೆ ಗೊತ್ತಿದ್ದುದು ಇಷ್ಟೆ ಸ್ವಾಮಿ. ನನಗೆ ನೀನು ಬೇಕು. ನಿನ್ನ ಕರುಣೆ ಬೇಕು ನಿನ್ನಾಸರೆ ಬೇಕು ನಂಬಿ ಬಂದವರ ಕೈಹಿಡಿದು ನಡೆಸುವ ಆತ್ಮಜ್ಯೋತಿ ನೀನು.

ವೇಂಕಣ್ಣ ಹಲಬುತ್ತ, ಹಂಬಲಿಸುತ್ತ ಕಣ್ಣೀರು ಸುರಿಸುತ್ತ ಆ ಪಾದಗಳ ಸಾನಿಧ್ಯದಲ್ಲಿ ಲೀನವಾಗಿ ಹೋದ. ಬೇಡ ನನಗೆ ಈ ಪ್ರಾಣಜ್ಯೋತಿ ಬೇಡ. ಅರ್ಪಣೆ ಮಾಡುತ್ತಿದ್ದೇನೆ. ನಿನ್ನ ಪಾದಗಳಿಗೆ. ಬದುಕಿಸಿದರೆ ಜ್ಞಾನಿಯಾಗಿ ಮಾಡಿ ಉದ್ಧಾರ ಮಾಡು ನನ್ನನ್ನು. ಇಲ್ಲ, ಈ ಪಾದಕ್ಕ ನನ್ನನ್ನು ಸೇರಿಸಿಕೊ ಎಂದು ಅಳಲುತ್ತ ದುಃಖಿಸುತ್ತ ವೇಂಕಣ್ಣ ಆ ದಿವ್ಯಪಾದಗಳನ್ನು ಗಟ್ಟಿಯಾಗಿ ಹಿಡಿದು ಇಹದ ಪರಿವಿಲ್ಲದೆ ಕೂತುಬಿಟ್ಟಿದ್ದಾನೆ.

ಈ ಜಗತ್ತಿನ ಲೌಕಿಕದ ಯಾವ ಕಾಲದ ಪರಿವಿರಲಿಲ್ಲ ಅವನಿಗೆ. ಯಾವದೋ ಒಂದು ಛಾಯೆಯಲ್ಲಿ ಮಿಂದಂತೆ ಅನಿಸುತ್ತಿದೆ. ಎಲ್ಲಿಯೋ ಆಳ–ಪಾತಾಳದಲ್ಲಿ ಕತ್ತಲಿನಲ್ಲಿ ಈಜಿ ಹೋಗುತ್ತಿದ್ದೇನೆ. ಯಾರೋ ತನ್ನ ಕೈಹಿಡಿದು ಕರೆದೊಯ್ಯುತ್ತಿದ್ದಾರೆ. ಕತ್ತಲು ಸರಿಯುತ್ತ, ಸರಿಯುತ್ತ ಬೆಳಕಿನ ಕಿರಣಗಳು, ಸೂರ್ಯ ಪ್ರಕಾಶದಷ್ಟು ದಿವ್ಯತೇಜದಂತೆ ಮೂಡಿಬರುತ್ತಿವೆ. ತನಗೆ ಎಲ್ಲೋ ಎನೋ ಆಗುತ್ತಿದೆ. ಯಾರು ತನ್ನನ್ನು ಇಷ್ಟು ಅಂತಃಕರಣದಿಂದ ಕೈ ಹಿಡಿದು ಕರೆದುಕೊಂಡು ಹೋಗುವವರು ಎಷ್ಟು ಅನಂತ ಚೈತನ್ಯ ತುಂಬುತ್ತಿದೆ ತನ್ನ ದೇಹದಲ್ಲಿ ಅನಂತವಾದ ತೇಜ. ತೇಜಸ್ಸು, ಬೆಳಕು, ಕಣ್ಣು ಕುಕ್ಕುತ್ತಿವೆಯೆ? ಇಲ್ಲ ಕಣ್ಣು ಕುಕ್ಕಿಸುವ ಬೆಳಕಲ್ಲ. ಕಣ್ಣಿಗೆ ಹಿತವಾದ ಬೆಳಕು. ಆ ಅನಂತ ಅಗಾಧ ಬೆಳಕಿನಲ್ಲಿ ದಿವ್ಯವಾದ ರೂಪ, ವಿಶ್ವವೇ ಕಾಣುತ್ತಿದೆ ಆ ರೂಪದಲ್ಲಿ. ಆ ಆಕಾರದಲ್ಲಿ ಆ ತೇಜಃಪುಂಜವಾದ ಪ್ರಭಾವಲಯದಲ್ಲಿ ತನ್ನನ್ನು ಹಿಡಿದ ಕೈಗಳಲ್ಲಿ ಎಂಥಹ ಹಿತವಾದ ಬಂಧನವಿದೆ. ವೇಂಕಣ್ಣನಿಗೆ ಎಲ್ಲಿಯೋ ಹಗುರವಾಗಿ ತೇಲಿ ಹೋದಂತೆ. ಇಹದ ಪರಿವಿರಲಿಲ್ಲ. ಅಗಾಧವಾದ ಆ ಬೆಳಕಿನ ಹೊಂಡದಲ್ಲಿ ಮೀಯ್ಯುತ್ತಿದ್ದಾನೆ. ಅವನು ಯಾವದೋ ಎರಡು ಕೈಗಳು ಅವನ ತಲೆ ಸವರುತ್ತಿವೆ. ಬೆನ್ನು

ಸವರುತ್ತಿವೆ. "ಎಳು ಕಂದಾ, ಎಳಯ್ಯಾ ನೋಡು ನನ್ನ ಅನಂತ ರೂಪವನ್ನು ನೋಡು. ನೀನು ಅನಾಥನಲ್ಲಪ್ಪ. ಹದಿನಾಲ್ಕು ಲೋಕಕ್ಕೆ ಒಡೆಯನಾಗಿದ್ದ ನಾನು ನಿನ್ನವನೇ ಕಂದ. ಭಕ್ತರ ಭಕ್ತ ನಾನು ಅವರ ಅಡಿಯಾಳು. ನಿನ್ನಂಥ ಭಕ್ತರ ದಾಸನಾನು. ವೇಂಕಣ್ಣ ನೀನು ಅಜ್ಞಾನಿಯಲ್ಲಪ್ಪ. ಜ್ಞಾನದ ಉಗಮ. ಆ ಉಗಮಕ್ಕೆ ಮೂಲವಾಗಬೇಕು ನೀನು, ಜ್ಞಾನದ ಭಂಡಾರವಾಗಬೇಕು ಮಗು"

ಯಾರದು ಹೇಳುತ್ತಿದ್ದುದು. ಎಂಥಹ ಅನನ್ಯವಾದ ಧ್ವನಿಯದು. ಆ ಪ್ರೀತಿಯ ಸೆಳೆತಕ್ಕೆ ವೇಂಕಣ್ಣ ಕರಗಿಹೋಗುತ್ತಿದ್ದಾನೆ. ಎಲ್ಲಿಯೋ ಆನಂದದ ಸೆಲೆಯಲ್ಲಿ ಸೆಳೆದುಕೊಂಡು ಹೋಗುತ್ತಿದ್ದಾನೆ. ಎರಡು ಕಣ್ಣಿನಿಂದ ಭಕ್ತಿಯ ಜೀವರಸ ಹರಿಯುತ್ತಿದೆ.

"ಭಗವಂತ ನೀನು ನನ್ನೊಡೆಯ. ಎಷ್ಟು ಹಂಬಲಿಸಿದ್ದೆ ನಿನಗಾಗಿ. ಎಷ್ಟು ಕರುಣಾಳು ನೀನು ದೇವರೇ, ನನ್ನನ್ನು ಜ್ಞಾನದ ಭಂಡಾರ, ಜ್ಞಾನದ ಉಗಮವೆಂದು ಹೇಳಿದೆಯಾ ತಂದೆ. ಎಲ್ಲಿಯ ಜ್ಞಾನ ನನ್ನಪ್ಪ. . ಅಜ್ಞಾನಿ ಎಂದು ತುಚ್ಛಕರಿಸಿತ್ತು ಜನ ನನ್ನನ್ನು. ಎಷ್ಟು ಹೀನಾಯವಾಗಿ ಬದುಕಿದೆ. ವಿದ್ಯೆಯ ಎರಡಕ್ಷರ ಕಾಣದೆ, ಈಗ ನೀನು ನನ್ನನ್ನು ಜ್ಞಾನದ ಉಗಮವೆಂದೆಯಲ್ಲಾ ಸ್ವಾಮಿ ಎಲ್ಲಿದೆ ಆ ಜ್ಞಾನ ಭಂಡಾರ. ನನಗೆ ಹುಡುಕಲು ಶಕ್ಯವೇ? ದಯಪಾಲಿಸು, ನನ್ನಪ್ಪ" ವೇಂಕಣ್ಣ ಕಣ್ಣೀರು ಸುರಿಸುತ್ತ ಅಪ್ಪಿಕೊಂಡೆ ಇದ್ದಾನೆ ಆ ಪಾದಗಳನ್ನು ಎಂಥಹ ದಯಾಮಯಿ ಅವನು.

ವೆಂಕಪ್ಪ ತಲೆ ಸವರಿ ಹೇಳುತ್ತಿದ್ದಾನೆ. "ವೇಂಕಣ್ಣ ಎಳು ಕಂದ ಎಳು. ಈ ಕಣ್ಣೀರು ನಿನಗೆ ಶೋಭೆಯಲ್ಲ. ಮಗು ಈ ಲೋಕದ ಕಣ್ಣೀರನ್ನು ಒರೆಸಬೇಕಾದವನು ನೀನು. ನನ್ನ ಅನಂತ ಕೋಟಿ ನಾಮಗಳನ್ನು ಹೊಗಳಿ ಹಾಡಬೇಕಾದವನು ನೀನು. "ಎಳು ಎಳು ನನ್ನ ಕಂದಾ" ಎಂದು ಅಂತಃಕರಣದಿಂದ ಅವನ ತಲೆ ಸವರಿ ಎಬ್ಬಿಸಿದ ಶ್ರೀಹರಿ. ವೇಂಕಣ್ಣ ತಲೆ ಎತ್ತಿದ. ದೃಷ್ಟಿಯ ತುಂಬ ಅವನ ಮೋಹಕ ರೂಪ. . ವಿಶ್ವವೇ ತುಂಬಿದೆ ಅ ರೂಪದಲ್ಲಿ ಕಣ್ಣೆದುರಿಗೆ ಅವನ ಭವ್ಯರೂಪದ ಹೊರತು ಇನ್ನೇನು ಕಾಣುತ್ತಿಲ್ಲ. ತನ್ನ ಸೊತ್ತಲೂ ಯಾರೂ ಇಲ್ಲ. ತಾನೇ ತಾನು ಆ ಶ್ರೀ ಹರಿಯ ಮನಸೆಳೆಯುವ ವದನಾರವಿಂದ. ಅವನ ಕಣ್ಣುಗಳ ತೇಜದಂತೆ ಉರಿಯುತ್ತಿರುವ ನಂದಾದೀಪ. ದೀಪದ ಬೆಳಕು ಆ ಮೂರ್ತಿಯ ಮೇಲೆ ಬಿದ್ದು, ಆ ಜ್ಯೋತಿಯ ಪ್ರತಿರೂಪವೆ ಅವನೋ ಇಲ್ಲ. ಅವನೊಳಗಿದ್ದ ಜ್ಯೋತಿ ಸುತ್ತಲೆಲ್ಲ ಪಸರಿಸಿ, ತೇಜಃಪುಂಜವನ್ನಾಗಿ ಮಾಡಿದೆಯೋ? ನೋಡುತ್ತಲೇ ಇದ್ದಾನೆ ವೇಂಕಣ್ಣ. ಆ ಹರಿಯ ಪಾದವನ್ನೇ ನೋಡುತ್ತಿವೆ. ಅವನ ಕಣ್ಣುಗಳು.

ಎಂಥಹ ದಿವ್ಯಪಾದ ಗಂಗೆಯನ್ನು ಸೃಷ್ಟಿಸಿ ಜಗತ್ತನ್ನೇ ತನ್ನ ಪಾದ ಸ್ಪರ್ಶದಿಂದ ಪಾವನಗೊಳಿಸಿದ. ಪಾದಗಳಲ್ಲವೆ? ಸುಂದರವಾದ ನೀಲ ಬಣ್ಣದ ಕಾಲುಬೆರಳುಗಳಲ್ಲಿ ಹವಳದ ಬಣ್ಣದ ಉಂಗುಷ್ಠಗಳು ನಿಧಾನವಾಗಿ ಚಲಿಸಿದಂತೆ ಉಟ್ಟ ಪಟ್ಟೆ ಪೀತಾಂಬರ ನವುರಾಗಿ ಅಲುಗಿದಂತೆ.

ಹೊಳೆಯುವ ಉಡುದಾರ ಗೆಜ್ಜೆ ಆ ನನ್ನಪ್ಪನ ಪಟ್ಟೆ ಪೀತಾಂಬರವನ್ನು ಕಟ್ಟಿದಂತೆ ಎಷ್ಟು ಶೋಭಾಯಮಾನವಾಗಿದೆ.



ಶಂಖ ಚಕ್ರ ಹಿಡಿದ ಕೈಗಳು, ಕೊರಳು ತುಂಬ ಕೌಸ್ತುಭ ಮಣಿ. ಮಾಣಿಕ್ಯ ರತ್ನದ ಮಾಲೆಗಳು. ಹೊಳೆಯುವ ಕರ್ಣಕುಂಡಲ, ಜಗಜ್ಜನನಿಯನ್ನೇ ಅಲಂಕರಿಸಿಕೊಂಡ ವಿಶಾಲವಾದ ಎದೆ.

ಆ ಮುಖವೊ?

ಎರಡು ಕಣ್ಣುಗಳಿಂದ ನೋಡಿದರೂ ಸಾಲದು. ಕಣ್ಣುಗಳಿರಬೇಕಿತ್ತು ದೇಹದ ತುಂಬ. ಅವನ ತುಟಿಯ ತುಂಬ ಲಾಸ್ಯಮಾಡುವ ಮೋಹಕ ಮುಗುಳು ನಗೆ. ವಾತ್ಸಲ್ಯದ ನಗೆ. ಅನನ್ಯ ಅಂತಃಕರಣದ ತಾಯ್ತನದ ನಗೆ.

ಜಗತ್ತನ್ನೇ ರಕ್ಷಿಸುವ ಜಗದ್ರಕ್ಷಕನಲ್ಲವೆ ಅವನು?

ಸೂರ್ಯ ಚಂದ್ರರಿಗೆ ನೆಲೆವೀಡಾದ ಆ ಕಣ್ಣುಗಳು, ದಿವ್ಯವಾದ ಮೂರ್ತಿಯ ಸುತ್ತಲೂ ತೇಜಃಪುಂಜವಾದ ಪ್ರಭಾವಲಯ ಸುತ್ತುತ್ತಿರುವಂತೆ ಒಂದು ಗಳಿಗೆ ಆ ಕಣ್ಣುಗಳ ತೇಜ ತನ್ನೆಡೆಗೆ ತಿರುಗಿದಂತೆ ಎನಿಸಿತು. ಅನಂತತೆಗೆ ಸಾಕಾರವಾದ ಆ ಕೈಗಳು ತನ್ನ ತಲೆಯನ್ನು ಅನನ್ಯ ಅಂತಃಕರಣದಿಂದ ಸವರಿದಂತೆ ಅನಿಸುತ್ತಿದೆ.

ಅಂತೆ-ಕಂತೆಗಳ ಲೆಕ್ಕವಿರಲಿಲ್ಲ ಅಲ್ಲಿ. ಅನುಭವದ ಭಂಡಾರ ಅದು. ಆ ತನ್ನಪ್ಪನ ಸ್ಪರ್ಶದ ಅನುಭವ, ತಾನು ನಿಂತಿದ್ದು, ಪಾದಕ್ಕೆ ತಲೆಯಿಟ್ಟಿದ್ದು ಕಲ್ಲು ಮೂರ್ತಿಗಲ್ಲ, ನಿಂತಿದ್ದಾನೆ ಸಾಕ್ಷಾತ್ ಆ ಜಗಜ್ಜನಿಯಾ ಮಕ. ಈಗ ತನ್ನೆಡೆಗೆ ಅನನ್ಯ ಅಂತಃಕರಣದಿಂದ ನೊಡುತ್ತಿದ್ದಾನೆ. ಎಂಥಹ ದಯಾಪೂರಿತವಾದ ಕರುಣೆ ತುಂಬಿದ ಕಣ್ಣುಗಳು ಎಷ್ಟು ಅಂತಃಕರಣದಿಂದ ವೇಂಕಣ್ಣನ ನಾಲಿಗೆಯನ್ನೇ ನಿಧಾನವಾಗಿ ಹೊರಗೆಳೆದು ಕಕ್ಕುಲತೆಯಿಂದ ತನ್ನ ಬೆರಳಿನಿಂದ ಅಕ್ಷರಗಳನ್ನು ಬಿತ್ತಿದವು. "ಪ್ರಸನ್ವೇಂಕಟ" ಅಷ್ಟೆ ಆ ದಿವ್ಯತೇಜ ಅದೇ ನಗೆಯೋಂದಿಗೆ ತನ್ನ ತಾನೇ ಅಡಗಿತು. ವೇಂಕಣ್ಣ ಎಚ್ಚೆತ್ತ "ಎಲ್ಲಿ ಆ ತೇಜ? ಇಲ್ಲ. ಅಡಗುವಂಥಹದೆ ಆ ತೇಜ ಅದು, ಅದೇ ಶ್ರೀನಿವಾಸನೆಂಬ ಆ ಮೂರ್ತಿಯಲ್ಲಿ ಹಾಸುಹೊಕ್ಕಾಗಿ ನಿಂತಿದೆ ಅಷ್ಟೆ. ವೇಂಕಣ್ಣನಿಗೆ ತಿಳುವು ಬಂದಂತಾಯ್ತು. ಕಣ್ಣು ಬಿಟ್ಟು, ತನ್ನ ಕಣ್ಣನಿಂದ ನೀರು ಹರಿಯುತ್ತಿದೆ. ಗಾಬರಿ ವಿಸ್ಮಯಗಳಿಂದ ಸುತ್ತಲೂ ನೋಡಿದ್ದು, ಯಾರಿಲ್ಲ ಇಲ್ಲಿ, ತಾನು ಇಲ್ಲಿಯವರೆಗೆ? ಎಂಥಹ ದಿವ್ಯ ಸಾನಿಧ್ಯದಲ್ಲಿದ್ದೆ. ಇದೇನಿದು ತನ್ನ ದೇಹದಲ್ಲಿ ಎಂಥಹದೋ ಚೈತನ್ಯ ತುಂಬುತ್ತಿದೆಯಲ್ಲ. ನಾಲಿಗೆಯಲ್ಲಿ ಶ್ರೀ ಹರಿಯೇ ಬಿತ್ತಿದ್ದ ಬಿಜಾಕ್ಷರ. ಇದು ನಿನ್ನ ಅಂಕಿತ ನಾಮ ಎಂದಿದ್ದನೆ? "ಪ್ರಸನ್ವೇಂಕಟ" ಎಂದು. ಅಂದರೆ ವೇಂಕಟನೇ ಪ್ರಸನ್ನನಾಗಿನಿಂತನೆ? ಎಂಥ ಕರುಣಾಳು ಹರಿ ನೀನು ಎನ್ನುತ್ತಿರುವ ವೇಂಕಣ್ಣ ಕಣ್ಣಿಂದ ಧಾರಾಕಾರದಂತೆ ಸುರಿಯುವ ನೀರು ಎದ್ದುನಿಂತ ಕೈಮುಗಿದ.

ನಾಲಿಗೆಯಲ್ಲಿ ಬಿತ್ತಿದ್ದ ಬಿಜಾಕ್ಷರ ಲಕ್ಷ-ಲಕ್ಷವಾಗಿ ಅನಂತವಾಗಿ ಅಕ್ಷಯವಾಗಿ ತಲೆಯಲ್ಲಿ ಮೊಳಕೆಯೊಡೆದು ವೇಂಕಣ್ಣನ ಬಾಯಿಂದ ಬರುತ್ತಿವೆಯೆ? ಅವನ ಹೃದಯ ತಂಬೂರಿ ಮೀಟುತ್ತದೆಯೆ? ಹೆಜ್ಜೆಗಳು ತಾಳ ಹಾಕುತ್ತಿವೇಯೆ? ವೇಂಕಣ್ಣ ಮೂರ್ತಿಯನ್ನು ದಿಟ್ಟಿಸುತ್ತಲೇ ಇದ್ದ. ಕಾರುಣ್ಯದ ಧ್ವನಿಯಿಂದ ಅವನ ಬಾಯಿಂದ ಹೊರ ಹೊಮ್ಮುತ್ತಿದೆ. ಮೊದಲ ಪದಗಳು ಶಬ್ದಗಳು ಎನೆಂದು?

"ತಪ್ಪು ನೋಡದೆ ಬಂದೆಯಾ ನನ್ನೆಯಾ ತಂದೆ
ಅಪ್ಪ ತಿರುವೇಂಗಳೇಶನೇ ನಿರ್ದೋಶನೆ
ಅಪಾದ ಮೌಳಿ ಎನ್ನೊಳು ಆಘ ಬಹಳ
ಶ್ರೀಪತಿ ಕ್ಷಮಿಸಿ ಕಾಯ್ದಿಯಾ ಉದಧಿಧ್ಯೇಯ ॥

ಹೌದು ನನ್ನಪ್ಪ ನನ್ನ ಯಾವ ತಪ್ಪುಗಳನ್ನು ನೀನು ಗಣನೆಗೆ ತಾರದೆ ಬರೀ ನನ್ನ ಅಂತರಂಗದ ಆರ್ತಧ್ವನಿ ಕೇಳಿ ಬಂದೆಯಲ್ಲಪ್ಪ ವೇಂಕಟಪತಿ.

"ಜಗದಘ ಹರನೆಂಬುದು ನಿನ್ನಯ ಬಿರುದು
ತ್ರಿಗುಣಾತೀತನೆ ರಾಮನೆ ಗುಣಧಾಮನೆ
ಇನ್ನೇನ ಕಲುಷವಾರಿಸೋ ಭವತಾರಿಸೋ
ಪ್ರಸನ್ವೆಂಕಟ ರಮಣಾ ಭಯಶಮನಾ"

ಶ್ರೀ ಹರಿ ನನ್ನ ಭವಗಳನ್ನು ಪರಿಹರಿಸಿ, ಕಲುಷಗಳನ್ನೆಲ್ಲ ಕಳೆದು, ನನ್ನಂಥ ಪಾಮರರನ್ನು ಉದ್ಧರಿಸಿ ಪುನೀತನನ್ನಾಗಿ ಮಾಡಿದೆ ತಂದೆ ಎನ್ನುತ್ತ ಹಾಡುತ್ತ ಮೈಮರೆತು ಕುಣಿಯುತ್ತಿದ್ದಾರೆ. ಕಾಲು, ನೆಲಕ್ಕೆ ತಾಕಿದರೂ ತಾಕಲಾರದಷ್ಟು ಭಕ್ತಿ ಎಂಬ ತನ್ಮಯತೆಯಲ್ಲಿ ಮತ್ತೆ ಮತ್ತೆ ಆ ಹರಿಯ ರೂಪವನ್ನು ನೆನೆ ನೆನೆದು ಆನಂದ ಪರವಶತೆಯಲ್ಲಿ ಕಣ್ಣೀರು ಸುರಿಸುತ್ತಿದ್ದಾರೆ. ಗಳಿಗೆಗಳು, ಗಂಟೆಗಳು ಕಳೆಯುತ್ತಿವೆ. ಈ ಗಳಿಗೆಗಳನ್ನು ಯಾರಾದರೂ ಹಿಡಿದಿಡಬಾರದೆ, ತನ್ನಪ್ಪನ ಮುಂದೆ ತಾನು ಹೀಗೆ ಭಕ್ತಿ ಪರವಶತೆಯಲ್ಲಿ ಕುಣಿದಾಡುತ್ತಲೇ ಇರಬೇಕು ಎನಿಸುತ್ತಿದೆಯಲ್ಲ.

ಅವರನ್ನು ಲೌಕಿಕಕ್ಕೆ ಎಳೆಯತರಲೋ ಎಂಬಂತೆ. ಅಲ್ಲಿಯ ಅರ್ಚಕರು ಬಂದರು. ಅವರ ಭಕ್ತಿ ಪ್ರವಾಹದ ಅಲೆಯಲ್ಲಿ ತೇಲಿಹೋಗುತ್ತಿದ್ದ ಅವರನ್ನು ನೋಡಿದರು. ಇದೇನು ಹುಚ್ಚು ಗರ್ಭಗುಡಿಯಲ್ಲಿ, ತಾವಿಲ್ಲದ ವೇಳೆಯಲ್ಲಿ ಬಂದು ಹೀಗೆ ಲೌಕಿಕದ ಅರಿವಿಲ್ಲದೆ ಪರಮಾತ್ಮನ ಮುಂದೆ ತಾಳ ಹಾಕಿ ಕುಣಿಯುವುದು. ಈತನ ಮನಸ್ಸಿಗೆ ಏನಾದರೂ ಭ್ರಮೆಯಾವರಿಸಿದೆಯೋ?

ಈ ಪ್ರಪಂಚದ ಪರಿವೆಯಿಲ್ಲದೆ ಹಾಡುತ್ತ ಕುಣಿಯುತ್ತ ಇರುವ ಅವರನ್ನು ಹಿಡಿದು ನಿಲ್ಲಿಸಿದರು.

"ಸ್ವಾಮಿ ನಿಲ್ಲಿ ಯಾರು ನೀವು ಗರ್ಭಗುಡಿಯಲ್ಲಿ ಹೀಗೆ ದೇವರ ಮುಂದೆ ಹಾಡುವುದು, ಕುಣಿಯುವುದು, ಏನಿದು? ಇದರಿಂದ ಬೇರೆಯವರಿಗೆ ತೊಂದರೆಯಾಗುತ್ತದೆ. ದಯವಿಟ್ಟು ಹೊರಗೆ ಹೋಗಿ ಬೇಕಾದಷ್ಟು ಬಯಲಿದೆ ಅಲ್ಲಿ ತೋರಿಸಿರಿ ನಿಮ್ಮ ಭಕ್ತಿಯ ಪರಾಕಾಷ್ಠತೆಯನ್ನು" ಎಂದು ಅವರು ಕೈಹಿಡಿದು ಹೊರಗೆ ತಂದುಬಿಟ್ಟರು.

ಕಣ್ಣುಬಿಟ್ಟು ನೊಡುತ್ತಾರೆ ವೇಂಕಣ್ಣ, ತಾನು ಗುಡಿಯ ಹೊರಬಾಗಿಲಲ್ಲಿ ಕೂತಿದ್ದೇನೆ. ಹಾಗಾದರೆ ತಾನು ಇಷ್ಟು ಹೊತ್ತು ಎಲ್ಲಿದ್ದೆ? ತನ್ನ ಮುಂದಿದ್ದ ಆ ಸ್ವಾಮಿಯ ಮೂರ್ತಿ. ತಾನು ತೆಪ್ಪನೆ ಮಲಗಿದ್ದೆ ಅವನ ದಿವ್ಯಪಾದಗಳನ್ನು ಹಿಡಿದು ಸ್ವಾಮಿ ನನ್ನನ್ನು ಉದ್ಧಾರ



ಮಾಡದಿದ್ದರೆ ಪ್ರಾಣ ಕೊಡುತ್ತೇನೆ ಆ ದಿವ್ಯ ಪಾದದ ಸನ್ನಿಧಿಗೆ ಎಂದಿದ್ದೆ. ತನ್ನ ಮೇಲೆ ಕರುಣಿಸಿ ತನ್ನಪ್ಪ, ತನ್ನನ್ನು ಹಿಡಿದೆತ್ತಿ ತನ್ನ ನಾಲಿಗೆ ಹೊರ ತೆಗೆದು ಬರೆಯಲಿಲ್ಲವೆ?

"ಪ್ರಸನ್ವೇಂಕಟ"

ಎಂದು ಹಾಗಾದರೆ ಅದು ಭ್ರಮೆಯಲ್ಲ. ಸತ್ಯ. ನಿತ್ಯ ಸತ್ಯ ಈ ಸೂರ್ಯಪ್ರಕಾಶದಷ್ಟು ಸತ್ಯ. ಸತ್ಯವಂತಲೇ ತನ್ನ ಬಾಯಿಂದ ಅವನ ಕೀರ್ತನೆ ಎಷ್ಟು ನಿರಾಳವಾಗಿ ಬಂತು. ಹೇಳಿರಲಿಲ್ಲವೆ? ಆ ಶ್ರೀ ಹರಿ "ವೇಂಕಣ್ಣ ನೀನು ಜ್ಞಾನದ ಭಂಡಾರವಾಗಬೇಕು, ನೀನು ಅಜ್ಞಾನಿಯಲ್ಲ. ಜ್ಞಾನದ ಉಗಮವೆಂದು, ಹಾಗಾದರೆ ತನ್ನ ನಾಲಿಗೆ ಮೇಲೆ ನಿಂತ ಶ್ರೀ ಹರಿ ಜ್ಞಾನದ ಬಿಜಾಕ್ಷರ ಬರೆದು ಅದು ಲಕ್ಷ ಲಕ್ಷವಾಗಿ ತನ್ನ ಕೀರ್ತನೆಗಳು. ನಿನ್ನ ಬಾಯಿಂದ ಬರಲಿ ಎಂದನಲ್ಲ. ಸತ್ಯ ಇದೇ ಸತ್ಯ. ಭ್ರಮೆಯಾಗಿರಲಿಲ್ಲ. ಅದು ಭ್ರಮೆಯಲ್ಲ ಒಂದು ಸತ್ಯದ ಸರಳೀಕೃತ ರೂಪವಾಗಿ, ಕೂತೆ ಇದ್ದರು ವೇಂಕಣ್ಣ. ಅವರ ಬಾಯಿಂದ ನಿರ್ಗಳವಾಗಿ ಬರುತ್ತಿತ್ತು. ಹರಿಯ ನಾಮಕೀರ್ತನೆ ಅವರ ಹಾಡುಗಳನ್ನು ಕೇಳುತ್ತ ಕೇಳುತ್ತ ಸುತ್ತಲೂ ಸೇರತೊಡಗಿದರು ಭಕ್ತಿಯ ಪರವಶತೆಯಲ್ಲಿ ಅವರು ಹೆಜ್ಜೆ ಹಾಕುತ್ತ ಕುಣಿಯುತ್ತಿದ್ದಾರೆ. ಜನ ತಾವು ಅವರೊಡನೆ ಹೆಜ್ಜೆ ಹಾಕುತ್ತ ಅವರ ಪಾದಗಳಿಗೆ ನಮಿಸುತ್ತಿದ್ದಾರೆ.

"ಎಂಥ ಅಗಾಧವಾದ ಕೀರ್ತನೆ ನಿಮ್ಮದು ಸ್ವಾಮಿ ಧನ್ಯರಾದಿರಿ ಶ್ರೀಹರಿಯ ಒಲುಮೆ ನಿಮ್ಮ ಮೇಲೆ ಅಗಾಧವಾಗಿದೆ. ಪ್ರಸನ್ವೇಂಕಟ ನಾಮಾಂಕಿತವೇ ನಿಮ್ಮದು. ಪ್ರಸನ್ವೇಂಕಟದಾಸರೆಂದು ಪ್ರಸಿದ್ಧರಾಗುತ್ತೀರಿ ಎಂದರು ಹಿರಿಯ ವೃದ್ಧರೊಬ್ಬರು. ಸ್ವತಃ ಶ್ರೀ ಶ್ರೀನಿವಾಸನೆ ನುಡಿಸಿರಬೇಕು ಅವರ ಬಾಯಿಂದ.

"ಪ್ರಸನ್ವೇಂಕಟದಾಸ" ಎಂಥಹ ಅಮೋಘ ಅರ್ಥವಿದೆ ಆನಾಮದಲ್ಲಿ. ಆ ನಾಮದಲ್ಲಿ ತಾನು ಒಂದಾಗಿ ಹರಿಯದಾಸನಾಗಬೇಕು, ತನ್ನ ಹಿಂದಿನ ದಿನಗಳ ಭವ ಕಳೆಯಿತು. ತನ್ನ ಮೆಲೆ ದಯೆ ತೋರಿ ತನ್ನ ಅಜ್ಞಾನವನ್ನು ಕಳೆದ ಆ ವೇಂಕಟಪತಿ. ತಾನೇ ತಾಯಿಯಾಗಿ, ತಂದೆಯಾಗಿ ನಿಂತ, ತಾನಿನ್ನೂ ಅನಾಥನಲ್ಲ. ಪರದೇಶಿಯಲ್ಲ. ಸರ್ವಸಾಮರ್ಥ್ಯನಾದ ಹರಿಯೇ ಇವತ್ತು ನನ್ನ ಕೈಹಿಡಿದ. ತನ್ನ ಭವಬಂಧನಗಳೆಲ್ಲ ಇನ್ನು ಕಳೆದುಹೋಯ್ತು.

"ಅವ್ವಾ ನೋಡಿದೇನವ್ವ, ನೀನು ಹೇಳಿದ ಮಾತು ನಿತ್ಯ ಸತ್ಯ ಆತು. ತಾಯಿ. ನೀನು ಯಾವಾಗ್ಲೂ ಹೇಳ್ತಿದ್ಯಲ್ಲ. ವೇಂಕಣ್ಣ ಯಾರಿಲ್ಲದವ್ರಿಗೆ ಆ ಭಗವಂತ ಇದ್ದಾನ ಅಂತ ಎಂಥ ಸತ್ಯದ ಹಾದಿ ತೋರಿಸಿ ನಿನ್ನ ಮಗನ್ನ ಇಲ್ಲಿಗೆ ತಂದು ಬಿಟ್ಟಿಯವ್ವಾ. ನನ್ನ ಮುಂದಿನ ಉದ್ಧಾರಕ್ಕ ನೀ ಅಂಥಾ ಅಪಾರ ವಿಶ್ವಾಸಾನ ನನ್ನಲ್ಲೇ ತುಂಬಿದಿ ಅವ್ವಾ ನಿನ್ನ ಮಾತು, ನಂಬಿಕೆ, ಭರವಸೆ. ಬರೇ ಮಾತಾಗಿರಲಿಲ್ಲ ಈ ಅಜ್ಞಾನಿನ್ನ ಜನ್ಮ–ಜನ್ಮಾಂತರಕ್ಕೂ ಉದ್ಧರಿಸೋ ಅಮೃತಸಿದ್ಧಿಯಾಗಿತ್ತು ಇವತ್ತು. ಆ ಶ್ರೀಹರಿಯೊಳಗ ನೀನೂ ಸುದ್ದೆ. ಕಾಣಸಿದಿ ಅವ್ವಾ. ಇವತ್ತ ಅವನೇ ನನಗ ಅವ್ವ ಅಪ್ಪ ಬಂಧು ಬಳಗ ಎಲ್ಲಾ ಆಗಿ ಕಾಣಿಸಿದ, ತಾಯಿ ಇವತ್ತ ಅವನಿಂದ ನನ್ನ ಉದ್ಧಾರ ಆಯಿತು. ಅದಕ್ಕ ನೀ ಸುದೇ ಕಾರಣ ಆಗಿದ್ದಿ" ಎಂದು ದಾಸರು ನಿಂತಲ್ಲೆ ಆಕಾಶಕ್ಕೆ ಮುಖಮಾಡಿ ನಾಕುದಿಕ್ಕಿಗೆ ಕೈಮುಗಿದರು. ಹೊತ್ತು ಮುಳುಗುತ್ತ ಬಂತು. ದೇವಸ್ಥಾನದ ಸುತ್ತ, ಸುತ್ತುತ್ತಿದ್ದ ಜನ ಸಮೂಹ ಮೇಲೆ ಅನಂತವಾದ ಆಕಾಶ. ಇದೀಗ ಸುರುವಾದ

ಚಂದಿರನ ಬೆಳಕು ನಾಕು ದಿಕ್ಕಿಗೆ ತನ್ನದೇ ಆದ ಬೆಳಕಿನಿಂದ ಕಂಗೊಳಿಸುತ್ತಿದ್ದ. ಗುಡಿಯ ಗೋಪುರ ಎಲ್ಲದರಲ್ಲೂ ಅವನೇ ಅವನಾಗಿ ಗೋಚರಿಸುತ್ತಿದ್ದ ಅವರ ಕಣ್ಣಿಗೆ ಇಲ್ಲ. ಇಲ್ಲ ಅವನಿಲ್ಲದೆ ಈ ಜಗತ್ತಿಲ್ಲ ಚರಾಚರ ಅಣು–ತೃಣಗಳಲ್ಲೂ ತುಂಬಿದೆ ಅವನ ರೂಪ ಅವನ ಚೇತನ. ಎದೆ ತುಂಬಿದ ಆನಂದದೊಡನೆ ದಾಸರು ದೊಡ್ಡದಾದ ಪೌಳಿಯ ಸುತ್ತ ಅಡ್ಡಾಡಿದರು. ಒಂದು ಗಳಿಗೆಯೂ ಆ ಭಗವಂತನನ್ನು, ತನ್ನಪ್ಪನನ್ನು ಬಿಟ್ಟಿರಲಾರೆ ಎಂಬ ಮನಸ್ಥಿತಿಯಲ್ಲಿದ್ದರು ಅವರು. ಆದರೆ ವಸ್ತುಸ್ಥಿತಿಯಂತೆ ಬದುಕು ನಡೆಯಬೇಕಲ್ಲ? ಹಗಲು ಹನ್ನೆರಡು ತಾಸು. ಅವನ ಮುಂದೆ ಕೂಡಲು ಬಿಡುವರೆ ಅರ್ಚಕರು.

ಇಲ್ಲ ಅವನು ಗುಡಿಯಲ್ಲಿ ಅಷ್ಟೆ ಅಲ್ಲ. ತನ್ನೆದೆಯಲ್ಲಿ ಇದ್ದಾನೆ. ತನ್ನ ಅಂತರಂಗದ ಕಣ್ಣಿಗೆ ಯಾವಾಗಲೂ ಕಾಣಿಸುತ್ತಾನೆ. ತಾನು ಸದಾ ಅವನನ್ನು ನೋಡುತ್ತಿರಬೇಕು. ಅವನನ್ನೇ ಕೊಂಡಾಡುತ್ತಿರಬೇಕು. ಅವನ ನಾಮವನ್ನೇ ಹಾಡಿ ಹೊಗಳುತ್ತಿರಬೇಕು. ಅವನನ್ನೇ ಭಜಿಸುತ್ತಿರಬೇಕು. ಆತ್ಮದೊಳಗೆ ಆತ್ಮವಾಗಿ ಬೆರೆತ ಪರಮಾತ್ಮ ತನ್ನಂತರಂಗದ ಚಕ್ಷುಗಳನ್ನು ತೆಗೆದು ತನ್ನನ್ನು ಧನ್ಯನಾಗಿ ಮಾಡಿದವು.

ಹಗಲು–ರಾತ್ರಿ, ರಾತ್ರಿ–ಹಗಲು ಕಳೆದವು. ದಿನಗಳು ಒಂದರ ಮೇಲೊಂದು ಉರುಳಿ ಕಾಲಿಗೆ ಚಕ್ರ ಕಟ್ಟಿಕೊಂಡು ತಾನು ಓಡುತ್ತಿದ್ದೇನೆ ಎಂದು ಓಡುತ್ತಿತ್ತು.

ದಾಸರ ದಿನಚರಿ ಹತ್ತು ಹನ್ನೆರಡು ರೀತಿಯಲ್ಲಿ ನಡೆದೇ ಇತ್ತು. ದಿನಕರ ಹುಟ್ಟುವ ಮೊದಲೇ ಎಳುತ್ತಿದ್ದರು. ಸ್ವಾಮಿ ಪುಷ್ಕರಣಿಯಲ್ಲಿ ಸ್ನಾನ, ನೀರಿನಲ್ಲೆ ತೃಪ್ತಿಯಾವುವವರೆಗೂ ನಿಂತು, ಸೂರ್ಯನಿಗೆ ಅರ್ಘ್ಯ ಬಿಟ್ಟು, ದಡದ ಮೇಲೆ ಕುಳಿತು ಸಂಧ್ಯಾನ, ಜಪ–ತಪ, ಧ್ಯಾನ ಕಣ್ಮುಚ್ಚಿ ಅಂತರಂಗದ ಒಳಗೆ ಒಳಗೆ ಹೋಗುತ್ತಾ ಆತ್ಮದ ಕಣ್ಣು ತೆರೆಯುತ್ತಿತ್ತು. ಸುತ್ತಲಿನ ಇಹವನ್ನೇ ಮರೆತು ಗಾಳಿಗಿಂತ ಹಗುರಾಗಿ ತೇಲುತ್ತ ತೇಲುತ್ತ ಯಾವದೋ ಒಂದು ಬೆಳಕಿನ ಕಣ ಒಳಗೆ ಪ್ರವೇಶಿಸುತ್ತ, ಅದು ತನ್ನ ಆರಾಧ್ಯದೇವನ ರೂಪ ಪಡೆಯುತ್ತ

"ಹರೇ ಶ್ರೀನಿವಾಸ"

ಅದರಲ್ಲಿ ತಾನು ಲೀನವಾಗಿ, ಬ್ರಹ್ಮಾನಂದದ ಜೀವರಸ ದೇಹದ ತುಂಬ ಹರಿದು ಪರಮಾತ್ಮ ಎನು ನಿನ್ನ ಅಗಾಧ ಲೀಲೆ. ಕಣ್ಣಿಗೆ ನಿರಾಕಾರವಾಗಿರುವ ನೀನು ಬ್ರಹ್ಮಾಂಡದೊಳಗಿದ್ದು, ಜಗತ್ತಿನ ಜೀವರಾಶಿಗಳನ್ನು ಸೃಷ್ಟಿಸಿ, ಎಲ್ಲದಕ್ಕೂ ಜೀವ ತುಂಬಿ, ಚೇತನ ತುಂಬಿ, ಎಲ್ಲ ಜೀವಿಗಳಲ್ಲೂ ನೀನೇ ಸಂಚರಿಸುತ್ತಾ ಎಲ್ಲರಲ್ಲೂ ನೀನೇ ಬಿಂಬಿಸುತ್ತ, ಇರುವ ನಿನ್ನನ್ನು ಕಾಣಲು ಕೂಡ ಎಷ್ಟು ಭವ ಬಂಧನಗಳನ್ನು ದಾಟಿ ಬರಬೇಕು. ನೀನೇ ಇರುವ ಜೀವಿಗಳಲ್ಲೂ ಕೂಡ ಎಷ್ಟು ಭಿನ್ನತೆಯನ್ನು ಸೃಷ್ಟಿಸಿ, ಎಂಥ ಮಾಯದ ಆಟ ಆಡಿಸುತ್ತಿ

ದಾಸರು ತಮ್ಮೊಳಗೆ ಪರಮಾತ್ಮನನ್ನು ಪರಮಾತ್ಮನಲ್ಲಿ ತನ್ನನ್ನು ಕಾಣುತ್ತ ಧನ್ಯತಾ ಭಾವ ಪಡೆಯುತ್ತಿದ್ದರು. ತಮ್ಮ ಅನ್ಹೈಕಗಳನ್ನು ಮುಗಿಸಿ, ದೇವಸ್ಥಾನಕ್ಕೆ ಬಂದು ಗರ್ಭಗುಡಿಯಲ್ಲಿ ದೇವರ ಎದುರು ನಿಂತು ಅನನ್ಯವಾಗಿ ಅವನನ್ನು ಚಿಂತಿಸುತ್ತ ಮೂರ್ತಿಯನ್ನು ಕಣ್ತುಂಬಿಸಿಕೊಳ್ಳುತ್ತಿದ್ದರು. ಅವನ ಕಣ್ಣುಗಳು. ಆ ಮುಗಳ್ನಗೆ ಒಂದು ಗಳಿಗೆ ಮನಸ್ಸಿಗೆ ದಿಗ್ಭ್ರಮೆಯಾವರಿಸುತ್ತಿತ್ತು. "ನೀಗತಿ ಕೃಷ್ಣಾ" ಎಂದು ಅವ ಪಾದಕ್ಕೆ ಹಣೆ ಇಡುತ್ತಿದ್ದರು.



ತನ್ನನ್ನು ಎತ್ತಿ ಆಧರಿಸಿದ ಕೈಗಳಲ್ಲವೆ ಇವು? ಆತನ ಅಜ್ಞಾನ ಹೊಡೆದೋಡಿಸಿ ಜ್ಞಾನದ ಬೆಳಕನ್ನು ಹೊತ್ತಿ ತನ್ನ ನಾಲಿಗೆ ಹೊರಗೆಳೆದು, ಅಕ್ಷರ ಬೀಜ ಬಿತ್ತಿದ್ದ ಕೈಗಳಲ್ಲವೆ ಇವು, ತನಗಾದ ಅನುಭವ ಈಗಲೂ ತನ್ನಲ್ಲಿ ವಿಸ್ಮಯ ಉಂಟು ಮಾಡುತ್ತಿದೆ. ಆದರೆ ಆ ವಿಸ್ಮಯ ವಾಸ್ತವತೆಗೆ ದೂರವಾಗಿಲ್ಲ ಎನ್ನುವುದು ನಿತ್ಯ ಸತ್ಯ ಎನಿಸುತ್ತಿತ್ತು.

ಕೆಲವು ದಿನಗಳ ಹಿಂದಷ್ಟೆ ನಿನ್ನನ್ನು ಹಾಡಿ ಹೊಗಳಲು. ನಿನ್ನನ್ನು ಸ್ತುತಿಸಲು ನನಗೆ ಶಬ್ದಜ್ಞಾನವಿಲ್ಲ ಭಗವಂತ ಎಂದು ಪರಿತಪಿಸಿದ್ದೆ. ಆದರೆ ಇಂದು ನಾನಾ ರೀತಿಯಾಗಿ ಹಾಡಲು ಶಕ್ತಿ ಕೊಟ್ಟವನು ನೀನಲ್ಲವೇ ಪ್ರಭು ಎಂದು ಮನದುಂಬಿ ನಿಲ್ಲುತ್ತಿದ್ದರು. ನಾನಾ ರೀತಿಯಾಗಿ ಹಾಡುತ್ತಿದ್ದರು. ನೆರೆದ ಜನ ಆಶ್ಚರ್ಯ ರೀತಿಯಲ್ಲಿ ಅವರ ಕವಿತ್ವ, ಭಕ್ತಿ, ಹಾಡುಗಾರಿಕೆ ಜನರ ಮನಸ್ಸನ್ನು ಕೂಡ ತಟ್ಟಿ, ಭಕ್ತಿಯ ಭಾವವನ್ನು ಸ್ವೀಕರಿಸುತ್ತಿದ್ದವು.

ಒಂದು ಬೆಳಗಿನ ಮಾತಿರಬಹುದು. ಎಂದಿನಂತೆ ವೇಂಕಣ್ಣ ತಮ್ಮ ಸ್ನಾನ ಸಂಧ್ಯಾನಗಳನ್ನು ಮುಗಿಸಿ ದೇವಸ್ಥನಕ್ಕೆ ಹೋಗಿ ದೇವರೆದುರು ನಿಂತು, ಭಗವಂತನೆದುರು ನಿಂತರೆ ಮನಸ್ಸಿಗೆ ತೃಪ್ತಿಯಾಗುವದುಂಟೆ. ಇನ್ನೂ ನೋಡಬೇಕೆಂಬಾಸೆ, ವೇಂಕಣ್ಣ ಅರ್ಧನಿಮಿಲಿತ ನೇತ್ರದಿಂದ ಧ್ಯಾನಸ್ಥರಾದಂತೆ ದೇವರೆದುರು ಧ್ಯಾನದಲ್ಲಿದ್ದಂತೆ ನಿಂತಿದ್ದರು.

"ಸ್ವಾಮಿ"

". . ."

ಒಂದು ಗಳಿಗೆ ಬಿಟ್ಟು ಮತ್ತೆ ಕರೆದರು ಅರ್ಚಕರು.

"ಸ್ವಾಮಿ ತಮ್ಮನ್ನು ನಾನು ಕರೆದದ್ದು"

"ವೇಂಕಣ್ಣ ಕಣ್ಣು ತೆಗೆದರು. "ಸುಮಾರು ದಿನಗಳಿಂದ ತಾವಿಲ್ಲಿ ಬರುತ್ತಿದ್ದೀರಿ. ಶ್ರೀ ಹರಿಯ ದರ್ಶನಕ್ಕಾಗಿ ಹಂಬಲಿಸುತ್ತಿದ್ದೀರಿ, ಆತನ ಅನುಗ್ರಹವಾಗಿದೆ ಎಂದು ಕಾಣುತ್ತೆ"

ವೇಂಕಣ್ಣ ಮಾತನಾಡಲಾರದ ಅರ್ಚಕರನ್ನೇ ಕುತೂಹಲ ವಿಸ್ಮಯದಿಂದ ನೋಡುತ್ತಿದ್ದರು.

"ಸ್ವಾಮಿ ತಮ್ಮಲ್ಲಿ ಒಂದು ಅರಿಕೆ ಉಂಟು"

"ಹೇಳಿ, ತಾವು ದೊಡ್ಡವರು"

"ಶಾಂತಂ ಪಾಪಂ. . .ದೊಡ್ಡವರು ನಾವಲ್ಲ ಸ್ವಾಮಿ ತಾವು. ಸ್ವಾಮಿಯ ಒಂದು ಅಪ್ಪಣೆಯಾಗಿದೆ. ಅದು ನಡೆಸಿಕೊಡುವುದು ನಮ್ಮ ಧರ್ಮವೊಂದೆ ಅಲ್ಲ. ನಮ್ಮಪುಣ್ಯ ಮಧ್ಯಾಹ್ನದ ಉತ್ಸವದ ಸಮಯದಲ್ಲಿ ತಾವು ಕಲ್ಯಾಣ ಮಂಟಪದ ಹತ್ತಿರ ಬರಬೇಕು. ಸ್ವಾಮಿ ನಿಮಗಾಗಿ ಕರುಣಿಸಿದುದನ್ನು ತಮಗೆ ಒಪ್ಪಿಸುತ್ತೇನೆ ಎಂದರು ಮತ್ತೆ "ಆವತ್ತು, ಪ್ರಭುವಿನ ಮುಂದೆ ನಿಂತು ಹಾಡುತ್ತೆ ಭಾವ ಭಕ್ತಿ ಪರವಶರಾಗಿ ನಿಂತಿದ್ದೀರಿ. ನಾನದನ್ನು ಭ್ರಮೆ ಎಂದುಕೊಂಡು ತಮ್ಮನ್ನು ಹೊರಕ್ಕೆ ಕಳಿಸಿದೆ. ಪ್ರಭು ನಿಮ್ಮ ಮೇಲೆ ಇಷ್ಟೊಂದು ಅನುಗ್ರಹ ಮಾಡಿದ್ದಾನೆಂದು ನನ್ನಂಥ ಪಾಮರನಿಗೇನು ಗೊತ್ತು ಸ್ವಾಮಿ. ದಯವಿಟ್ಟು ಅವತ್ತಿನ ಅಪರಾಧಕ್ಕೆ ಕ್ಷಮಿಸಬೇಕು" ಎಂದರು.

ಎನನ್ನುತ್ತಾರೆ ವೇಂಕಣ್ಣ, "ಸ್ವಾಮಿ, ನೀವು ದೊಡ್ಡವ್ರು, ನಮ್ಮಪ್ಪ ಶ್ರೀ ಹರಿಯನ್ನು ಮುಟ್ಟಿ ಪೂಜಿಸುವ ಭಾಗ್ಯ ನಿಮ್ಮದು. ನಿವು ಪಾಮರರು ಹೇಗಾಗುತ್ತೀರಿ? ಅದು ನಿಮ್ಮ ಅನಂತ ಜನ್ಮದ ಪುಣ್ಯ ಆಯ್ತು. ಆ ನಮ್ಮಪ್ಪ ಎನು ಅಪ್ಪಣೆ ಕೊಟ್ಟಿದ್ದಾನೋ ನನಗೆ ಗೊತ್ತಿಲ್ಲ. ನಿಮ್ಮ ಮಾತಿನಂತೆ ಮಧ್ಯಾಹ್ನ ಉತ್ಸವ ಪೂಜೆಯ ವೇಳೆಗೆ ಮಂಟಪಕ್ಕೆ ಬರುತ್ತೇನೆ ಸ್ವಾಮಿ" ಎಂದು ವೇಂಕಣ್ಣ ಕಣ್ತುಂಬ ಶ್ರೀ ಹರಿಯ ಮೂರ್ತಿಯನ್ನು ತುಂಬಿಕೊಳ್ಳುತ್ತ ನಿಂತರು. ಅದು ಬಿಟ್ಟರೆ ತನಗೆ ಆಯುಷ್ಯದಲ್ಲಿ ಬೇರೆ ಆಶೆ ಇಲ್ಲವೆಂಬಂತೆ.

ಮಧ್ಯಾಹ್ನವಾಗಿರಬೇಕು. ಶ್ರೀನಿವಾಸ ದೇವರ ಕಲ್ಯಾಣ ಉತ್ಸವದ ಸಮಯ. ದಿನದ ಇಪ್ಪತ್ನಾಲ್ಕು ಗಂಟೆ ಅವನ ಉತ್ಸವದ ಸಡಗರವೇ, ವೇಂಕಣ್ಣ ಪೂಜೆಯ ಮಂಟಪಕ್ಕೆ ಬಂದರು. ಉತ್ಸವಕ್ಕಾಗಿ ಭಕ್ತಾದಿಗಳು ಸೇರಿದ್ದಾರೆ. ಅಲಂಕರಿಸಿದ್ದ ಮೂರ್ತಿಗಳನ್ನು ಮಂಟಪದಲ್ಲಿಟ್ಟಿದ್ದಾರೆ. ವೇಂಕಣ್ಣ ಭಕ್ತಿಭಾವದಿಂದ ಕೈಮುಗಿದುಕೊಂಡು ನಿಂತರು. ಅರ್ಚಕರು ಒಂದು ಗಳಿಗೆ ಇವರನ್ನು ನೋಡಿ ಕೈ ಮುಗಿದು, ಪೂಜೆಗೆ ಸುರು ಮಾಡಿದರು. ದೇವರ ನಾಮಾವಳಿಗಳನ್ನು ಹೇಳುತ್ತ ದೇವರನ್ನು ಅರ್ಚನೆ, ಮಂಗಳಾರತಿ ಮಾಡಿ, ಎಲ್ಲರಿಗೂ ಪ್ರಸಾದ ವಿನಿಯೋಗ ಮಾಡುವ ಮೊದಲು ಅರ್ಚಕರು ವೇಂಕಣ್ಣನನ್ನು ಮುಂದೆ ಕರೆದರು. "ಸ್ವಾಮಿ ಹಿಗೆ ದಯಮಾಡಿಸಿ" ಎನೋ ಎಂತೋ ಯಾತಕ್ಕೆ ಕರೆದರು ? ಇದೇನು ಶ್ರೀ ಹರಿಯಲೀಲೆ ಎನ್ನುತ್ತ, ವೇಂಕಣ್ಣ ಕೈಮುಗಿದುಕೊಂಡು ಮುಂದೆ ಬಂದು ನಿಂತರು. ಅರ್ಚಕರು "ಹರೇ ಶ್ರೀನಿವಾಸ" ಎನ್ನುತ್ತ ದೇವರ ಮಂಟಪದ ಮುಂದಿದ್ದ ಒಂದು ಬಟ್ಟೆಯ ಗಂಟು ಹಾಗೂ ಒಂದು ತಂಬೂರಿಯನ್ನು ತಂದು ದಾಸರ ಮುಂದಿಟ್ಟು.

"ಸ್ವಾಮಿ, ಮಹಾನುಭಾವರು ನೀವು. ನಿನ್ನೆ ರಾತ್ರಿ ಸ್ವಪ್ನದಲ್ಲಿ ನೆನೆಸಿಕೊಂಡರೆ ನನಗೆ ರೋಮಾಂಚನವಾಗುತ್ತಿದೆ, ಸ್ವಾಮಿ ಸ್ವಪ್ನದಲ್ಲಿ ಬ್ರಾಹ್ಮಣ ವೇಷದಲ್ಲಿ ಬಂದು ನಿಮ್ಮನ್ನು ತೋರಿ ಹೇಳಿದರು. "ನೋಡಯ್ಯ ನೀನು ಬೆಳಿಗ್ಗೆ ಎದ್ದು ದೇವಸ್ಥಾನಕ್ಕೆ ಹೋದರೆ ಗರ್ಭಗುಡಿಯಲ್ಲಿ ಒಂದು ಗಂಟು ಇದೆ, ನೋಡು ಇವನು ನನ್ನ ಭಕ್ತ, ಭಕ್ತರನ್ನು ಕಾಪಾಡುವದು ನನ್ನ ಹೊಣೆ. ಈಗ ಇವನಿಗೆ ನಾನು ಅಂದೆ ಅನುಗ್ರಹಮಾಡಿ ಇವನ ನಾಲಿಗೆ ಮೇಲೆ 'ಪ್ರಸನ್ವೇಂಕಟ' ಎಂದು ನಾನೇ ಅಂಕಿತ ಕೊಟ್ಟಿದ್ದೇನೆ. ಇವತ್ತು ಈ ಗಂಟನ್ನು ಅವನಿಗೆ ಕೊಟ್ಟು ದೇವಸ್ಥಾನದ ವತಿಯಿಂದ ಒಂದು ತಂಬೂರಿ ಕೊಟ್ಟು ದಾಸದೀಕ್ಷೆ ಕೊಟ್ಟಿದ್ದೇನೆಂದು ಹೇಳಿ ತಲಪಿಸಿ. ಇಂದಿನಿಂದ ಅವನು ಪ್ರಸನ್ವೇಂಕಟದಾಸ ಎಂದು ಹೇಳಿದರು ಸ್ವಾಮಿ. ಆವತ್ತು ನೀವು ಹಾಡಿ ಕುಣಿಯುವುದನ್ನು ನೋಡಿದ್ದು ನನಗೆ ಜ್ಞಾಪಕವಿದೆ. ನೀವು ಧನ್ಯರು ಪುಣ್ಯವಂತರು. ಸ್ವತಃ ಹರಿಯೇ ನಿಮಗೆ ಅಂಕಿತ ಕೊಟ್ಟು ದಾಸದೀಕ್ಷೆ ಕೊಟ್ಟು ಅನುಗ್ರಹಿಸಿದ್ದಾರೆ. ಇದನ್ನು ನಿಮಗೆ ತಲಪಿಸುವುದು ಕೂಡ ನಮ್ಮ ಪುಣ್ಯ. ಇಕೊ ಕೊಳ್ಳಿ, ಆ ಗಂಟಿನಲ್ಲಿ ಎನಿದೆ, ನೋಡಿ ಬಿಡಿ" ಎಂದು ಅರ್ಚಕರು. ಅದನ್ನು ಅವರ ಮುಂದಿಟ್ಟರು. ವೇಂಕಣ್ಣ ಅದರ ಮುಂದೆ ಕುಳಿತು, ಭಕ್ತಿಯಿಂದ ಅದನ್ನು ಕಣ್ಣಿಗೊತ್ತುಕೊಂಡು,

"ಸ್ವಾಮಿ, ಎನು ನಿನ್ನ ಲೀಲೆ" ಎಂದು ಗಂಟನ್ನು ಬಿಚ್ಚಿ ನೋಡುತ್ತಾರೆ. ಅದರಲ್ಲಿ, ದೇವತಾವಿಗ್ರಹಗಳು. ಶ್ರೀದೇವಿ, ಭೂದೇವಿ ಮತ್ತು ಶ್ರೀ ವೇಂಕಟೇಶನ ವಿಗ್ರಹ



ತಾಳ : ಗೋಪಾಲ ಬುಟ್ಟಿ

ಧನ್ಯನಾದೆ ಪ್ರಭು, ಎನ್ನುತ್ತ ಕಣ್ಣೀರಧಾರೆ ಹರಿಯಿತು.

ಕೂಡಿದ ಭಕ್ತಿ ವೃಂದ, ಗೋವಿಂದ, ಗೋವಿಂದ, ಎನ್ನುತ್ತ, ಜೈ ಜೈಕಾರ ಮಾಡುತ್ತ,

"ಸ್ವಾಮಿ, ಇಂದಿನಿಂದ ಸ್ವಾಮಿ ಅನುಗ್ರಹ ಪಡೆದು ಅವನಿಂದಲೇ ಅಂಕಿತ ಪಡೆದು, ದಾಸರಾದವರು "ಶ್ರೀ ಪ್ರಸನ್ವೇಂಕಟ ದಾಸರು, ಶ್ರೀ ಪ್ರಸನ್ವೇಂಕಟದಾಸರು" ಎಂದು ಬಂದು ಬಂದು ಅವರ ಕಾಲಿಗೆ ನಮಸ್ಕರಿಸುತ್ತಿದ್ದರು.

"ಎಂಥಹ ಪುಣ್ಯವಂತರು ಸ್ವಾಮಿ. ನೀವು ಆ ನಮ್ಮಪ್ಪನ ದರ್ಶನ ಪಡೆಯುವುದೇ ಒಂದು ಸೌಭಾಗ್ಯ ಅಂಥದರಲ್ಲ. ಅವನೇ ನಿಮ್ಮ ನಾಲಿಗೆ ಮೇಲೆ ಬೀಜಾಕ್ಷರ ಬರೆದು, ಅಂಕಿತ ಕೊಟ್ಟನಲ್ಲ. ಧನ್ಯ, ಧನ್ಯ, ಎನ್ನುತ್ತ ಜನ ಹರ್ಷೋದ್ಗಾರದಿಂದ ಗೋವಿಂದ ಗೋವಿಂದ" ಎನ್ನುತ್ತಾ ಜೈ ಜೈಕಾರ ಹಾಕಿದರು.

ಒಬ್ಬೊಬ್ಬರಾಗಿ ಜನ ಪೂಜೆ ಮುಗಿಸಿಕೊಂಡು ಪ್ರಸಾದ ತೆಗೆದುಕೊಂಡು ಖಾಲಿಯಾದರು. ಅರ್ಚಕರು, ಪೂಜಾ ಸಾಮಗ್ರಿಗಳನ್ನು ಎತ್ತಿಕೊಂಡು

"ಸ್ವಾಮಿ ದೇವರ ದರ್ಶನಕ್ಕೆ ತಾವು ಯಾವಾಗಲೂ ಬರಬಹುದು, ಯಾವ ಕಟ್ಟುಪಾಡು ಇಲ್ಲ" ಎಂದು ಹೊರಟುಹೋದರು.

ಕುಳಿತೇ ಇದ್ದಾರೆ, ಪ್ರಸನ್ವೇಂಕಟದಾಸರು.

ಕಣ್ಣಿನಿಂದ ಧಾರಕಾರ ನೀರಿಳಿಯುತ್ತಿದೆ. ಭಕ್ತಿಯ ಆನಂದದ ಕಣ್ಣೀರು "ಸ್ವಾಮಿ ಎಂಥ ದಯಾಮಯಿಯೋ ನೀನು ಎಷ್ಟು ಕರುಣಾನಪಾ ನನ್ನ ಮ್ಯಾಲೆ ನಿಂದು ನಾಯಾರು? ಯಾವದೊ ಒಂದು ಸಣ್ಣ ಊರಾಗ ದನಾ ಕಾಯ್ಕೊಂಡು ಇದ್ದಾಂವಾ. ಸ್ವಾಮಿ ಅಕ್ಷರ ಜ್ಞಾನ ಇರಲಿಲ್ಲ ನನಗೆ. ಎಂಥಾ ಹೀನಾಯ ಸ್ಥಿತಿಯೊಳಗೆ ಇದ್ದೆ. ನನ್ನಪ್ಪ ನಿನ್ನ ನಂಬಿ ಬಂದೆ. ನನ್ನ ಹತ್ರ ಇದ್ದದ್ದು ಭಕ್ತಿಯೊಂದೆ ತಂದೆ. ನನ್ನ ಹಂಬಲ, ಆರ್ತರವ ನಿನ್ನ ಕಿಂವಿಗೆ ಮುಟ್ಟಿದೆ. ಅಕ್ಷರದ ಅಕ್ಷಯ ಭಂಡಾರ ಹಾಕಿ ಬಿಟ್ಟೆಲ್ಲಪ್ಪ ನನ್ನ ಉಡೇದಾಗ. ಮತ್ತೆ ತಾಳ, ತಂಬೂರಿ, ಗೋಪಾಲ ಬುಟ್ಟಿ ಇವೆಲ್ಲ ಬದುಕಿನ ಅಸ್ತಿತ್ವಾನ ಕೊಟ್ಟುಬಿಟ್ಟೆಲ್ಲಾ ಸ್ವಾಮಿ. ಧನ್ಯ ಆತು ನನ್ನ ಜೀವನ. ನಿನ್ನ ಆಜ್ಞಾನ ತಂದೆ ಇವತ್ತಿಂದ ನಾ ದಾಸ ದೀಕ್ಷಾ ಪಡಿದೀನಿ ನಿನ್ನ ನಾಮಸ್ಮರಣೆ ನನ್ನ ಜೀವನದ ಉಸಿರು ಅಂತ ತಿಳ್ಕೋತೀನಿ" ಎಂದ ದಾಸರು ತಮ್ಮ ಮುಂದಿದ್ದ ತಾಳ, ತಂಬೂರಿ, ಗೋಪಾಲ ಬುಟ್ಟಿ ದೇವರ ಒಂದೆರಡು ವಿಗ್ರಹಗಳನ್ನು ಕಣ್ಣಿಗೊತ್ತಿಕೊಂಡು ಅವನ್ನೆಲ್ಲ ಜೋಪಾನವಾಗಿ ಎದೆಗೊತ್ತಿಕೊಂಡರು, ಮುನ್ನಡೆದರು.

ಎಂಥ ತಿರುವು ತೆಗೆದುಕೊಂಡಿತ್ತು ಬದುಕು.

ಕತ್ತಲೆಯ ರೂಪದಲ್ಲಿದ್ದ ತಾವು ಇವತ್ತು ತಮಗೆ ಬೆಳಕಿನ ಹಾದಿಯನ್ನು ನಿಚ್ಚಳವಾಗಿ ತೆರೆದಿಟ್ಟಿದ್ದಾನೆ ಶ್ರೀ ಹರಿ. ಇದು ನಿನ್ನ ನಿಜವಾದ ಸಾಧನೆಯ ಹಾದಿ ವೇಂಕಣ್ಣ, ನೀನಿಂದು ನನ್ನ ಹತ್ತಿರ ಬರುವ ನೇರಹಾದಿಯನ್ನು ಕಂಡುಕೊಂಡಿದ್ದಿ ಕಂದಾ ಎಂದು ಹೇಳಿದಂತೆ ಆಗುತ್ತಿತ್ತು.

ಹೌದು ಪ್ರಭು ಖರೇ ನೀನು ತೋರಿದ ಈ ಬೆಳಕಿನ ಹಾದಿಯಲ್ಲೆ ನಡೆಯುತ್ತೇನೆ. ಕೆಲವು ದಿನಗಳ ಹಿಂದಷ್ಟೆ. ನಿನ್ನನ್ನು ಹಾಡಿ ಹೊಗಳಲು ನಿನ್ನನ್ನು ಸ್ತುತಿಸಲು ನನಗೆ ಶಬ್ದಜ್ಞಾನವಿಲ್ಲ ಭಗವಂತ ನಿನ್ನನ್ನು ಸ್ತುತಿಸಿಲರಿಯೇನು ನಾನು ಎಂದ ದಾಸರು ಇಂದು ಭಗವಂತನ ಮುಂದೆ ನಿಂತು ನಾ ನಾ ರೀತಿಯಾಗಿ ಕೀರ್ತನೆಗಳನ್ನು ಕಟ್ಟಿ ಹಾಡುತ್ತಿದ್ದರು. ನೆರೆದ ಜನ ಆಶ್ಚರ್ಯವಾಗುವ ರೀತಿಯಲ್ಲಿ ಅವರ ಕವಿತ್ವ ಭಕ್ತಿ ಜನರ ಮನಸ್ಸನ್ನು ತಟ್ಟಿ ಭಕ್ತಿಯ ಭಾವವನ್ನು ಸ್ಫುರಿಸುತ್ತಿದ್ದವು.

ಮನಸ್ಸಿಗೆ ತೃಪ್ತಿಯಾಗುವವರೆಗೂ ಭಗವಂತನ ಮುಂದೆ ನಿಂತು ಊಹುಂ. ಆ ನನ್ನಪ್ಪನ ದರ್ಶನದಲ್ಲಿ ತೃಪ್ತಿಯೆಂಬ ಮಾತಿದೆಯೆ? ಇನ್ನು ನೋಡಬೇಕು. ಕಣ್ತುಂಬ ಅವನ ರೂಪವನ್ನು ತುಂಬಿಕೊಳ್ಳಬೇಕು, ಮನದುಂಬಿ ಅವನನ್ನು ಹಾಡಿ ಹೊಗಳಬೇಕು ಎಂಬ ಹಂಬಲಕ್ಕೆ ತೃಪ್ತಿಯೆಲ್ಲಿ?

ದಾಸರು ದರ್ಶನವಾದೊಡನೆ ಹೊರಬಂದು, ಗುಡಿಯ ಸುತ್ತ ಪ್ರದಕ್ಷಿಣೆಗಳನ್ನ ಹಾಕುತ್ತ ಹರಿನಾಮ ಸ್ಮರಣೆಯಲ್ಲಿ ಹೆಜ್ಜೆ ಹಾಕುತ್ತಿದ್ದರು. ಬಿಸಿಲು ಎರಿದಂತೆ, ದೇವಸ್ಥಾನದಲ್ಲಿ ಪ್ರಸಾದ ತೆಗೆದುಕೊಂಡು ಹರಿ ಇದು ನಿನ್ನ ಕೃಪೆ ಎಂದು ತಿಂದು, ಮತ್ತೆ ಯಾವುದಾದರೂ ಕಲ್ಲುಮಂಟಪದಲ್ಲಿ ಕೂತು ತಂಬೂರಿಯನ್ನು ತೆಗೆದುಕೊಂಡು ಶೃತಿ ಹಾಕುತ್ತ ಹರಿಯ ಕೀರ್ತನೆಗಳನ್ನು ಹಾಡುತ್ತಿದ್ದರು. ಬರೆಯುತ್ತಿದ್ದರು. ಕೆಲವು ಸಲ, ದೇವಸ್ಥಾನ ಮುಂದೆ ನಿಂತು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಹರಿ ತನ್ನಿಂದ ನುಡಿಸಿದ ಕೀರ್ತನೆಗಳನ್ನು ಹಾಡುತ್ತಿದ್ದರು. ಶ್ರೀನಿವಾಸನನ್ನು ಗಳಿಗೆ ಕೂಡ ಬಿಟ್ಟಿರಲಾರದಷ್ಟು ಅವರ ಮನಸ್ಸು ಅವನಲ್ಲಿ ಲೀನವಾಗುತ್ತಿತ್ತು ಶ್ರೀಹರಿ. ನಿನ್ನನ್ನು ಒಂದು ಗಳಿಗೆ ಕೂಡ ಬಿಟ್ಟಿರೂದಷ್ಟು ಮನಸ್ಸು ನಿನ್ನಲ್ಲಿ ಸೇರಿಕೊಂಡಿದೆ. ಹ್ಯಾಗೆ ಇರಲಿ. ನಿನ್ನಿಂದ ದೂರ ಎನ್ನುತ್ತ

"ಬಿಡೆನು ನಿನ್ನಂಘ್ರಿ, ಶ್ರೀನಿವಾಸ

ಎನ್ನ ದುಡಿಸಿಕೊಳ್ಳಲೊ ಶ್ರೀನಿವಾಸ, ನಿನ್ನ ನುಡಿಯೇ ಜೀತಲ್ಲೋ ಶ್ರೀನಿವಾಸ । ಎನ್ನ ನಡೆ ತಪ್ಪು ಕಾಯೊ ಶ್ರೀನಿವಾಸ । ಬಡಿಯೋ ಬೆನ್ನಲ್ಲಿ ಶ್ರೀನಿವಾಸ ಎನ್ನೊಡಲ ಹೊಯ್ಯದಿರೋ ಶ್ರೀನಿವಾಸ ನಾ ಬಡವ ಕಾಣೆಲೋ ಶ್ರೀನಿವಾಸ । ನಿನ್ನೊಡಲ ಹೊಕ್ಕೇನೋ ಶ್ರೀನಿವಾಸ, ಖರೇ ವೆಂಕಟೇಶ, ನಿನ್ನವನಾನು, ನಿನ್ನ ಕರುಣೆಯಿಲ್ಲದಿದ್ದರೇ ಇವತ್ತು ನಾನೊಬ್ಬ ಮನುಷ್ಯನಂತಾಗುತ್ತಿರಲಿಲ್ಲ. ವಿದ್ಯೆಯಿಲ್ಲದೆ ಪಶುವಿಗಿಂತ ಕಡೆಯಾಗುತ್ತಿದ್ದೆ, ಕರುಣಾಸಾಗರ, ನಿನ್ನ ಚರಣಕ್ಕೆ ಬಂದು ಬಿದ್ದಿದ್ದರಿಂದಲೇ ನೀನು ಕೈಹಿಡಿದು ಎತ್ತಿದೆ ಪ್ರಭು. ಇಲ್ಲ, ನಿನ್ನಂಘ್ರಿ ಬಿಟ್ಟು ನಾನು ಎಲ್ಲೂ ಹೋಗುವುದಿಲ್ಲ. ಸದಾ ನಿನ್ನ ಪಾದ ಸೇವೆ ಮಾಡಿಕೊಂಡು ನಿನ್ನ ನಾಮಸ್ಮರಣೆ ಮಾಡುತ್ತ ಇಲ್ಲಿಯೇ ಇರುವ ಭಾಗ್ಯ ಕೊಡು ತಂದೆ ಎಂದು ಮನದುಂಬು ಕೇಳಿಕೊಳ್ಳುತ್ತಿದ್ದರು.

ಮದ್ಯಾನ್ಹವಾದರೇ ನಾರಾಯಣಬೆಟ್ಟಕ್ಕೆ ಹೋಗಿ, ಸ್ವಾಮಿಯು ಪಾದವಿಟ್ಟ ಜಾಗದಲ್ಲಿ ಧ್ಯಾನಕ್ಕೆ ಕೊಡುತ್ತಿದ್ದರು. ಹರಿ ಇದು ನಿನ್ನ ಸಾನಿಧ್ಯ ನೀನು ಶ್ರೀನಿವಾಸ ಕಾಲಿಟ್ಟ ಜಾಗ. ತಂದೆ ನನ್ನನ್ನು ಪಾವನ ಮಾಡು ಎಂದು ಕಣ್ಮುಚ್ಚಿ ಧ್ಯಾನಕ್ಕೆ ಕುಳಿತರೇ, ಅವರಿಗೆ ಕಾಲದ ಪರವೆಕೂಡ ಇರುತ್ತಿರಲಿಲ್ಲ. ಎಂಥಹ ಆನಂದದ ಅನುಭೂತಿ ಹರಿಯ ಧ್ಯಾನಕ್ಕೆ ಕೂತರೆ ಅಂತರಂಗದಲ್ಲಿ



ಅವನ ರೂಪ ಸ್ಪಷ್ಟವಾಗುತ್ತ. ಅದೇ ಮುಗಳ್ನಗುವಿನೊಡನೆ ಕಣ್ಣೆದುರು ಬಂದು ನಿಂತಂತಾಗುತ್ತಿತ್ತು ಅವರಿಗೆ.

ಆಕಾಶಗಂಗೆ, ಸ್ವಾಮಿ ಪುಷ್ಕರಣಿ, ಕುಮಾರಧಾರ, ಪಾಪನಾಶನಿ ಎಂದು ಎಲ್ಲ ತೀರ್ಥಗಳ ಸ್ನಾನ, ತಾಯಿ ಪದ್ಮಾವತಿಯ ದರ್ಶನ, ವರಾಹ ದೇವರ ಸಾನಿಧ್ಯ, ಇಡೀ ವೆಂಕಟಾಚಲವೆ ಭೂ ವೈಕುಂಠಕ್ಕೆ ಸಮವೆನಿಸುತ್ತಿತ್ತು. ಅದಕ್ಕೆ ಕನಕದಾಸರು ಹಾಡಲಿಲ್ಲವೆ

ಇಷ್ಟು ದಿನ ಈ ವೈಕುಂಠ ಎಷ್ಟು ದೂರ ಎನ್ನುತಲಿದ್ದೆ

ಸೃಷ್ಟಿಗೊಡೆಯ. .

ಎಂದು ದಾಸಶ್ರೇಷ್ಟರುಗಳು, ಯತಿವರ್ಯರು ಎಲ್ಲ ಇಲ್ಲಿಯೇ ವೈಕುಂಠ ದರ್ಶನ ಮಾಡಿದವರು.

ಇಂಥ ಸ್ವಾಮಿಸಾನಿಧ್ಯದ ವೈಕುಂಠ ಬಿಟ್ಟು ಹೊಗಲು ತಾನೇ ಹೇಗೆ ಸಾಧ್ಯ? ಇನ್ನು ತನ್ನ ಭವ್ಯ ಭವಿಷ್ಯದ ಮುಕ್ತಿಯ ಹಾದಿ ಇಲ್ಲಿದೆ ಎಂದು ದಾಸರು ಕಾಲ ಕಳೆಯುತ್ತಿದ್ದರು. ವರ್ಷಗಳೇ ಕಳೆದಿರಬಹುದು. ಅಲ್ಲಿಯೆ ವೇಂಕಪ್ಪನ ಸನ್ನಿಧಿಯಲ್ಲಿ ನೆಲಸಬೇಕೆಂಬ ಅವರ ನಿರ್ಧಾರದಲ್ಲಿ ಮನಸ್ಸಿನ ಸಂತೋಷದಲ್ಲಿ ಕಾಲ ಕಳೆಯುತ್ತಿದ್ದರು. ದಿನಕಳೆದಂತೆ ಅವರ ಭಕ್ತ ವೃಂದವು ಜಾಸ್ತಿಯಾಗಿತ್ತು. ಅವರು ಇರುವಲ್ಲಿ ಭಕ್ತರು ಬಂದು ನಮಸ್ಕಾರ ಮಾಡುತ್ತಿದ್ದರು. "ತಾವು ಮಹಾಮಹಿಮರು ದಾಸರೆ ತಮ್ಮಿಂದ ನಮ್ಮಲ್ಲಿ ಜ್ಞಾನ ಉದಯಿಸಲಿ" ಎನ್ನುವ ಮಾತಾಡುತ್ತಿದ್ದರು.

"ತಮ್ಮ ಕೀರ್ತನೆಗಳಲ್ಲಿ ಭಕ್ತಿಯ ರಸ ಹರಿಯುವಂತೆ ಆರ್ತರನದರ ಧ್ವನಿಯಿದೆ. ಕವಿತ್ವದಲ್ಲಿ ಸಾಹಿತ್ಯದ ಅಗಮ್ಯವಾಗಿದೆ ಅಪರೂಪ ತಮ್ಮ ಕೀರ್ತನೆಗಳು" ಎನ್ನುತ್ತಿದ್ದರೆ

ಖರೇ ದಾಸರ ಕೀರ್ತನೆಗಳಲ್ಲಿ ಅಗಮ್ಯವಾದ ಸಾಹಿತ್ಯ ಸಮೃದ್ಧಿಯಾಗಿ ಹರಿಯುತ್ತಿತ್ತು.

"ಸಲಹು ವೆಂಕಟರಮಣಾ ದಯಾಂಬುಧಿ
ಸಲಹು ವೇಂಕಟ ರಮಣಾ
ಮಸ್ತಕದೊಳುಪ್ಪುವ ಮಾಣಿಕ್ಯ ಮುಕುಟದ
ಕಸ್ತೂರಿ ನಾಮದ ಚೆಲುವಾ
ವಿಸ್ತರ ಕದಲದೆ ಹೊಳೆವ ಕುಂಡಲ ಪ್ರಾ
ಶಸ್ತವದನ ಜಗಜೀವಾ

ತಾವು ಕಂಡ ವೇಂಕಟರಮಣನ ವರ್ಣನೆ ಹಾಡಿನಲ್ಲಿ ಆ ಭಗವಂತನ ಸಾಕ್ಷಾತ್ಕಾರವಾದಂತೆ ವರ್ಣಿಸುತ್ತಿದ್ದರು. ಆದರೆ ಅವರ ಭಕ್ತವೃಂದವು ಹೆಚ್ಚಿದಂತೆ ಹಲವು ಅವರನ್ನುದ್ದೇಷಿಸುವ ನಿಂದಕರು ಕೂಡ ಅವರ ಸುತ್ತ ಸುಳಿಯುತ್ತ ಮನಬಂದಂತೆ ಟೀಕಿಸುತ್ತಿದ್ದರು. ದಾಸರ ಭವ್ಯ ವ್ಯಕ್ತಿತ್ವ ಅವರನ್ನು ಕೊಂಡಾಡುವ ಜನಗಳ ಸಾತ್ವಿಕತೆ ಅಂಥ ನಿಂದಕರ ಮನಸ್ಸನ್ನು ವರ್ತುಲದಂತೆ

ವಾಡುತ್ತಿತ್ತು. ಅಂತಲೇ ಎಷ್ಟೋ ಸಲ ದಾಸರಿಗೆ ಕೇಳಿಸುವ ಹಾಗೆ ಅವರನ್ನು ಟೀಕಿಸುತ್ತಿದ್ದರು.

"ಎಂಥಾ ದಾಸರಪಾ ಇವರೇನು ಮಹಾಮಹಿಮರೋ ಜನಕ್ಕೆ ಬುದ್ಧಿಯಿಲ್ಲ ನೋಡಿ. ಎನೋ ತಾಳ, ತಂಬೂರಿ, ಹಿಡಿದು ಕುಣಿದು ಹಾಡಿಬಿಟ್ಟರೇ ಇವರೊಬ್ಬ ದಾಸರೋ?" ಎನ್ನುತ್ತಿದ್ದರು.

"ಎನೋ ಹೊಟ್ಟೆಪಾಡು ಇರಬೇಕು ಬಿಡಿ ಮಾಡೋಕೆ ಬೇರೆ ಕೆಲಸವಿರಲಿಲ್ಲ. ಹೀಗೆ ವೇಷ ಹಾಕಿಕೊಂಡು ಕುಣಿಯುತ್ತಾರೆ" ಎನ್ನುತ್ತಿದ್ದರು.

ಇಂಥಹ ಜನಗಳ ವರ್ತನೆಗೆ ಮನಸ್ಸು ನೊಂದರೂ "ಶ್ರೀಹರಿ, ಇಂಥ ಮಾತುಗಳನ್ನು ನಾನು ಕೇಳಬೇಕೆಂದು ನಿನ್ನ ಇಚ್ಛೆ ಇದ್ದರೆ ಅಗತ್ಯ ಕೇಳ್ತೀನಿ. ತಂದೆ ಎನ್ನುತ್ತಿದ್ದರು. ಮತ್ತೆ

"ಹಿತಶತ್ರುಗಳ ಸಂಗತಿ ಸಾಕು, ಪ್ರಸನ್ವೇಂಕಟಪತಿ

ನಿನ್ನ ಭಕ್ತ ಸಂಗ ಕೊಡೋ ಕಾಣೋ ನನಗೆ ಸಾಕು ತಂದೆ. ಇಂಥ ಹಿತಶತ್ರುಗಳಂತೆ ನಡೆದುಕೊಳ್ಳುವವರ ಟೀಕೆ ನಿಂದನೆಗಳ, ನಿನ್ನ ಭಕ್ತರ ಸಂಗದೊಳಗೆ ಎನ್ನ ಇರಿಸು ಎನ್ನುವಂತೆ ಅನನ್ಯತೆಯಿಂದ ಕೇಳಿಕೊಳ್ಳುತ್ತಿದ್ದರು.

ಹಗಲು-ರಾತ್ರಿಗಳು ಕಳೆದು ದಿನಗಳ ಮೇಲೆ ದಿನಗಳು ಕಳೆದು ಕಾಲ ಉರುಳುತ್ತಿತ್ತು. ದಾಸರು ಗಿರಿಯಲ್ಲಿಯೇ ಇದ್ದರು.

ಹೀಗೆ ಒಂದು ದಿನ ದಾಸರು ದೇವಸ್ಥಾನದ ಮುಂದಿನ ಕಂಬದ ಮುಂದೆ ಕಣ್ಮುಚ್ಚಿಕೊಂಡು ಹರಿಯ ಧ್ಯಾನದಲ್ಲಿರಬೇಕು. ಎಂದಿನಂತೆ ಅವರ ಕಣ್ಣುಗಳು ಅರ್ಧನಿಮಿಲಿತ ನೇತ್ರದಿಂದ ಆ ಶ್ರೀನಿವಾಸನನ್ನು ಧ್ಯಾನಿಸುತ್ತ ಕೂತ ಗಳಿಗೆ. ಯಾರೋ ಬಂದು ಮುಂದೆ ನಿಂತ ಹಾಗಾಯಿತು. ಬಂದು ನಿಂತವರ ಹೆಜ್ಜೆಯ ಸಪ್ಪಳ ಕೇಳಿಸದಷ್ಟು ಅವರ ಆಂತರ್ಯ ಹರಿಯೊಡನೆ ಸೇರಿ ಹೋಗಿರಬೇಕು. ಬಂದವರು ಎರಡು ಗಳಿಗೆ ಹಾಗೇ ನಿಂತು ಅವರನ್ನು ದೃಷ್ಠಿಸಿ ಅವರ ಮುಂದೆ ಕೂತರು.

ಎಂಥಹ ವ್ಯತ್ಯಾಸ ಕಾಣುತ್ತಿದೆ. ವೇಂಕಣ್ಣನ ಮುಖದಲ್ಲಿ ಇವನು ಮೊದಲಿನ ಹುಡುಗ ಅಲ್ಲವೇ ಅಲ್ಲ ಎನ್ನುವಷ್ಟು ಎಂಥ ತೇಜ. ಎಂಥ ಪ್ರೌಢತೆ ಮುಖದಲ್ಲಿ. ಈ ಬೆಟ್ಟದೊಡೆಯನ ಸನ್ನಿಧಿಯಲ್ಲಿ ಅವನಿಗೆ ಅಪಾರ ಅಮೂಲ್ಯ ನಿಧಿ ಸಿಕ್ಕಂತೆ. ಮನಸ್ಸಿನ ದುಗುಡಗಳೆಲ್ಲ ಕಳೆದು, ಎಷ್ಟು ನಿರಾತಂಕ, ನಿರಂಬಳತೆ ತುಂಬಿದೆ.

"ವೇಂಕಣ್ಣ" ಎಂದು ಮೃದುವಾದ ಧ್ವನಿಯಲ್ಲಿ ಕರೆದರಾತ.

"ಊಹುಂ, ದಾಸರು ಬೇರೆಯೇ ಲೋಕದಲ್ಲಿದ್ದರು. ಶೀನಪ್ಪ ಎಷ್ಟೋ ಹೊತ್ತು, ಹಾಗೆಯೇ ಕುಳಿತಿದ್ದರು. ನಂತರ ಎಷ್ಟೋ ಗಳಿಗೆಯ ಮೇಲೆ ದಾಸರು ಕಣ್ಣು ತೆಗೆದರೇ ಎದುರಿಗೆ ಕೂತಿದ್ದಾರೆ ಶೀನಪ್ಪ. ಒಂದು ಗಳಿಗೆ ಒಬ್ಬರ ಮುಖವನ್ನೊಬ್ಬರು ನೋಡಿದರು.



"ಶ್ರೀನಿವಾಸನೇ ಅವ್ವ ಅಪ್ಪ ಅಂತ ಹುಡಿಕ್ಕೊಂಡು ಬಂದ ವೇಂಕಣ್ಣಾ ಅಲ್ಲೇನಪ್ಪಾ ನೀನು?"

"ಅದಕ ಹಾದಿ ತೋರಿಸಿದ ಶೀನಪ್ಪತಾತಾ ನೀವು"

"ಹೌದಪ್ಪ ಅದss ಶೀನಪ್ಪ. ವೇಂಕಣ್ಣಾ ದೇವರ ದರ್ಶನ ತಗೊಂಡು ಹೊರಗ ಬರ್ತಿದ್ದೆ. ಕಂಬದ ಹತ್ರ ನೀ ಕಾಣಿಸಿದ. ಇಂವ್ಯಾಕ ಇಲ್ಲೆ ಅನಕೋತ ಬಂದೆ. ಎನಪಾ ಅದು. ಊರಿಗೆ ಹೋಗಿ ಮತ್ತೆ ಬಂದೇನು ಎಷ್ಟು ದಿವಸ ಕಳೆದುಹೋದು, ತಿಂಗಳುಗಳೇ? ವರ್ಷ?

"ವರ್ಷಗಳೇ ಇರಬಹುದು ತಾತಾ. ನಾ ಊರಿಗೆ ಹೋಗಲೇ ಇಲ್ಲ. ವೇಂಕಪ್ಪನ ಪಾದಾಬಿಟ್ಟು ಯಾರು ಗತಿ ಇಲ್ಲಂತ ಬಂದಾವಾ. ಸೋಕ್ಷ, ಮೋಕ್ಷ ನೀನೆ ಅಂತ ಬಂದಾವಾ. ನಿಮಗ ಗೊತ್ತಿಲ್ಲದ್ದು ಯಾವುದದ? ತಾತಾ ಈ ಭಕ್ತಿ ಹಾದಿ ತೋರಿಸಿದವ್ರು ನೀವು ಅಲ್ಲ? ನಿಮಗ ಎಷ್ಟೋ ಋಣಿಯಾಗಿದ್ರೂ ಸಾಲದು ನಾನು"

ಅಷ್ಟರಲ್ಲಿ ಯಾರ್‍ಯಾರೋ ನಾಕಾರು ಮಂದಿ ಬಂದು ದಾಸರಿಗೆ ನಮಸ್ಕಾರ ಮಾಡಿ ಮಾಡಿ ಹೊಗುತ್ತಿದ್ರು. "ಸ್ವಾಮಿ ನೀವು ಮಹಾತ್ಮರು ದೇವರ ಸಾಕ್ಷಾತ್ಕಾರ ಮಾಡಿಕೊಂಡ್ರಂತ. ಸ್ವತಃ ವೇಂಕಪ್ಪನ ನಿಮಗ ಅಂಕಿತ ಕೊಟ್ಟು ದಾಸ ದೀಕ್ಷಾ ಕೊಟ್ಟಾನಂತ. ಹಂಗಂತ ಎಲ್ಲಾರೂ ಮಾತಾಡ್ತಿದ್ರು ಧನ್ಯ ಸ್ವಾಮಿ ಧನ್ಯರು" ಎಂದು ಹೇಳುತ್ತ ನಮಸ್ಕಾರ ಮಾಡಿ ಹೋಗುತ್ತಿದ್ರೇ, ಶೀನಪ್ಪ ವಿಸ್ಮಯದಿಂದ ದಾಸರನ್ನೆ ನೊಡುತ್ತಿದ್ದರು.

"ಎನಪಾ ಎನು ಈ ವಿಚಿತ್ರ. ವೇಂಕಣ್ಣ, ಎನೇನಾತು. ನಾ ಹೋದ ಮ್ಯಾಲೆ" ಎಂದರು.

"ಹೌದು ತಾತಾ. ನೀವು ಹೋದಮ್ಯಾಲೆ ನನಗೆ ಆ ಶ್ರೀಹರಿಯನ್ನು ಬಿಟ್ಟು ಯಾರಿಲ್ಲ ಅನಿಸಿತ್ತು. ಯಾರಿಲ್ಲದವ್ರಿಗೆ ಅವನೇ ತಂದಿ ತಾಯಿ ಅನ್ನು ನೀವು ಹೇಳಿದ, ಅವ್ವ ಹೇಳಿದ ಮಾತು. ನನ್ನ ಎದ್ಯಾಗ ತಂತಿ ಮೀಟಿದ್ಹಂಗ ಮೀಟುತ್ತಿತ್ತು. ಅದು ಶೃತಿ ಆತು. ಅದ ಪಲ್ಲವಿ ಆತು. ಅನುಗಾಲಾ ಅವ. ನನ್ನ ಕಣ್ಣು ಮನಸು ಅಂತರಾಳ ಮಾತು. ಎಲ್ಲ ಕಡೆ ತುಂಬ್ಕೊಂಡ ಒಂದೀನ ಹೋಗಿ ಆ ಪುಣ್ಯ ಪಾದಕ್ಕೆ ಬಿದ್ದೆ ನೀ ಕೈ ಹಿಡಿದು ಉದ್ಧಾರಾ ಮಾಡಲಿಲ್ಲ ಅಂದ್ರ ಇದ ಪಾದಕ್ಕ ಪ್ರಾಣಾರ್ಪಣೆ ಮಾಡ್ತೀನಿ ಅಂದೆ. ನೀ ಕೊಟ್ಟ ಜೀವ ಇದು. ನಿನ್ನ ಪಾದಕ್ಕೆ ಗತಿ ಅಂದೆ. ನಾನು ಅಜ್ಞಾನಿ, ಅಭೊಧ, ಅಮಯಾಕ ನನ್ನ ಕಾಯೊಂವಾ ನೀನss ಅಂದೆ ಅವ್ವಾ ಅಪ್ಪಾ, ಬಂಧು, ಬಳಗ, ನೀನು ಅಂತ ಅವನ ಪಾದಕ್ಕ ತಲಿ ಇಟ್ಟೆ. ಶೀನಪ್ಪ ತಾತಾ ಈ ಇಹದ ಅರಿವಿರಲಿಲ್ಲ ನನಗೆ. ಸುತ್ತಲಿನ ಜಗತ್ತು ಎಕದಂ ಮಟಾಮಾಯ ಆಗೇದ ಅನಸ್ತು. ಯಾವದೊ ಎರಡು ಕೈಗಳು ನನ್ನ ಕತ್ತಲಿನಿಂದ ಬೆಳಕಿನ ಕಡೆ ಕರ್‍ಕೊಂಡು ಹೋದ್ಹಂಗ ಆತು. ನಾ ಕಾಣದ ಲೋಕ ಕಾಣ್ತಸ್ತು. ಬೆಳಕಿನ ಆಕಾರ ಕಾಣಸ್ತು. ಆ ತೇಜ ಆಕಾರ, ಆ ರೂಪ, ಪಾದಕ್ಕೆ ತಲಿ ಇಟ್ಟ ನನ್ನ ಹಣೆನ ಯಾರೋ ಸವರಿ ಮ್ಯಾಲೆ ಎತ್ತಿದ್ರು. ನನ್ನ ನಾಲಗಿ ಹೊರಗ ತಗದ್ರು "ಪ್ರಸನ್ವೇಂಕಟ" ಅಂತ ಬರದ್ರು ಆ ಬರೆದವ್ರು ಯಾರೂ ಆಗಿರಲಿಲ್ಲ ತಾತಾ. ಆ ಕರುಣಾನಿಧಿ ವೇಂಕಪ್ಪನೇ ಆಗಿದ್ದ. ದಿಕ್ಕ ತಪ್ಪಿ ಮಲಗಿದ್ದೆ ನನ್ನ ಯಾರೋ ಹೊಡದು ಎಬ್ಬಿಸಿದ್ಹಂಗ ಆತು ನಾಲಗಿಯೊಳಗ ಬಿತ್ತಿದ ಅಕ್ಷರ ಜ್ಞಾನ ಭಂಡಾರ ಅಂದ. ಎಚ್ಚರ ಆದ ಮ್ಯಾಲೆ ನನ್ನ ಬಾಯಿಂದ ಬಂದದ್ದು ಅವನ ಕೀರ್ತನ ತಾತಾ. ಹಂಗ ದಾಸ ದೀಕ್ಷಾ ಕೊಟ್ಟನಿ ಅಂತ

ಅರ್ಚಕರ ಬಾಯಿಂದ ನುಡಿಸಿ. ಈ ಗೋಪಾಲಬುಟ್ಟಿ, ತಂಬೂರಿ, ತಾಳ, ದೇವರ ವಿಗ್ರಹ ಕರುಣಿಸಿ ಕಳಿಸ್ಯಾನ" ಎಂದು ಶೀನಪ್ಪನ ಕಣ್ಣಿಂದ ಎರಡು ಹನಿ ಕಣ್ಣೀರು ಒಡೆಯಿತು. ಅಗಾಧ, ವಿಸ್ಮಯ ದೇವರ ಕರುಣೆ ಎಂದರೆ ಸಾಮಾನ್ಯವೆ? ಹೇಗಿದ್ದ, ಹುಡುಗ ಹೇಗಾಗಿದ್ದಾನೆ.

ಅಜ್ಞಾನಿ ವೇಂಕಣ್ಣನಾಗಿದ್ದ. ಇವತ್ತು "ಪ್ರಸನ್ವೇಂಕಟದಾಸ"

"ಧನ್ಯ ವೇಂಕಣ್ಣಾ ಧನ್ಯ ಆದಿ. . . ನಾ ಗುಡಿ ಸುತ್ತಿ ಬರೋ ಮುಂದ ಭಕ್ತಾದಿಗಳೆಲ್ಲ ಮಾತಾಡ್ತಿದ್ರು. ನಿನ್ನ ಕೀರ್ತನೆ ಬಗ್ಗೆ, ಹಂಗ ಅದೇನೋ ಅರ್ಚಕರ ಕನಸಿನ್ಯಾಗ ಬಂದು. . ತಾಳ, ಗೋಪಾಲ ಬುಟ್ಟಿ, ತಂಬೂರಿ, ನಿನಗ ಕೊಡು ಅಂತ ಹೇಳಿದ್ನಂತ. "ಪ್ರಸನ್ವೇಂಕಟ ದಾಸ"ರು ಅಂತಿದ್ರು. ಹಂಗ ನೀವೇ ಎನು ಪ್ರಸನ್ವೇಂಟದಾಸರು ಅಂದ್ರ" ಶೀನಪ್ಪ ಗೌರವದ ಧ್ವನಿಯಲ್ಲಿ

"ಶೀನಪ್ಪ ತಾತಾ ನೀವು ದೊಡ್ಡವರು. ವಯಸ್ಸಿನಿಂದ ಅನುಭವದಿಂದ ನೀವು ಅಷ್ಟು ಗೌರವದಿಂದ ನೀವು ತಾವು ಅನ್ಬ್ಯಾಡ್ರಿ ನಿಮಗ ನಾನು ಅದೇ ವೇಂಕಣ್ಣ"

"ಖರೇ ದಾಸರ ಅನುಭವ ವಯಸ್ಸು ನನ್ನದು ದೊಡ್ಡದಿರಬಹುದು. ಅದ್ರ ಇವತ್ತ ಜ್ಞಾನದಿಂದ ವ್ಯಕ್ತಿತ್ವದಿಂದ ದೊಡ್ಡ ವರಾದವ್ರು ನೀವು ಹರಿ ಒಲಿದಾಂವಾ ಜಗತ್ತಿಗೆ ದೊಡ್ಡಾಂವಾ. ಪ್ರಲ್ಹಾದಾ ವಯಸ್ಸಿನಿಂದ ಸಣ್ಣಾಂವಾ ಆಗಿದ್ರ ಎನಾತು? ಇವತ್ತ ಜಗತ್ತೆ ಅವನ್ನ ಹಾಡಿ ಹೊಗಳ್ತದೆ. ಅವನ ಸಲುವಾಗಿ ಹರಿ ಎಂಥಾ ರೂಪ ತಾಳಬೇಕಾತು. ವೇಂಕಣ್ಣ ಅವಾಗ ನೀವು ಬಂದಾಗ ನೀವಿನ್ನು ಹುಡುಗತನ ದಾಟಿ ಬರ್ತಿದ್ರಿ. ಈಗ ಹರೇಕ ಬಂದೀರಿ. ಹರೇದ ಜೋಡಿ, ಜ್ಞಾನ, ಭಕ್ತಿ, ಪಾಂಡಿತ್ಯ ಎಲ್ಲ ಬಂದದ. ಇವತ್ತ ನೀವು ಆ ಭಗವಂತನ ಪರಮ ಭಕ್ತ ಆಗೀರಿ. ನಾನು ಬಂದು ಹೋಗಿ ನಾಕಾರು ವರ್ಷದಾಗ ಎಂಥಾ ಬದಲಾವಣೆ ಆಗೇದ. ಇವತ್ತ ಇದ ಪ್ರಾಂಗಣಾದೊಳಗ ನಿಮ್ಮ ಹರಿನಾಮ ಕೀರ್ತನ, ಗೊತ್ತೆದ ಎನು ನಿಮಗ?

ಎನು? ಎನ್ನುವಂತೆ ದಾಸರು ಅವರನ್ನು ನೋಡಿದರು "ನಮ್ಮ ಛಪ್ಪರದೇವರ ಪಲ್ಲಕ್ಕಿ ಜೋಡಿ ನೀವು ತಿರುಪತಿಗೆ ಬರೂಮುಂದ ಎನಂದದ್ರಿ. ತಾತಾ ನನಗ ಆ ಭಗವಂತನ ಹಾಡಿ ಹೊಗಳಲಿಕ್ಕೆ ವಿದ್ಯಾ ಇಲ್ಲ. ನನ್ನಂಥ ಅಜ್ಞಾನಿಗೆ ಒಲಿತಾನೇನ್ರಿ ಅಂವಾ" ಅಂದಿದ್ರಿ. ಆದ್ರ ಈಗ? ಭಕ್ತರು ಎಷ್ಟು ಭಕ್ತಿಯಿಂದ ನೀವು ರಚಿಸಿದ ಹಾಡು ಹಾಡ್ತಾರ– ಇನ್ನ ಆ ವೇಂಕಪ್ಪನ ಜ್ಞಾನದ ಭಂಡಾರ ನಿಮ್ಮ ಕೈಯಾಗ ಕೊಟ್ಟಾರ ಧನ್ಯ ದಾಸರ ನಿವು. ನಿಮ್ಮ ಬದುಕಿನ ಪರಮಗುರಿ ಎನಿತ್ತು ಅದು ಆತು. ಆದ್ರ ಮುಂದ ಎನು ಮಾಡಾವ್ರು?

"ಈ ಶ್ರೀನಿವಾಸನ ಸಾನಿಧ್ಯ ಬಿಟ್ಟು ನನಗೇನದ ತಾತಾ"

"ಅಂದ್ರ"

"ಆ ಭಗವಂತ ಅಜ್ಞಾನಿಯಾಗಿದ್ದ ನನಗೆ ಜ್ಞಾನದ ಭಂಡಾರ ಕೊಟ್ಟಾನ ನಾಲಗಿಯೊಳಗ ಅಕ್ಷರ ಬಿತ್ತಾನ. ಇಲ್ಲಿ ಬೆಟ್ಟ ಪವಿತ್ರ ನದಿಸ್ನಾನ, ಅವನ ದರ್ಶನ, ಅವನ ಸ್ಮರಣ, ನಾಮ ಕೀರ್ತನಾ ಮಾಡಿಕೋತ ಇಲ್ಲೆ ಇದ್ದು ಬಿಡ್ತೀನಿ. ಈ ಲೌಕಿಕ ಜಂಜಾಟ ಬ್ಯಾಡಿನ್ನ"



ಶೀನಪ್ಪಜ್ಜ ಒಂದು ಗಳಿಗೆ ಎನೂ ಮಾತಾಡಲಿಲ್ಲ.

"ಯಾಕ ತಾತಾ ಸುಮ್ಮ ಆದ್ರಿ. ನಾ ಹೇಳಿದ್ರೊಳಗ ಎನsssರ ತಪ್ಪು ಅದ ಎನು?"

"ನಿಮಗ ಹಂಗ ಅನಿಸಬಹುದು ವೇಂಕಣ್ಣ. ಆದ್ರ ನನಗ ಅನಿಸ್ತದ ಬ್ಯಾರೆ. ಲೌಕಿಕ ಬ್ಯಾಡಂತ ಬಿಟ್ರು. ಬರೇ ಹರಿಸ್ಮರಣಾ ಮಾಡಿಕೋತ ಇಲ್ಲೆ ಇರ್ತೀನಿ ಅಂತಿದ್ರ. ನೂರಾರು ಭಗವದ್ಭಕ್ತರು ಇಲ್ಲೆ ನೆಲೆಯೂರ ಬೇಕಾಗಿತ್ತು. ಶ್ರೀ ರಾಘವೇಂದ್ರ ಯತಿಗಳಾಯ್ತು, ಶ್ರೀ ವಾದಿರಾಜರಾಯ್ತು, ಪುರಂದರದಾಸರು, ಕನಕದಾಸರು ಎಲ್ಲಾರೂ ಭಗವಂತನ ಸಾನಿಧ್ಯ ಬಯಸಿ ಬಂದವರೇ ಹರಿ ಸಾಕ್ಷಾತ್ಕಾರ ಮಾಡಿದವ್ರೆ. ಇದೇ ವೈಕುಂಠ ಅಂತ ಕಂಡವರು. ತಮ್ಮೊಳಗೆ ಶ್ರೀ ಹರಿಯನ್ನ ವಿಲೀನಗೊಳಿಸಿಕೊಂಡವರು. ಆದರೆ ಅವರ್‍ಯಾರು ಲೌಕಿಕ ಬಿಟ್ಟು ಇಲ್ಲೆ ಇರ್ಲಿಲ್ಲ. ಲೌಕಿಕದೊಳಗಿದ್ದ ಅಲೌಕಿಕವಾದದ್ದು ಸಾಧಿಸಿದ್ರು. ಇಚ್ಛಾ ಆದಾಗೆಲ್ಲ ಬಂದು ತಿಮ್ಮಪ್ಪನ ದರ್ಶನ ಮಾಡಿಕೊಂಡು ಹೋಗ್ತಿದ್ರು. ವೇಂಕಣ್ಣ ನೀವು ಮಾಡಬೇಕಾದ್ದು ಅದೇ"

ಎನೂ ಮಾತಾಡದೆ ದಾಸರು ಅವರ ಮುಖ ನೋಡಿದರು.

"ನೀವು ಎನು ಹೇಳ್ತಿರಿ"

"ಶೀನಪ್ಪ ತಾತಾ ದಯವಿಟ್ಟು ಮತ್ತ ಮತ್ತ ನೀವು ತಾವು ಅನ್ಬ್ಯಾಡ್ರಿ ನನಗೆ. ಬ್ಹಾಳ ಸಂಕೋಚ ಆಗ್ತದೆ. ನನ್ನ ತಂದಿ ಸ್ಥಾನಕ್ಕೆ ನಿಂತವ್ರು ನೀವು ದಯವಿಟ್ಟು ಮೊದಲಿನಗತೇ ವೇಂಕಣ್ಣಾ ಬಾಪಾ, ಹೋಗಪಾ ಅಂತ ಕರೀರಿ."

"ಆತಪಾ, ನಿನ್ನ ಅಂತಃಕರಣ ಹಂಗಿದ್ರ, ಹಂಗ ಕರೀತಿನಿ ವೇಂಕಣ್ಣ ನೀ ಎನು ಹೇಳಿದಿ ಶ್ರೀ ಹರಿ, ನಿನ್ನ ನಾಲಗಿ ಮ್ಯಾಲೆ "ಪ್ರಸನ್ವೇಂಟಕ" ಅಂತ ಬೀಜಾಕ್ಷರ ಬರೆದು, ಅಂಕಿತ ಕೊಟ್ಟ ಅಂತ ಜ್ಞಾನದ ಭಂಡಾರಾನೇ ನಿನ್ನ ಕೈಯಾಗ ಕೊಟ್ಟ. ಆದ್ರ ಅದು ನಿನಗಷ್ಟೆ ಅಂತ ತಿಳ್ಕೊಂಡಿ ಎನು?"

"ಜ್ಞಾನದ ಭಂಡಾರ ಅಂದ್ರ ಎಲ್ಲಾರಿಗೂ ಹಂಚೂ ಪ್ರಸಾದ ಇದ್ಹಂಗ ವೇಂಕಣ್ಣ. ಹರಿನಾಮ ಕೀರ್ತನಾ ಅಂದ್ರ ಎಲ್ಲಾರ ನಾಲಗಿ ಮ್ಯಾಲೆ ನಲಿದಾಡಬೇಕು. ಜ್ಞಾನ ಅಂದ್ರ ಅಕ್ಷರ ಇದ್ಹಂಗ. . .ಹಂಚಿದಷ್ಟು ಅದು ಅಕ್ಷಯ ಆಗೀಕೋತ ಹೋಗ್ತದ. ಅದು ನಿನಗಷ್ಟ ಉಳಿಬಾರ್ದಲ್ಲ. ಅರ್ಥ ಅತಿಲ್ಲೋ ನಾ ಹೇಳಿದ್ದು"

"ಆತ್ರಿ"

"ನೀ ಇಲ್ಲೆ ಬರೂ ಮುಂದ ಹಾದಿಗುಂಟ ಹೇಳ್ತಿದ್ದಿ. ಶೀನಪ್ಪ ತಾತಾ ನನಗ ಜ್ಞಾನ ಹುಟ್ಟಲಿಲ್ಲ. ಇಷ್ಟು ವರ್ಷ ಅದನ್ನ ಹುಡುಕುದ್ರಾಗ ಕಳೆದೆ. ಓದಬೇಕು, ಶಾಸ್ತ್ರ ಅಧ್ಯಯನ ಮಾಡ್ಬೇಕು, ಆ ಭಗವಂತನನ್ನು ಹ್ಯಾಂಗ ಹಾಡ್ಬೇಕು, ಪಾಡ್ಬೇಕು ಅನ್ನೋ ಅರಿವಿಲ್ಲ ಅಜ್ಞಾನಿ ಇದ್ದೀನಿ ಅಂತ ಹೇಳ್ತಿದ್ದೆಲ್ಲಾ.

"ಹೌದ್ರಿ"

“ಈಗ ನಿನ್ನ ಕೈಯಾಗ ಆ ಜ್ಞಾನ ಭಂಡಾರ ಕೊಟ್ಟಾನ ಆ ಭಗವಂತ ಅದರೊಳಗೆ ಶಾಸ್ತ್ರ, ವೇದ, ಪುರಾಣಾ ಎಲ್ಲ ತುಂಬೇ. ನಿನ್ನ ಹಾಡಿನ ಮೂಲಕ ನೀ ಅದನ್ನ ಎಲ್ಲಾರಿಗೂ ಹಂಚಬೇಕಪಾ, ನೀ ಮೊದಲಿದ್ದಂಗ ಎಷ್ಟೋ ಜನ ಅಜ್ಞಾನಿಗಳಿರಬೇಕು. ಹರಿನ್ನ ಹ್ಯಾಂಗ ಸ್ತುತಿಸಬೇಕು ಅನ್ನೂ ಕಳವಳ ಅವರಿಗೂ ಇರಬೇಕು. ನೀ ಹಾಡಿನ ಮೂಲಕ ಅವರ ಮನಸ್ಸು ಮುಟ್ಟಬೇಕು ವೇಂಕಣ್ಣಾ. ನಿನ್ನ ಧ್ವನಿ ಅವರ ಧ್ವನಿಯಾಗ್ಬೇಕು, ನಿನ್ನ ಕೊರಳು, ಅವರ ಕೊರಳಾಗ್ಬೇಕು, ಅಂದ್ರ ನೀನು ಎಲ್ಲಾ ಕಡೆ ಜ್ಞಾನಪ್ರಸಾರ ಮಾಡಬೇಕು. ನಿನ್ನ ಕೀರ್ತನೆಗಳ ಮೂಲಕ ಹರಿಚರಿತ್ರೆ ಜನಕ್ಕೆ ತಾಕಬೇಕು. ಅವರೆಲ್ಲರ ಲೌಕಿಕ ಉದ್ಧಾರಕ್ಕೆ ಹಾದಿಯಾಗ್ಬೇಕು. ಇದೆಲ್ಲ ಆಗೂದು ನಿನಗೆ ಬೇಕಾಗಿಲ್ಲೇನು” ಎಂದರು ಶೀನಪ್ಪ.

“ಆದ್ರ ಇದೆಲ್ಲ ನನ್ನಿಂದ ಸಾಧ್ಯ ಎನ್ರಿ ತಾತಾ”

“ಮತ್ತ ಭಗವಂತ ನಿನಗ ಯಾಕ ಒಲಿದ ಹೇಳು ವೇಂಕಣ್ಣಾ. ಸಾಮಾನ್ಯ ಜನರ ಭಕ್ತಿಗೆ ಭಾವ ತುಂಬಬೇಕು ಅಂದ್ರ ನಿನ್ನ ಅನಂತ ಭಕ್ತಿ ಭಾವ ಶಬ್ದಗಳನ್ನು ತುಂಬಬೇಕು. ಆ ಶಬ್ದ ಅನಂತವಾಗಿ ಹಾಡಾಗಿ, ರಾಗ ಆಗಿ, ಧ್ವನಿಯಾಗಿ ಭಕ್ತರ ಮನಸ್ಸಿಗೆ ತಾಗಬೇಕು. ಆ ಭಾವ ಹರಿಗೆ ಸಮರ್ಪಣೆ ಆಗ್ಬೇಕು, ಅಲ್ಲ?”

“ಹೌದ್ರಿ”

“ಇಷ್ಟು ದಿನ ನೀ ಇಲ್ಲೆ ಕಳದಿ ಆತು. ಬೆಟ್ಟ, ಗುಡ್ಡ, ನದಿ, ನೀರು, ಗುಡಿ, ಪೌಳಿ ಅನಕೋತ ಆ ಶ್ರೀಹರಿನ್ನ ಕೊಂಡಾಡಕೋತ ಅವನ ನಾಮಕೀರ್ತನೆ ಕಟ್ಟಿ ಹಾಡಿದಿ. ಆ ಹಾಡು ಜನರ ಮನಕ್ಕೆ ತಟ್ಟಿದ್ದು ಅದರೊಳಗೆ ಭಕ್ತಿಭಾವ ಹುಟ್ಟಿಸಿತು. ನಿನ್ನ ಹಾಡಿನ ಮೂಲಕ ಅವರು ತಮ್ಮ ಭಕ್ತಿ, ದೇವರಿಗೆ ಅರ್ಪಿಸಿದ್ರು. ಅದು ಇಲ್ಲಿಗೆ ಈ ಪರಿಸರಕ್ಕ ಸೀಮಿತ ಆಗಬಾರ್ದು ವೇಂಕಣ್ಣಾ, ಅದು ನಾಲ್ಕು ದಿಕ್ಕಿಗೂ ಹಬ್ಬಬೇಕಲ್ಲ” ಎನ್ನುತ್ತಾ ಶೀನಪ್ಪಜ್ಜ ಅನನ್ಯ ಅಂತಃಕರಣದಿಂದ ತಂದೆಯ ಸ್ಥಾನದಲ್ಲಿ ನಿಂತು ಅವರ ಹೆಗಲ ಮೇಲೆ ಕೈಯಾಡಿಸಿದರು.

“ಇದನ್ನೇ ನಾ ಹೇಳಿದ್ದು ಅನ್ಕೋಬ್ಯಾಡಪಾ. .ಇದು ಆ ಶ್ರೀನಿವಾಸನ ಪ್ರೇರಣಾ ಅಂತ ತಿಳಿ. ಇಲ್ಲಾ ನನ್ನ ಬಾಯಿಂದ ಅವನೇ ಈ ಮಾತು ಆಡಿಸ್ತಾನಂತ ತಿಳಿ. ಎಷ್ಟಂದ್ರೂ ಅವನೇ ನಿನಗ ಅಂಕಿತ ಕೊಟ್ಟು ದಾಸ ದೀಕ್ಷಾ ಕೊಟ್ಟಾನೆಲ್ಲ” ಎಂದರೂ, ಸುತ್ತಲೂ ಕತ್ತಲು ಕವಿಯುತ್ತಿತ್ತು. ದೇವಸ್ಥಾನದ ಮುಂದೆ ಹಚ್ಚಿದ ದೀಪಗಳು ಎಲ್ಲ ಕಡೆ ಶಾಂತವಾದ ಬೆಳಕನ್ನು ತೂರಾಡುತ್ತಾ, ನಡೆದಿತ್ತು. ಎಲ್ಲಿಂದಲೋ ಬರುತ್ತಿದ್ದ ಒಂದು ಗುಂಪು ಭಕ್ತಿಯ ಅಮಲೇರಿದಂತೆ “ಗೋವಿಂದ, ಗೋವಿಂದ ಹರಿ ಗೋವಿಂದ” ಎಂದು ಚಪ್ಪಾಳೆ ತಟ್ಟುತ್ತಾ, ಭಕ್ತಿಯ ಅಮಲೇರಿದಂತೆ ಕುಣಿಯುತ್ತ ನಡೆದಿತ್ತು. . .ಶೀನಪ್ಪ ಕೂತಲ್ಲಿಂದ ಎದ್ದರು.

“ನಾ ಬರ್ಲೇನಪಾ ವೇಂಕಣ್ಣ, ಮತ್ತೆ ಮುಂಜಾನೆ ನಮ್ಮವರ ಜೋಡಿ ಬೆಟ್ಟ ಇಳಿದು ನಾವು ಮುಂದಿನೂರಿಗೆ ಹೋಗ್ಬೇಕು ವೇಂಕಣ್ಣಾ, ನೀ ದೊಡ್ಡ ಮನಶ್ಯಾ ಆಗ್ಬೇಕು. ನಾ ಎಲ್ಲಿ ಹೋಗ್ತೀನಿ ಅಲ್ಲೆ ನಿನ್ನ ಕೀರ್ತನಾ, ನಿನ್ನ ಭಕ್ತಿರಸದ ಹಾಡುಗಳನ್ನೇ ನಾ ಕೇಳೂಹಂಗ ಆಗ್ಬೇಕು. ಬಾಗಲಕೋಟಿಗೆ ಬಂದಿ ಅಂದ್ರೆ ಭೆಟ್ಟಿ ಆಗೂಣು” ಎನ್ನುತ್ತ, ಅವರು ಎದ್ದು ನಡೆದರು. ಕಾಲುಹಾದಿಯಲ್ಲಿ ಕಣ್ಮರೆಯಾದರು.



ದಾಸರು ಅವರು ಹೋಗುತ್ತಿದ್ದುದನ್ನು ನೋಡುತ್ತಿದ್ದವರು. ಅವರು ಮರೆಯಾದೊಡನೆ ದಿಗಂತದತ್ತ ಕಣ್ಣು ಹಾಯಿಸಿದರು. ಕೊನೆಯಿಲ್ಲದ ಆಕಾಶ ತಾನೇ ತಾನಾಗಿ ಮೇಲೆರುಗುತ್ತಿದ್ದ ಚಂದ್ರ. ಆ ಬೆಳಕಿನಲ್ಲಿ ಥಳ ಥಳಿಸುತ್ತ ನಿಂತ ಗುಡಿಯ ಗೋಪುರ. ಹೌದು ಭಗವಂತನ ಸೃಷ್ಟಿಯಲ್ಲಿ ಯಾವುದಕ್ಕೂ ಅಂತ್ಯವಿಲ್ಲ. ಯಾವುದಕ್ಕೂ ಸೀಮಿತವಿಲ್ಲ. ಅವನ ಕರುಣೆಯಲ್ಲಿ ನಿಸರ್ಗ ನಿರಂತರವಾಗಿ ಚಲಿಸುವ ಜೀವದ್ರವ್ಯ, ಜ್ಞಾನ ಕೂಡ ಅಷ್ಟೇ ಅಲ್ಲವೆ?

ಹಾಗಾದರೆ ಶೀನಪ್ಪ ತಾತಾ, ಹೇಳಿದಂತೆ ಈ ಭಗವಂತನ ಸಾನಿಧ್ಯಬಿಟ್ಟು ಹೋಗಬೇಕೆ? ಸಾಧ್ಯವಿದೆಯೆ ತನ್ನಿಂದ. ದೇವರೇ ನಿನ್ನನ್ನು ಅಗಲಿ ಹೋಗುವ ಶಕ್ತಿ ನನಗಿಲ್ಲ ನಿನ್ನಿಂದ ದೂರ ಹೋಗುವುದು ಕೂಡ ಸಾಧ್ಯವಿಲ್ಲ.

ರಾತ್ರಿ ಕೂಡ ಕಲ್ಲು ಮಂಟಪದಲ್ಲಿ ಮಲಗಿ ದಾಸರು ಅದನ್ನೇ ಯೋಚಿಸುತ್ತಿದ್ದರು. ಶೀನಪ್ಪ ಹೇಳಿದ್ದು ಸರಿಯೆ? ಇಲ್ಲಾ ತನ್ನ ನಿರ್ಧಾರ ಸರಿಯೆ? ಅತ್ತಿಗೆಯಿಂದಾಗಿ ಮನಸ್ಸು ರೋಸಿ, ಅವಮಾನ ಸಹಿಸಿ, ಆ ಊರಿನ ಋಣ ಮುಗಿಯಿತೆಂದು ಶ್ರೀಹರಿಯ ಪಾದ ನಂಬಿ ಬಂದವನು ತಾನು ತನ್ನಂಥ ಅಮಾಯಕನಿಗೆ ದಯೆ ತೋರಿ ವರದ ಹಸ್ತವನ್ನ ತನ್ನ ತಲೆಯ ಮೇಲಿಟ್ಟು ಅಮೃತದಂತೆ ಜ್ಞಾನವನ್ನು ಸುರಿಸಿದ ಆ ವೇಂಕಟರಮಣ. ಆಯಿತು ಅವನಿತ್ತ ಫಲವೇ ಅವನಿಗೆಂಬಂತೆ ದಿನ ದಿನಕ್ಕೆ ಅವನ ಅಗಾಧ ಮಹಿಮೆಗಳನ್ನು ಕೊಂಡಾಡುವ ಕೀರ್ತನೆಗಳನ್ನು ತನ್ನ ನಾಲಿಗೆಯಿಂದ ನುಡಿಸಿದ. ನುಡಿಯುತ್ತಿದ್ದೆ ತಾನು

“ನಿನ್ನ ಮಹಿಮೆಗಳೆಲ್ಲ ನೀನೆ ಬಲ್ಲೆಯಯ್ಯ
ಚಿನ್ಮಯ ಗರುಡಗಿರಿ ಮಾನ್ಯ ತಿಮ್ಮಯ್ಯ

ಖರೇ ಎಂಥಹ ಮಹಿಮೆ ಅವನದು. ಮನುಜ ಮಾತ್ರದವರು ಏನು ಬಲ್ಲವರು, ಅವನಿಗೆ ಗೊತ್ತು ಅವನಾಡುವ ಆಟ

“ವೈಕುಂಠ ಮಂದಿರದಿ, ಮುಕುತ ರೊಂದಿತ ಮಹಿಮೆ
ಗೋಕುಲದಿ ಗೊಲ್ಲರಾಕಳ ಕಾಯ್ದ ಮಹಿಮೆ
ಅನೇಕ ಜಾಂಡದಿ ಪೂರ್ಣವಾಗಿ ತೋರಿದ ಮಹಿಮೆ
ಪ್ರಸನ್ವೇಂಕಟಾದ್ರಿಯ ಮ್ಯಾಲೆ ಮೆರೆವ ಮಹಿಮೆ

ಅವನ ಮಹಿಮೆ ಕೊಂಡಾಡುವದೆಂದರೆ ತನ್ನ ದೇಹವೆಲ್ಲ ನಾಲಿಗೆಯೇ ತಾನು ನುಡಿದ ಕೀರ್ತನೆಗಳನ್ನು ಸುತ್ತಲಿನ ಭಕ್ತ ಜನ ಕೇಳಿದರು. ಆನಂದಿಸಿದರು, ಅದನ್ನು ತಾವು ಪುನರುಚ್ಚರಿಸಿದರು. ತನ್ನ ಧ್ವನಿಯಾದರೂ ರಾಗವಾದರೂ ಶಬ್ದಗಳಾದರೂ ಅದನ್ನು ಕೇಳುತ್ತ ಆ ದಿವ್ಯಮಯ ಆನಂದವನ್ನು ತಾನು ಅನುಭವಿಸುತ್ತಿದ್ದೇನೆ.

ದಿನ ಬೆಳಗಾದರೆ ದೇವರ ಮುಂದೆ ನಿಂತು, ಆ ನಯನ ಮನೋಹರ ಮೂರ್ತಿಯನ್ನು ಕಣ್ತುಂಬ ನೋಡುತ್ತ ಲೋಕದ ಪರಿಜ್ಞಾನ ಇಲ್ಲದಂತೆ ನಿಂತುಬಿಡುತ್ತೇನೆ. ಇಲ್ಲಿಂದ ದೂರವಾಗಿ ಇಂಥಹ ಆನಂದವನ್ನು ತಾನು ಕಳೆದುಕೊಳ್ಳಬೇಕೆ? ಆ ನನ್ನಪ್ಪನಿಂದ ನಾನು ಹೇಗೆ ದೂರವಾಗಲಿ. ತನ್ನ ಅಂತರಂಗ ಧ್ವನಿಯಾಗಿ ಕೂಗುತ್ತಲೇ ಇರುತ್ತದೆ.

“ಬಿಡಲಾರೆ ಬಿಡಲಾರೆ ನಿನ್ನ ಅಡಿದಾವರೆಯ
ಕೊಡು, ಕಂಡ್ಯ ಅಭಯ ವಿಡಿದೆಮ್ಮಯ ತಂದೆ
ಕೂಗುವೆ ಮನದಣಿಯೇ ಕೃಪಾಸಾಗರನೆಂದ್ಹೆಳಿ
ಕೂಗಿದರೊದಗಿ ನಾಗನ್ನ ಕೇಳಿ ತಂದೆ.
ಹೌದು ತಂದೆ ನಿನ್ನನ್ನು ಬಿಟ್ಟು ಹೋಗಲಾರೆ ಎನ್ನುವ ಮನದ ಕೂಗು.

ಹುಚ್ಚಾ ಇದೇ ಎನು ನಿನ್ನ ಜ್ಞಾನ ವೇಂಕಣ್ಣಾ. ನಿನ್ನನ್ನು ತನ್ನ ಕರುಣೆಗೆ ಸೇರಿಸಿಕೊಂಡ ದೇವರು ನಿನ್ನಿಂದ ದೂರವಾಗುತ್ತಾನೆಯೆ? ನಿನ್ನ ಅಂತರಂಗಕ್ಕೆ ಸೇರಿಹೋದವನಲ್ಲವೆ ಅವನು? ಎಲ್ಲಿ ತೆಗೆ ನಿನ್ನ ಆತ್ಮದ ಕಣ್ಣನ್ನು. ಅಂತರಂಗದ ದೃಷ್ಟಿಯನ್ನು ಅವನು ನಿನ್ನೊಳಗೆ ಇದ್ದಾನೆ ವೇಂಕಣ್ಣ. ನೀನು ಎಲ್ಲಿದ್ದಿಯಾ ನೀನು ಕರೆದಾಗ ನಿನ್ನ ಮುಂದೆ ಬರುತ್ತಾನೆ. ಈ ಸತ್ಯವನ್ನು ನೀನು ತಿಳಿದರೆ ಮಾತ್ರ ಭಗವಂತ ನಿನ್ನಿಂದ ದೂರವೆಂದು ನಿನಗೆ ಅನಿಸುವುದೇ ಇಲ್ಲ.

ಎಷ್ಟೊಂದು ಸಲ ಹಾಗೆಂದುಕೊಂಡರು ಯಾಕೋ ದಾಸರಿಗೆ ಅಲ್ಲಿಂದ ಹೋಗಲು ಕಾಲು ಕಿತ್ತುತ್ತಲೇ ಇಲ್ಲ. ತನ್ನ ಜೀವನದ ಕ್ಷಣ ಕ್ಷಣಗಳು ಅಮೂಲ್ಯವಾಗಬೇಕೆಂದರೆ ಇಲ್ಲಿಯೇ ಈ ಭಗವಂತನ ಸನ್ನಿಧಿಯಲ್ಲಿಯೇ ಆಯುಷ್ಯ ಕಳೆಯುವುದರಲ್ಲಿ ಸಾರ್ಥಕ ವೆನಿಸುತ್ತಿತ್ತು.

ದಿನಗಳ ಮೇಲೆ ದಿನಗಳು ಉರುಳಿದವು.

ಶೀನಪ್ಪ ತಾತಾನ ಮಾತು ಆಗಾಗ ನೆನಪಾಗುತ್ತಿದ್ದರೂ ಮನಸ್ಸು ಮಾತ್ರ ಅಲ್ಲಿಂದ ಹೋಗಲು ಸಾಧ್ಯವೆ ಇಲ್ಲವೆನ್ನುವಂಥಹ ಸ್ಥಿತಿಯಲ್ಲಿತ್ತು. ಮಗು ತಾಯಿಯಿಂದ ಎಂದಾದರೂ ದೂರವಾಗಲು ಸಾಧ್ಯವೆ? ಅವನ ಸಾನಿಧ್ಯವೇ ತಾಯಿಯ ಮಡಿಲು. ಇಲ್ಲಿಯೇ ಅವನ ದಿವ್ಯಪಾದಗಳಲ್ಲಿ ಸರ್ವಸ್ವವನ್ನು ಕಂಡವನು ತಾನು. ತನ್ನ ಬದುಕಿನ ಗತಿ ಬದಲಾದದ್ದು ಇಲ್ಲಿಯೆ. ಇನ್ನು ಇಲ್ಲಿಯೇ ತನ್ನ ಜೀವನ ಕಳೆಯಬೇಕು ಎನ್ನುವ ಭಾವದಲ್ಲಿ ದಾಸರು ದಿನಗಳನ್ನು ದೂಡುತ್ತಿದ್ದರು. ಸದಾ ಸರ್ವದಾ ಅವನ ಧ್ಯಾನದಲ್ಲಿ ಮುಂದಿನ ಕಲ್ಲುಮಂಟಪದಲ್ಲಿ ಕೂತು ಹರಿಯ ಚಿತ್ತ ಅವನ ಪ್ರೇರಣೆಯಿಂದ ಬಂದ ಅವನದೇ ಕೀರ್ತನೆಗಳನ್ನು ಬರೆಯುತ್ತಿದ್ದರು. ಬರೆದದ್ದನ್ನು ಗೆಜ್ಜೆ ಕಟ್ಟಿಕೊಂಡು ಹಾಡುತ್ತ ಕುಣಿಯುತ್ತಿದ್ದರು. ಭಕ್ತಜನ ಕೂಡ ಅವರ ತಾಳಕ್ಕೆ ತಕ್ಕಂತೆ ತಾವು ಭಕ್ತಿಪರವಶರಾಗಿ ಅವರು ಕಟ್ಟಿದ ಪದಗಳನ್ನು ಕೇಳುತ್ತ ಅವರನ್ನು ಅನುಸರಿಸುತ್ತಿದ್ದರು.

“ಶ್ರೀವೆಂಕಟೇಶಾ ಸಲಹು ವೆಂಕಟೇಶ
ಭಾವಿಕ ಸೇವಕ ಭವಭಯ ನಾಶಾ
ಸುರಾರಿ ಗಜಗಳೆಂಬ ಗಣಕೆ ಕಂಠೀರವ
ಕಲಿರಾಜ ಸಂಕಟ ಭಿತ್ತ ದೇವಾ
ಪರಮ ಭಾಗವತರ ಸಮೂಹ ಸಂಜೀವನ
ಸುರಹರ ಮತ್ತಾವೃತಾ ಸುರಮಥನ



ಒಂದೆ, ಎರಡೆ, ಎಂಥೆಂಥಹ ಕೀರ್ತನೆಗಳು. ಅವರ ಅಂತರಂಗದ ಭಕ್ತಿ ಸಮುದ್ರದಿಂದ ಅಲೆಯ ತರಂಗಗಳಂತೆ ಬರುತ್ತಿದ್ದವು. ಬಂದು ಜನ ಮನ ತಟ್ಟುತ್ತಿದ್ದವು.

ಯಾರೋ ಬರುತ್ತಿದ್ದರು. ಅವರ ಕಾಲಿಗೆ ಬೀಳುತ್ತಿದ್ದರು. ತಮ್ಮ ಕಷ್ಟಗಳನ್ನು ಹೇಳಿಕೊಳ್ಳುತ್ತಿದ್ದರು. ನಂಬಿದರೆ ಪರಮಾತ್ಮ ನಂಬಿ. ಅಪ್ಪ ವೆಂಕಟೇಶ ಭವಸಾಗರವ ದಾಟಿಸುವ” ಎಂದು ಕಷ್ಟದಲ್ಲಿರುವವರುಗೆ ಸಂತೈಸುತ್ತಿದ್ದರು. ಬರು ಬರುತ್ತಾ ಸೂತ್ತ ಜನ ಹೆಚ್ಚಾಗುತ್ತಿದ್ದಂತೆ.

“ಎನು ಇದು ದೇವ, ಮತ್ಯಾಕೆ ಈ ಭವ–ಬಂಧನದ ಮೋಹ ನನಗೆ ಏಕಾಂತ ಬೇಕು. ನಿನ್ನ ಸೇವೆ, ನಿನ್ನಧ್ಯಾನ ಒಂದೇ ನನ್ನ ಬದುಕಿನ ಸಾಧನೆ ದೇವ” ಎನ್ನುತ್ತಿದ್ದರು. ಆಗಾಗ ಶೀನಪ್ಪ ಹೇಳಿದ ಮಾತುಗಳು, ನೆನಪಾಗುತ್ತಿದ್ದರೂ ಯಾಕೋ ಅದನ್ನಷ್ಟು ಮನಸ್ಸಿಗೆ ಹಚ್ಚಿಕೊಳ್ಳು ಸಾಧ್ಯವಾಗಲಿಲ್ಲ. ಆ ಊರು ಆ ಬಂಧನಗಳೆಲ್ಲ ಬೇಡವೆಂದೇ ಬಂದವನಲ್ಲವೆ? ಮತ್ಯಾಕೆ ಬಂದ ದಾರಿಯಿಂದ ತಿರುಗಿ ಹೋಗುವುದು. ವೇಂಕಪ್ಪನ ಸಾನಿಧ್ಯಬಿಟ್ಟು ತನಗೆ ಬೇರೆ ಸಾನಿಧ್ಯ ಬೇಡ ಎನ್ನುವಷ್ಟು ಮನಸ್ಸು ಅಚಲ ನಿರ್ಧಾರ ಮಾಡಿತ್ತು.

ಆದರೆ ಶ್ರೀ ಹರಿಯ ಇಚ್ಛೆಯೇ ಬೇರೆ ಇರಬೇಕು. ತಾನು ಅಂಕಿತ ಕೊಟ್ಟು ಹರಿಸಿದ ವೇಂಕಣ್ಣನ ಜ್ಞಾನ ಭಂಡಾರ ನಾಲ್ಕು ಕಡೆ ಹಂಚಬೇಕೆಂದಿರಬೇಕು. ಇಷ್ಟಕ್ಕೆ ಅವನ ಜೀವನದ ಧ್ಯೇಯ ಸೀಮಿತವಾಗಬಾರದು.

ಹೀಗೆಯೇ ಒಂದು ರಾತ್ರಿ ದಾಸರು ಕಲ್ಲುಮಂಟಪದಲ್ಲಿ ಮಲಗಿದದರು. ಬೆಟ್ಟದ ಮೇಲನ ತಂಪುಗಾಳಿನ್ನು ಹಿಡಿದು ತಂದು ಚೆಲ್ಲುತ್ತಿತ್ತು. ಆಗಸದಲ್ಲಿ ಚಂದ್ರ ಮೇಲೇರುತ್ತ ನಡೆದಿದ್ದ. ದೂರದಲ್ಲಿ ಕಾಣುವ ದೇವಸ್ಥಾನದ ಗೋಪುರದಹೊಳಪು. ಚಂದ್ರನಿಗೆ ಸಾಟಿ ಎಂಬಂತೆ ಬೆಳಗುತ್ತಿತ್ತು. ಹಿತವಾದ ತಂಪುಗಾಳಿಗೆ ದಾಸರಿಗೆ ನಿಧಾನವಾಗಿ ಕಣ್ಣು ಮಚ್ಚುತ್ತಿದ್ದವು. ಗಾಳಿಜೋಗುಳ ಹಾಡಿದಂತೆ ನಿದ್ದೆಯ ಮಂಪರಿಗೆ ಜಾರುವ ವೇಳೆ.

ಯಾರದೋ ಧ್ವನಿ ಬಡಿದೆಬ್ಬಿಸಿದಂತಾಯ್ತು.

“ವೇಂಕಣ್ಣ ಏಳು, ನೀನು ಇರಬೇಕಾದ ಜಾಗ ಇದೊಂದೇ ಅಲ್ಲ ಮಗೂ, ಹೊರಡು ನಿನ್ನ ಕೈಗೆ ಜ್ಞಾನ ಭಂಡಾರ ಕೊಟ್ಟದ್ದು ಯಾಕೆ? ಜನಕ್ಕೆ ಹಂಚಲಿ ಎಂದಲ್ಲವೆ? ನಿನ್ನ ಕೈಗೆ ತಾಳ, ತಂಬೂರಿ, ಕೊಟ್ಟು ದಾಸದೀಕ್ಷೆ ಕೊಟ್ಟದ್ದು ಯಾಕೆ. ದಾಸದೀಕ್ಷೆ ಎಂದರೆ ದೇಶಸಂಚಾರ ಮಗೂ, ಜನರಲ್ಲಿ ಧರ್ಮ ಶ್ರದ್ಧೆ, ಭಕ್ತಿಮಾರ್ಗ ತೋರಿಸುವುದು ಹರಿದಾಸರ ಹೊಣೆ. ನಿನ್ನಿಂದ ಧರ್ಮದ ಪ್ರಸಾರವಾಗಬೇಕು. ಭಕ್ತಿಪಂಥ ಉದ್ದಾಮಮಟ್ಟಕ್ಕೆ ಬರಬೇಕು. ನಿನ್ನ ಮುಕ್ತಿ ಮಾರ್ಗಕ್ಕೆ ಜನರನ್ನು ಕರೆದು ತರುವ ಕರ್ತವ್ಯ ಕೂಡಾ ನಿನ್ನದು. ಹೊರಡು ಎಲ್ಲಿಂದ ಬಂದೆಯೋ, ಅಲ್ಲಿಗೆ ಹೋಗಿ ಸಾಧನೆ ಮಾಡು” ಎಂದಂತಾಯ್ತು. ಎಷ್ಟು ಸ್ಪಷ್ಟವಾಗಿ, ಎಷ್ಟೆಷ್ಟು ಸ್ವಚ್ಛವಾಗಿ ಎಂಥಹ ಅಪ್ಪಣೆಯಂತಃ ಧ್ವನಿ. ಆ ಧ್ವನಿ ಎಲ್ಲಿ ಕೇಳಿದ್ದೆ ತಾನು? ಹೌದು ನಮ್ಮಪ್ಪ ವೆಂಕಟೇಶನ ಧ್ವನಿಯ ಅಲ್ಲವೆ? ಭಗವಂತಾ, ಅಂಥಹ ಚಳಿಯಲ್ಲೂ ಬೆವರಿದಂತಾಗಿ ಎದ್ದು ಕುಳಿತರು ದಾಸರು. ಇದು ಕನಸೊ? ಭ್ರಮೆಯೊ? ಸತ್ಯವೊ? ಧ್ವನಿ ಸ್ಪಷ್ಟವಾಗಿ ಕೇಳಿಸಿದ್ದಂತೂ ನಿಜ. ಎದುರು ಕುಳಿತು ಮಾತನಾಡಿದಂತೆ ಅಪ್ಪಣೆ ಕೊಟ್ಟಂತೆ.

ಖರೇ, ಅವನ ಅಪ್ಪಣೆ, ಅಪ್ಪಣೆಯೇ ಅಲ್ಲವೆ?

ಹಾಗಾದರೇ ಭಗವಂತ ತನಗೆ ಇಲ್ಲಿಂದ ಹೋಗಲು ಅಪ್ಪಣೆ ಕೊಟ್ಟನೆ? ಅವನ ಸನ್ನಿಧಿ ತನಗಿನ್ನು ದೂರವೆ?

ಹುಚ್ಚಪ್ಪಾ ಅವನೇ ನಿನ್ನೊಳಗಿರುವಾಗ ಅವನಿಂದ ನೀನು ಹೇಗೆ ದೂರವಾಗುತ್ತಿ? ಎಂದಿದ್ದರು ಶೀನಪ್ಪ. ಖರೇ, ದೇವರೇ ಅವರಿಂದ ತನಗೇ. ಮೊದಲೇ ಪರೋಕ್ಷವಾಗಿ ಅಪ್ಪಣೆ ಕೊಡಿಸಿದ್ದನೆ? ತನ್ನ ನಿರ್ಧಾರ ದೃಢವಾಗದಾಗ ಈಗ ತಾನೇ ಬಂದು,

ಧನ್ಯನಾದೆ ದೇವ, ನಿನ್ನ ಅಪ್ಪಣೆಗೆ ತಲೆಬಾಗಿ ನಡೆಯುತ್ತೇನೆ. ನೀನು ನನಗೆ ದಯಪಾಲಿಸಿದ ಜ್ಞಾನವನ್ನು ಧರ್ಮಸಾರದ ತತ್ವವನ್ನು ನನ್ನ ಯೋಗ್ಯತೆಗೆ ಸಂದಂತೆ ನೀನು ಪ್ರೇರಣೆ ಮಾಡಿದಂತೆ ನಿನ್ನ ಕೀರ್ತನೆಗಳ ಮೂಲಕ ಪ್ರಸಾರ ಮಾಡುತ್ತೇನೆ. ಎನ್ನುತ್ತ ದಾಸರು ಕಣ್ಮುಚ್ಚಿಕೊಂಡು ಆ ಧ್ವನಿಯ ಮನನ ಮಾಡಿಕೊಳ್ಳುತ್ತ ಕುಳಿತೆ ಇದ್ದರು. ನಿದ್ದೆ ಇನ್ನು ಹತ್ತಿರ ಸುಳಿಯುವುದಿಲ್ಲ. ಮುಚ್ಚಿದ ಕಣ್ಣುಗಳ ಮುಂದೆ ಆ ಜಗನ್ನಿಯಾಮಕ ತಂದೆ. ನಿನ್ನ ಹತ್ತಿರವೇ ಇದ್ದೇನೆ ವೇಂಕಣ್ಣ ಎಂಬಂತೆ ತೋರುತ್ತಿತ್ತು. ಎಲ್ಲ ಅವನ ಇಚ್ಛೆ. ಎಲ್ಲ ಅವನ ಪ್ರೇರಣೆ ನೀನು ನುಡಿದ ಹಾಗೇ ನಾನು ನಡೆವೆ ಪ್ರಭು ಎನ್ನುತ್ತ ದಾಸರು ಧ್ಯಾನದಲ್ಲಿದ್ದಂತೆ ಕೂತೇ ಇದ್ದರು.

ದೂರದಲ್ಲಿ ರಾತ್ರಿ ದೇವರ ಸೇವೆ ಸುರುವಾಗುವ ವೇಳೆಯೆಂದು ಗುಡಿಯ ಗಂಟೆಗಳ ನಿನಾದ ಮಂಗಳವಾದ್ಯಗಳಂತೆ ಕೇಳಿಸುತ್ತಿತ್ತು. ಮರುದಿನ ದಾಸರು ಮುಂಜಾನೆ ನಸುಕಿನಲ್ಲಿ ಎದ್ದು ಸ್ವಾಮಿ ಪುಷ್ಕರಣಿಯಲ್ಲಿ ಮುಳುಗಿ, "ನನ್ನ ಕಷ್ಟ ಪಾಪಗಳನ್ನು ಕಳೆದು ಆ ದಿವ್ಯಸನ್ನಿಧಿಗೆ ಕರೆದೊಯ್ದು ಪವಿತ್ರನನ್ನಾಗಿ ಮಾಡಿದ ಜಲ ಇದು. ಮತ್ತ, ಮತ್ತ ಆ ದಿವ್ಯ ಪಾದದ ದರ್ಶನ ಕೊಡು ತಾಯಿ" ಎಂದು ಸ್ನಾನ ಮಾಡಿ, ಅನ್ಹೈಕೃಗಳನ್ನು ಮುಗಿಸಿ ದೇವಸ್ಥಾನದೊಳಗೆ ಬಂದು ದೇವನ ಸನ್ನಿಧಿಗೆ ಬಂದು ನಿಂತರು.

ಒಂದು ಗಳಿಗೆ, ಎರಡು ಗಳಿಗೆ ಊಹುಂ ಆ ಭಗವಂತನ ಮೂರ್ತಿಯಲ್ಲಿ ನೆಟ್ಟ ಕಣ್ಣುಗಳಿಗೆ. ಬೇರೆ ಎನನ್ನೂ ನೋಡಲಾರೆ ಎನ್ನುವಷ್ಟರ ಮಟ್ಟಿಗೆ ಅವನಲ್ಲೇ ಲೀನವಾಗಿವೆ. ಎಂಥಹ ಸುಂದರ, ಮನೋಹರ ಮೂರ್ತಿ ಮೂರ್ತಿಯೆ? ಊಹುಂ ವೈಕುಂಠ ಬಿಟ್ಟು ಸ್ವತಃ ಬಂದು ನಿಂತವನಲ್ಲವೆ? ಮೂರ್ತಿ ಹೇಗಾದೀತು?

ಎನು ಅಲಂಕಾರ, ಎನು ವೈಭವ, ಅವನ ಮೋಹಕ ರೂಪದ ಮುಂದೆ ವಜ್ರದ ಕಿರೀಟ ಸಮವೆ?

ಭಗವಂತ ಮೊದಲು ನಿನ್ನನ್ನು ಸ್ತುತಿಸಲು ವರ್ಣಿಸಲು ನನಗೆ ಶಬ್ದಗಳು ಗೊತ್ತಿರಲಿಲ್ಲ. ಈಗ ವರ್ಣಿಸಿ ಸ್ತುತಿಸಬೇಕೆಂದರೆ ಶಬ್ದಗಳು ಸಾಲದಲ್ಲ ಪ್ರಭು. ಹೇಗೆ ವರ್ಣಿಸಲಿ ನಿನ್ನ ಈ ಮನೋಹರ ಮೂರ್ತಿಯನ್ನು ಸ್ವಾಮಿ ಹ್ಯಾಗೆ ಬಿಟ್ಟು ಹೊಗಲಿ. ನಿನ್ನ ಈ ದಿವ್ಯ ಸಾನಿಧ್ಯವನ್ನು ಎನ್ನುತ್ತ ದಾಸರ ಕಣ್ಣುಗಳಲ್ಲಿ ನೀರಿಳಿಯುತ್ತಿವೆ. ಅವರ ಬಾಯಿಂದ ಬರುತ್ತಿವೆ ಅವನ ವರ್ಣನೆ.

"ಸಲಹು ವೇಂಕಟರಮಣ ದಯಾಂಬುಧಿ
ಸಲಹು ವೇಂಕಟರಮಣ ॥ಪ॥



ಮಸ್ತಕದೊಳುಪ್ಪವ ಮಾಣಿಕ ಮುಕುಟದ
ಕಸ್ತೂರಿನಾಮದ ಚೆಲುವಾ
"ವಿಸ್ತರ ಕದಲಿಪಿ ಹೊಳೆವ ಕುಂಡಲ ಪ್ರಾ
ಶಸ್ತವದನ ಜಗಜೀವಾ, ॥೧॥

ಮುತ್ತಿನ ಸರ ಸರಪಳಿ ಭುಜ ಕೀರ್ತಿಯೂ
ಎತ್ತಿದ ಶಂಖಾರಿ ಪಾಣೆ
ರತ್ನುನ ಮೇಲೊಡ್ಯಾಣ ಕಂಕಣ ಮುದ್ರಿ
ವತ್ತೆ ಅಭಯ ವರದನೆ"

ದಾಸರ ಬಾಯಿಂದ ಹರಿಯ ವರ್ಣನೆ ಎಷ್ಟು ಸಲಲಿತವಾಗಿ ಬರುತ್ತಿದೆ. ಅವನ ವೈಭವಕ್ಕೇನು ಕಡಿಮೆ. ಲಕ್ಷ್ಮೀಪತಿ ಅಲ್ಲವೆ? ಶ್ರೀದೇವಿಯನ್ನೆ ಹೃದಯದಲ್ಲಿ ಧರಿಸಿಕೊಂಡವನು

"ಅಗರು ಚಂದನ ಕಪ್ಪೂರ ಕೇಶರ ಸುರ
ಭಿಗಳಿಗೆ ಅತಿಪ್ರಿಯ ಅಂಗ
ಮಘ ಮಘಿಸುವ ಮಲ್ಲಿಗೆ ಸಂಪಿಗೆ ಮಾ
ಲೆಗಳ ಪ್ರಸನ್ವೇಂಕಟ ರಂಗಾ"

ಅವರ ಕಣ್ಣೀರಿನ ಅಭಿಷೇಕದೊಡಗೇ ಅವರ ಸ್ತುತಿ ಮುಗಿಯುತ್ತಿದ್ದಂತೆ ಅರ್ಚಕರು ಬಂದು ನಿಂತರು.

"ತಾವು ತಿರುಗಿ ಹೋಗುವಿರಂತೆ"

"ಹೌದು ಸ್ವಾಮಿ ಹಾಗೆಂದು ಸ್ವಾಮಿಯ ಅಪ್ಪಣೆಯಾಗಿದೆ. ತಾಳ, ತಂಬೂರಿ, ಅವನೇ ಕರುಣಿಸಿದ್ದು, ದಾಸದೀಕ್ಷೆಯಾದ ಮೇಲೆ ಸಂಚಾರ ಮಾಡಿ ತಾನು ಕೊಟ್ಟ ಜ್ಞಾನವನ್ನು ಪ್ರಚಾರ ಮಾಡು ಎಂದು ಅವನ ಅಪ್ಪಣೆಯಾಗಿದೆ"

"ನಿಜ ಸ್ವಾಮಿಯ ಅಪ್ಪಣೆ ಜಗತ್‌ಕಲ್ಯಾಣದೊಂದು ಆದೇಶ ಅದನ್ನು ಪಾಲಿಸುವುದು ನಮ್ಮ ನಿಮ್ಮ ಧರ್ಮ. ಆದರೂ ತಾವು ಗಿರಿಗೆ ಬಂದ ಮೇಲೆ ತಮ್ಮಂಥವರ ಸಂಪರ್ಕದಲ್ಲಿ ಭಗವದ್ಭಕ್ತರು ನಿಮ್ಮ ನಾಮ ಕೀರ್ತನೆಗಳ ಸವಿಯನ್ನು ಕಂಡವರು. ನೀವು ತಿರುಗಿಹೋದರೆ, ಎನೋ ಒಂದು ಅಮೂಲ್ಯ ವಸ್ತು ನಮ್ಮಿಂದ ದೂರವಾಗುವ ಕ್ಲೇಷ ನಮಗೆ.

"ಅದು ಅವನ ಇಚ್ಛೆ ಸ್ವಾಮಿ ಮತ್ತೆ ಕರೆಸಿಕೊಂಡಾಗ ಬರುತ್ತೆನೆ ಎಂದು ದಾಸರು ಕೈ ಮುಗಿದು ತಂಬೂರಿಯ ತಂತಿಯನ್ನು ಶೃತಿ ಮಾಡುತ್ತ ದೇವಸ್ಥಾನದಿಂದ ಹೊರಬಂದು, ತಲೆ ಮೇಲೆತ್ತಿ ಗೋಪುರಕ್ಕೆ ಕೈಮುಗಿದು ಊರಿನ ಹಾದಿ ಹಿಡಿದರು.

ಹುಟ್ಟಿದೂರಿಗೆ ಹೋಗುವುದಂತೂ ಖಚಿತವಾಗಿತ್ತು. ಆದರೂ ಹೋಗುತ್ತ, ಹೋಗುತ್ತ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸುತ್ತ ಮಹಾತ್ಮರ ದರ್ಶನ ತೆಗೆದುಕೊಳ್ಳುತ್ತ ಅವರ ಅನುಗ್ರಹದೊಂದಿಗೆ ಹೋಗುವುದೇ ಸರಿಯೆಂದು ದಾಸರು ಮುಳಬಾಗಿಲು, ಹಂಪಿ, ಮಂತ್ರಾಲಯ,

ಕ್ಷೇತ್ರಗಳಿಗೆ ಸಂಚಾರ ಮಾಡುತ್ತ ಬಂದರು. ಪುಣ್ಯಕ್ಷೇತ್ರ ಮಂತ್ರಾಲಯ ಮಹಾಮಹಿಮರಾದ ಶ್ರೀ ರಾಯರ ಬೃಂದಾವನದ ಮುಂದೆ ನಿಂತರೆ, ದಾಸರಿಗೆ ಏನೋ ಒಂದು ರೋಮಾಂಚನ, ತುಂಗಾನದಿಯಲ್ಲಿ ಸ್ನಾನ ಮಾಡಿ, ಮಂಚಾಲೆಮ್ಮನ ದರ್ಶನ ಮಾಡಿ, ರಾಯರ ವೃಂದಾವನ ಮುಂದೆ ನಿಂತರೆ ಜೀವನ ಪಾವನವಾಯಿತು ಎನ್ನುವಷ್ಟು ಮನಸ್ಸು ನಿರ್ಮಲಗೊಂಡಿತ್ತು. ಮಂತ್ರಾಲಯ ಪ್ರಭು ಇವತ್ತೆ ನಿಮ್ಮ ದರ್ಶನದಿಂದ ಸಾನಿಧ್ಯದಿಂದ ಧನ್ಯ ಆದೆ. ಆ ಶ್ರೀಹರಿಯನ್ನೇ ಒಲಿಸಿದವರಲ್ಲವೆ ನೀವು ? ಇಡಿ ವೇದ ಸಾಮ್ರಾಜ್ಯವನ್ನು ಆಳಿದವರು. ಸರಸ್ವತಿಯ ವರಪುತ್ರರು. ಜಗತ್ತಿನ ಕಲ್ಯಾಣಕ್ಕಾಗಿ ಅವತರಿಸಿ ಬಂದವರು. ಸ್ವಾಮಿ ಅಂಥ-ಪಾಂಡಿತ್ಯ-ಜ್ಞಾನಾ ದಯಪಾಲಿಸಿ ನನ್ನೂ ಧನ್ಯ ಮಾಡ್ರಿ. ಎಂದು ಅನನ್ಯ ಭಕ್ತಿಯಿಂದ ಬೇಡಿದರು ಮನಸ್ಸು ತೃಪ್ತಿಯಾಗುವವರೆಗೆ ಮಂತ್ರಾಲಯದಲ್ಲಿದ್ದು ಸೇವೆ ಮಾಡಿದರು.

"ಇದು ನನ್ನ ಸೌಭಾಗ್ಯ. ಇಂಥವರ ದರ್ಶನ ಸೇವೆ ಸುಲಭವಾಗಿ ಸಿಗುವದುಂಟೆ ಎನಿಸಿತು. ನಸುಕಿನಲ್ಲಿಯೇ ತುಂಗೆಯಲ್ಲಿ ಮಿಂದು ಬೃಂದಾವನದ ಮುಂದೆ ಬಂದು ನಿಂತಾಗ ಶ್ರೀಗುರುಗಳು ಯೋಗನಿದ್ರೆಯಲ್ಲಿ ಇದ್ದಂತೆ ಕಂಡಿರಬೇಕು. ನಿರ್ಗಳವಾಗಿ ದಾಸರ ಬಾಯಿಂದ ಇಂಪಾಗಿ ಬಂದಿತ್ತು. ಕೀರ್ತನೆ, ತಂಬೂರಿಯ ಶೃತಿ ಮಿಡಿಯುತ್ತ ಹಾಡಿದರು.

"ಏಳು ಶ್ರೀ ಗುರುರಾಯ ಬೆಳಗಾಯಿತಿಂದು
ಧೂಳಿದರ್ಶನ ಕೊಡಿರಿ ಈವೇಳೆ ಶಿಷ್ಯರಿಗೆ ॥ಪ॥
ಏಳು ಗುರುರಾಘವೇಂದ್ರ ಏಳು ದಯಾಗುಣಸಾಂದ್ರ
ಏಳು ಕುಮುದಕೆ ಚಂದ್ರ ಶ್ರೀರಾಘವೇಂದ್ರ"

ಮನಸ್ಸಿನ ನಿರ್ಮಲ ಅನನ್ಯ ಭಕ್ತಿ ಹೃದಯದ ಧ್ವನಿಯಾಗಿ ಹೊರಹೊಮ್ಮುತ್ತಿತ್ತು. ಕಳೆದ ನಾಕುದಿನದಲ್ಲಿ. ಒಂದು ಬೆಳಗಿನ ಝಾವ ದಾಸರು ಬೃಂದಾವನದ ಮುಂದೆ ನಿಂತು ಅದೇ ಅನನ್ಯ ಭಾವದಿಂದ ಹಂಬಲಿಸಿ ಹಾಡುತ್ತಿದ್ದರು.

ಆಶೆಗೊಳಗಾದೇನೊ ಹೇಸಿಮನುಜನು ನಾನು
ಕ್ಲೇಶ ಭವಸಾಗರದೊಳೀಸುತಿಹೇನೊ
ಎಸುಜನ್ಮದಿ ಎನ್ನ ಗಾಸಿಮಾಡಿದಿ ಮುನ್ನ
ದಾಸನಾಗುವೆ ತೋರೊ ಪ್ರಸನ್ವೇಂಕಟ ॥

ಕಣ್ಮುಚ್ಚಿ ಹಾಡುತ್ತಿದ್ದಾರೆ ದಾಸರು. ಹಂಬಲಿಕೆಯಿಂದ ಹರಿದ ಕಣ್ಣೀರು. ಕರಗಲಾರರೇ ಆ ಮಹಾನುಭಾವರು "ಮಗೂ ಪ್ರಸನ್ವೇಂಕಟ" ಯಾರೋ ಕೂಗಿದಂತಾಗಿ ನೋಡುತ್ತಾರೆ. ಬೃಂದಾವನದ ಬೆಳಕಿನ ಪ್ರಭಾವಲಯದಲ್ಲಿ ಕೂತಿದ್ದಾರೆ ಶ್ರೀಗುರುಗಳು. ಎಂಥಹ ಅಂತಃಕರಣದಿಂದ ಹೇಳುತ್ತಿದ್ದಾರೆ. "ನೀನು ಶ್ರೀಹರಿಯ ಅನುಗ್ರಹ ಪಡೆದು ಬಂದಿದ್ದಿಯಪ್ಪಾ, ಧರ್ಮ, ಮಧ್ವಸಿದ್ಧಾಂತದ ತತ್ವ, ನಿನ್ನಿಂದ ಕೀರ್ತನೆಗಳ ರೂಪದಲ್ಲಿ ಪ್ರಚಾರವಾಗಲಿ. ಜನರಲ್ಲಿ ಭಕ್ತಿಪಂಥವನ್ನು ಜಾಗೃತಗೊಳಿಸು" ಎಂದು ಹೇಳಿ ಗಳಿಗೆಯಲ್ಲಿ ದರ್ಶನಕೊಟ್ಟು ಅದೃಶ್ಯರಾದರು. "ಶ್ರೀಗುರುರಾಯ ನನಗಿದಕ್ಕಿಂತ ಇನ್ನೇನು ಬೇಕು. ದೊಡ್ಡವರ ಆಶೀರ್ವಾದವಾಗಿದೆ. ತಾನಿಂದು ಧನ್ಯನಾದೆ ಎಂದು ಕೊಂಡು. ಮತ್ತೆ ಊರಿನ ಕಡೆ ಸಂಚಾರ ಮಾಡುತ್ತ ಬಂದರು. ಬರುವಾಗ



ಮುಳುಬಾಗಿಲು, ಹಂಪೆ, ಮಂತ್ರಾಲಯ ಪುಣ್ಯಕ್ಷೇತ್ರಕ್ಕೆ ಹೋದಾಗಿನ ಅನುಭವಗಳು ಅ ಪ ್ ೂ ವ ್ ೯ ವ ಾ ದ ್ ಗಳಿಗೆಗಳು.

ಇವೆಲ್ಲ ಪುಣ್ಯ ಕ್ಷೇತ್ರದ ಸಂದರ್ಶನ ಶ್ರೀ ಗುರುಗಳು ಕೂಡ "ಮಧ್ವ ಸಿದ್ಧಾಂತದ ಅಡಿಯಲ್ಲೇ ದಾಸತತ್ವ ಅಡಗಿರುವುದು. ನಿನ್ನ ಕೀರ್ತನೆಗಳ ಮೂಲಕ ಅದನ್ನು ಪ್ರಚಾರ ಮಾಡು" ಎಂದು. ಅದು ತನಗೆ ವರಪ್ರಸಾದವೆಂದುಕೊಂಡು ದಾಸರು ತಮ್ಮ ಊರಿನ ಅಭಿಮುಖವಾಗಿ ನಡೆದರು. ಊರಿನ ಕಡೆ ನಡೆಯುತ್ತ ನಡೆಯುತ್ತ ಅವರ ಮನಸ್ಸು ಒಂದು ಅಂತಿಮ ದ್ವಂದ್ವಕ್ಕೆ ಒಳಗಾಗಿತ್ತು. ಎಷ್ಟು ವರ್ಷಗಳಾದವು ತಾನು ಊರುಬಿಟ್ಟು ತಾನು ಊರು ಬಿಡುವಾಗ ಇನ್ನು ಹುಡುಗತನ ಕಳೆಯುತ್ತಿದ್ದ ವಯಸ್ಸು. ಅಣ್ಣ ಊರಲ್ಲಿರಲಿಲ್ಲ. ತಾನು ಮನೆಬಿಟ್ಟು ಬಂದ ಮೇಲೆ ಎಷ್ಟು ಹಲುಬಿದನೋ? ಊರು ಮಂದಿ ಏನೆಂದುಕೊಂಡರೊ? ಆವತ್ತು ಬಾಲ್ಯದ ಅಂಚನ್ನು ದಾಟಿದ್ದೆ ಈಗ ಹರೆಯದ ಹೊಸ್ತಿಲನ್ನು ತುಳಿಯುತ್ತಿದ್ದೇನೆ. ಅದಕ್ಕೂ ಇದಕ್ಕೂ ಎಷ್ಟು ಅಂತರ. ಅಂತರ ಈಗ ಬರೀ ವಯಸ್ಸಿನಲ್ಲಿ ಅಲ್ಲ ಎಲ್ಲದರಲ್ಲೂ ತಾನು ಬದಲಾಗಿಲ್ಲವೆ?

ಜೀವನದ ಸ್ತರಗಳು ಎಷ್ಟು ವಿಚಿತ್ರವಾದದ್ದು. ಎಷ್ಟು ಅಮೂಲ್ಯವಾದದ್ದು ಕೂಡ. ಮೆಟ್ಟಿಲು ಮೆಟ್ಟಿಲಾಗಿ ಪಡೆದುಕೊಂಡ ಅನುಭವಗಳು ಕೂಡ ತನ್ನದೊಂದು ಹೊಸದೊಂದು ಲೋಕಕ್ಕೆ ಕರೆತಂದಿವೆ. ಆ ಅನುಭವ ತನ್ನೊಬ್ಬನದು ಮಾತ್ರ ಆಗಬಾರದು. ತನ್ನ ಸುತ್ತಲಿನ ಜನಕ್ಕೂ ಸಿಗಬೇಕು. ಈ ಆಜ್ಞೆ ಆ ಭಗವಂತನದೂ ಕೂಡ ಆಗಿತ್ತು. ಶೀನಪ್ಪ ತಾತನದು ಅಗಿತ್ತು.

ಈಗ ತನ್ನ ಸಾಧನೆಗೊಂದು ದಾರಿ ಬೇಕು. ಅದನ್ನು ಹುಡುಕುವದು ತನ್ನ ಬದುಕಿನ ದಾರಿ ಕೂಡ.

ದಾಸರು ಪ್ರಯಾಣಿಸುತ್ತ ಪ್ರಯಾಣಿಸುತ್ತ ದಿನಗಳ ಮೇಲೆ ದಿನ ಕಳೆದು ಬಾಗಲಕೋಟೆಗೆ ಬಂದದ್ದಂತೂ ನಿಜ.ದಾಸರು ಊರಿಗೆ ಬಂದಾಗ ಬೆಳಗಿನ ಹೊತ್ತು. ದೂರದ ಗುಡ್ಡದಿಂದ ಸೂರ್ಯ ಉದಯಿಸಿ ಬರುವ ಹೊತ್ತು ಸೂತ್ತಲೆಲ್ಲ ಕವಿದ ಮಂಜು. ಬಿಸಿಲಿಗೆ ನಿಧಾನವಾಗಿ ಕರಗಿ ಊರಿನ ಸ್ಪಷ್ಟವಾದ ಚಿತ್ರಣ ಕಾಣುತ್ತಿದೆ.

ಮಾಘದ ಚಳಿಯಿರಬಹುದು.

ಕೀಲ್ಲೆದ ಅಂಚಿಗಿದ್ದ ಕೊತ್ಲಪ್ಪನ ಗುಡಿಯಲ್ಲಿ ಆಗಲೇ ಪೂಜಾರರು ಬಂದು ಅಭಿಷೇಕ ನಡೆಸಿದ್ದಾರೆ. ನಿಧಾನವಾಗಿ ಹೆಜ್ಜೆ ಹಾಕುತ್ತ ದಾಸರು ಗುಡಿಗೆ ಬಂದರು. ಆಚಾರ್ಯರು ಅನ್ನುತ್ತಿದ್ದ ವಾಯುಸ್ತುತಿ ತಮ್ಮ ಕಿವಿಗೆ ಎಷ್ಟು ಸುಖವಾಗಿ ಕೇಳಿಸುತ್ತಿದೆ. ಸುಂದರವಾದ ಮೂರ್ತಿ ಕೊತ್ಲಪ್ಪನದು. ದಾಸರು ಮೂರ್ತಿಯ ಮುಂದೆ ಕಣ್ಮುಚ್ಚಿ ನಿಂತರು. ಅಂತರಂಗದ ಒಳಗೆ ಸ್ಪಷ್ಟವಾದ ಚಿತ್ರಣ ಮೂಡುತ್ತಿದೆ. ಹನುಮಪ್ಪನದು "ದಾಸನಾಗಬೇಕು ವೇಂಕಣ್ಣ, ಹರಿಸೇವೆಯಲ್ಲಿ ಹದಿನಾಲ್ಕು ಲೋಕದ ಸಮಸ್ತ ಸುಖ ಅಡಗಿದೆ. ದಾಸತ್ವದಲ್ಲಿ ಇದ್ದಂತಹ ಆತ್ಮತೃಪ್ತಿ ಮತ್ತೆಲ್ಲೂ ಇಲ್ಲವೆನ್ನುವಂತೆ ನಿಂತಿದ್ದಾನೆ. ಆ ಆಂಜನೇಯ ರಾಮಭಕ್ತ.

"ಹೌದು ಪ್ರಭು ಆ ಹರಿಯ ದಾಸತ್ವದಲ್ಲಿ ಅವನ ಸೇವೆಯಲ್ಲಿ ಎಂಥಹ ಅದಮ್ಯ ತೃಪ್ತಿ

ಅಡಗಿದೆ. ಮಾನವ ಜನ್ಮಕ್ಕೆ ಅದೊಂದೆ ಗುರಿ. ಅವನು ಕೊಟ್ಟ ಈ ದೇಹ ಅವನ ಸೇವೆಗೆ ಮುಡಿಪು ಅಲ್ಲವೆ? ಚರಾ–ಚರದಲ್ಲಿ ಅಡಗಿದ ಅವನು ಸರ್ವವ್ಯಾಪಿ ಅವನನ್ನು ಸಾಕ್ಷಾತ್ಕಾರಗೊಳಿಸಿ ಕೊಳ್ಳುವುದೇ ಬಾಳಿನ ಪರಮ ಭಾಗ್ಯ. ದಾಸರ ತಂಬೂರಿ ಶೃತಿ ಮಿಡಿಯಿತು.

"ಅಂಜನಿಸುತ ನಮೋ ಸ್ವಾಮಿ ನೀತ । ಕಂಜಂಜರಿಯದ ಮಹಾಪೂಂಜಾಶ್ರಮಿ ॥ಪ॥

ಪತಿತ ಪಾವನ ನಾಮ ಧ್ಯೇಯ ಹನುಮ
ಅತಿತಾನಾಗತಾಜಾಂಡ ಜ್ಞೇಯ ।
ಮೃತ ಸಂಜೀವನಾದಿ ಚತುರೌಷದ ತಂದೆ
ಕ್ಷತಘಾತ ಕಪಿಗಳ ವ್ರತತಿ ರಕ್ಷಿಸಿದೆ ॥೧॥"

ಎಂಥ ಇಂಪಾದ ಹಾಡು. ಎನು ತಂಬೂರಿಯ ಶೃತಿ. ಬೆಳಗಿನ ಆ ಹಿತವಾದ ತಂಪುಗಾಳಿಯಲ್ಲಿ ಇಡಿ ಪರಿಸರವೇ ಹನುಮನ ನಾಮಾಮೃತದಿಂದ ತುಂಬಿಹರಿಯುತ್ತಿದೆ. ಪೂಜಾರರು ಅಭಿಷೇಕ ವಾಯುಸ್ತುತಿ ಮುಗಿಸಿ, ಆಶ್ಚರ್ಯದಿಂದ ಗರ್ಭಗುಡಿಯಿಂದ ಹೊಬಂದರು. ನೋಡುತ್ತಾರೆ. ದಾಸರೊಬ್ಬರು ತಂಬೂರಿ ಶೃತಿ ಮಾಡುತ್ತ ಭಕ್ತಿಯೇ ಮನದುಂಬಿದಂತೆ ಹಾಡುತ್ತಲೇ ಇದ್ದಾರೆ.

ದುಷ್ಟೋಕ್ತಿ ಪೂರ್ವಪಕ್ಷ ಸಾರಿ ಭೇದೊಚ್ಚಾರಿ
ವಿಷ್ಣು ಪಕ್ಷ ಸಿದ್ಧಾಂತಕಾರಿ ಸೃಷ್ಠಿಯಲಿ
ವರವಾಶಿಷ್ಟ ಪ್ರಸನ್ವೇಂಕಟ । ಧಿಷ್ಠನ ಪ್ರಿಯ
ಮುನಿಶಿಷ್ಯರೊಡೆಯನೆ"

ಪೂಜಾರರು ಒಂದು ಗಳಿಗೆ ದಾಸರ ಮುಖವನ್ನೇ ಕುತೂಹಲ, ವಿಸ್ಮಯದಿಂದ ನೋಡಿದರು. ತಾವು ನೋಡಿದಂತೆ ಈ ಊರಲ್ಲಿ ಅಂಥಹ ದಾಸಶ್ರೇಷ್ಠರು ಯಾರು ಇರಲಿಲ್ಲ. ಗೋಪಾಲದಾಸರು, ವಿಜಯದಾಸರ ಹಾಡುಗಳ ಬಗ್ಗೆ ಕೇಳಿದ್ದರು. ಈಗ ಪ್ರಸನ್ವೇಂಕಟದಾಸರೆಂಬ ಅಂಕಿತದಿಂದ ಹಾಡುವ ಈ ಹಾಡು ಎಷ್ಟು ಅನನ್ಯ ಆರ್ತರವ ಭಕ್ತಿಯಿಂದ ಕೂಡಿದೆ.

"ಸ್ವಾಮಿ" ಎಂದರು ಪೂಜಾರರು. ದಾಸರು ನಿಧಾನವಾಗಿ ಕಣ್ಣು ತೆರೆದರು. ಎದುರಿಗೆ ಪೂಜಾರರು ಅಭಿಷೇಕ ಪೂಜೆ ಮುಗಿಸಿ ಪಂಚಾಮೃತ ತೀರ್ಥ ಹಿಡಿದು ನಿಂತಿದ್ದಾರೆ.

"ಎಲ್ಲಿಂದ ಬಂದ್ರಿ ಸ್ವಾಮಿ" ಎಂದರು ಪೂಜಾರರು.

"ಎಲ್ಲಿಂದ" ದಾಸರು ತಮ್ಮೊಳಗೆ ಪ್ರಶ್ನಿಸುವಂತೆ ಅಂದುಕೊಂಡರು. ಮನುಷ್ಯ ಜೀವಿ ಬರುವುದು ಎಲ್ಲಿಂದ? ಹೋಗುವುದ ಎಲ್ಲಿಗೆ? ಇದು ಯುಗ–ಯುಗಗಳಿಂದ ಪ್ರಪಂಚ ಸೃಷ್ಟಿಯಾದಂದಿನಿಂದ ಪಂಡಿತರು, ತಪಸ್ವಿಗಳು ಋಷಿಗಳು, ಎಲ್ಲರ ಮುಂದೆ ಬ್ರಹ್ಮಾಂಡವಾಗಿ ನಿಂತ ಪ್ರಶ್ನೆ. ಉತ್ತರ ಸಿಗದೇ ಎಲ್ಲರನ್ನೂ ತೊಳಲಾಟಕ್ಕೆ ಹಚ್ಚಿದ ಪ್ರಶ್ನೆ. ಇದಕ್ಕೆ ಉತ್ತರ ತನ್ನಲ್ಲಿದೆಯೇ

"ಎಲ್ಲಿಂದ ಬಂದೆ ಗೊತ್ತಿಲ್ಲ ಆಚಾರ್ಯರೆ"

ನಕ್ಕರು ಪೂಜಾರರು "ಸ್ವಾಮಿ ನಾನು ಲೌಕಿಕದ ಪ್ರಶ್ನೆ ಕೇಳ್ದೆ. ಅಲೌಕಿಕದ ಮಾತಲ್ಲ.



ಯಾಕಂದ್ರ ಹಿಂದ ಈ ಊರಾಗ ಯಾವತ್ತೂ ನಿಮ್ಮನ್ನು ನೋಡಿದ ನೆನಪಿಲ್ಲ. ಯಾವ ದಾಸರು ಬಂದಿಲ್ಲ. ನಿಮ್ಮನ್ನು ನೋಡಿದ್ರ ದೇವಾಂಶಸಂಭೂತರ್ಹಂಗ ಕಾಣಸ್ತೀರಿ. ನನಗ ಲೌಕಿಕ ಉತ್ತರ ಕೊಡ್ರಿ"

"ಖರೇ ಪೂಜಾರ ನಿಮಗೆ ನನ್ನ ನೋಡಿದ್ರ ನೆನಪಿರಲಾರದಷ್ಟು ವಯಸ್ಸಿನ ಪ್ರಭಾವ ಇಬ್ಬರಾಗೂ ಆಗೇದ. ಅಲ್ದ ನೆನಪಿರಲಾದಷ್ಟು ಬದಲಾಗಿನಿ ಸ್ವಾಮಿ. ನಾ ಎಲ್ಲಿಂದ ಹೋಗಿದ್ನೋ ಅಲ್ಲಿಗೇ ಮತ್ತ ತಿರುಗಿಬಂದಿನಿ ಆದ್ರ ಬ್ಯಾರೆ ರೀತಿಯೊಳಗ, ಬ್ಯಾರೆ ಸ್ಥಿತಿಯೊಳಗ"

"ಅಂದ್ರ ನೀವು ಇಲ್ಲಿಯವರೇ ಎನು?"

ದಾಸರು ನಕ್ಕರು. ಅವರ ನಗೆಯಲ್ಲಿ ಅಲೌಕಿಕ ಉತ್ರವಿದ್ದರೂ ಲೌಕಿಕದ ತರ್ಕವಿತ್ತು. "ಹಂಗರ ನಾ ಯಾರು ಅನ್ನೋದು ನಿಮಗಿನ್ನೂ ಗೊತ್ತಾಗಿಲ್ಲ ಅಲ್ಲ ರಾಮಣ್ಣ ತಾತಾ? ಹೌದು ಹ್ಯಾಂಗ ಗೊತ್ತಗ್ಬೇಕು ಹೇಳ್ರಿ. ನಾ ಇಲ್ಲಿಂದ ಹೊಗುವಾಗ ಇನ್ನು ಅಭೋದ ಹುಡುಗ ಆಗಿದ್ದೆ. ಪ್ರಪಂಚ ತಿಳಿಯದ ಅಜ್ಞಾನಿ ಅಗಿದ್ದೆ. ಹಂಗಂತ ಈಗ ಪ್ರಪಂಚ ಗೆಲ್ಲೊ ಜ್ಞಾನಿ ಆಗೀನಿ ಅಂತ ತಿಳ್ಕೋಬ್ಯಾಡ್ರಿ. ಅವಾಗ ಬಾಲ್ಯದ ಅಂಚು ದಾಟಿದ್ದೆ. ಯಾವುದೋ ಒಂದು ತವಕದೊಳಗ ಹಂಬಲದೊಳಗ. ಯಾರಿಗೂ ಬ್ಯಾಡಾದ ಜೀವ ನಾನು. ನಾಲ್ಕಕ್ಷರ ಸುದ್ದೆ ತಿಳೀದ ತಿಳಿಗೇಡಿ. ನನ್ ಜನ್ಮ ಎದಕ ಅನ್ಕೋಂಡು ಈ ಲೋಕದ ರೀತಿ ನೀತಿಗೆ ದಿಕ್ಕು ತೊರೆದು ಹೋದೆ. ಆದ್ರ ಈಗ ಬಂದದ್ದು ಹಿಂಗ ನೋಡ್ರಿ" ಎಂದ ದಾಸರ ವಾಣಿಯ ಹಿಂದೆ ಅಡಗಿದ್ದ ತತ್ವವಾಣಿಯನ್ನು ನಿಧಾನವಾಗಿ ಅರಿಯುತ್ತ ಪೂಜಾರರು ಅವರ ಮುಖವನ್ನು ತದೇಕದಿಂದ ನೋಡುತ್ತಿದ್ದರು.

ಗರ್ಭಗುಡಿಯಲ್ಲಿ ಹನುಮಪ್ಪನ ಮುಂದೆ ಶಾಂತವಾಗಿ ಉರಿಯುತ್ತಿರುವ ನಂದಾದೀಪದ ಜ್ಯೋತಿ. ಆ ಪ್ರಭೆ ಇವರ ಮುಖದಲ್ಲೂ ಪ್ರತಿಬಿಂಬವಾಗಿದೆಯೆ? ಎಂಥಹ ಅಲೌಕಿಕ ತೇಜ ಅಡಗಿದೆ ಇವರ ಮುಖದಲ್ಲಿ. ಆ ಪ್ರಜ್ವಲಿಸುವ ಕಣ್ಣುಗಳಲ್ಲಿ ಮುಖದ ಒಂದೊಂದು ಗೆರೆಯಲ್ಲೂ ಎಂಥಹ ಪ್ರಭುದ್ಧತೆ ಅಡಗಿದೆ. ಅವರ ಕೈಯಲ್ಲಿದ್ದ ತಂಬೂರಿ. ಈ ದೇಹ ಕೂಡ ಒಂದು ತಂಬೂರಿ ಇದ್ದಂತೆ. ಇದರ ತಂತಿಗಳನ್ನು ಶೃತಿಗೊಳಿಸಿ ರಾಗ ಹೊರಡಿಸಿದಂತೆ ದೇಹದ ಪ್ರತಿಯೊಂದು ಭಾವಗಳನ್ನು ಶೃತಿಗೊಳಿಸಿ ಆ ಪರಮಾತ್ಮನಿಗೆ ಪ್ರೀತಿಯಾಗುವಂತೆ ಬದ್ಧನಾಗಬೇಕೆಂದು ಹೇಳುವಂತಿತ್ತು.

ದಾಸರ ಕೈ ನಿಧಾನವಾಗಿ ತಂಬೂರಿಯ ತಂತಿಯನ್ನು ಮೀಟಿತು ಕಣ್ಣುಗಳು ಭಕ್ತಿಸುಧೆಯಲ್ಲಿ ಲೀನವಾದಂತೆ ಅರೆನಿಮಲಿತನಾಗಿ ಅಂತರಂಗದ ಆಳದಿಂದ ಭಕ್ತಿ, ಬುಗ್ಗೆ ಉಕ್ಕಿದಂತೆ ಅವರ ಬಾಯಿಂದ ಕೀರ್ತನೆ ಹೊರಹೊಮ್ಮಿತು.

ಎಂಥಹ ತನ್ಮಯತೆ, ಎಂಥ ಆರ್ತರವ, ಎಂಥ ಸಮರ್ಪಣಾ ಭಾವಾ ಅಡಗಿದೆ ಆ ಧ್ವನಿಯಲ್ಲಿ ಆ ಸಾಹಿತ್ಯದಲ್ಲಿ ದಾಸವಾಣಿ ಎಂದರೆ ಇದೆ ಎನೊ? ಎಲ್ಲ ಮರೆತು ಭಾವದ ಬಂಧ ಕಳೆದು ಪರಮಾತ್ಮನಲ್ಲಿ ಲೀನವಾಗಿ ಅವನೇ ಇವರಾಗಿ, ಇವರೇ ಅವನಾಗಿಒಳಗಿನ ಭಾವಗಳನ್ನು ಸಾಕ್ಷಾತ್ಕಾರ ಮಾಡಿಕೊಂಡು ಲೋಕಕ್ಕೆ ಜ್ಞಾನ ಬಿತ್ತುವ ತೆರದಿ ಹಾಡುತ್ತಿರುವುದು

ಬರೀ ಶಬ್ದಗಳಲ್ಲ. ಪದಗಳಲ್ಲ. ಅಕ್ಷರಗಳಲ್ಲ. ನುಡಿ, ನುಡಿಗಳಲ್ಲಿ ಬಿತ್ತಿ ಬೆಳೆದಂತೆ, ನೂಲಂತೆ ನೇಯ್ದು, ನೇಯ್ದು ಸರ್ವ ಸಮರ್ಪಣಾ ಮೂಡಿದಂತಿರುವ ಭಕ್ತಿರಸ. ಯಾರೋ ಮಾಡಿದ್ದಾರೋ ಈ ಪದಗಳನ್ನು ಎಂಥಹ ಶ್ರೇಷ್ಠ ಸಾಹಿತ್ಯ ಅಡಗಿದೆ.

ಪುರಂದರದಾಸರ ಹಾಡು ಕೇಳಿದ್ದೆ.

ವಿಜಯದಾಸರ, ಕನಕದಾಸರ ಭಕ್ತಿವಾಣಿ ಹಾಡಿ ಕೇಳಿದ್ದೆ, ಆದರೆ ಇವರ ಹಾಡು ಮನಸ್ಸಿಗೆ ಬೆಳದಿಂಗಳ ತಂಪುಕೊಟ್ಟಂತೆ

ಪೂಜಾರರು ಮೈಯೆಲ್ಲ ಕಿವಿಯಾಗಿ ಇವರ ಹಾಡನ್ನೇ ಕೇಳುತ್ತಿದದಾರೆ. ಸೂರ್ಯ ಮೇಲೇರಿದಂತೆ ಭಕ್ತರು ಒಬ್ಬೊಬ್ಬರಾಗಿ ಗುಡಿಗೆ ಬರುತ್ತಿದಾರೆ. ಕೊತ್ಲಪ್ಪನಿಗೆ ಪ್ರದಕ್ಷಿಣೆ ನಮಸ್ಕಾರ ಮಾಡಿ ತಾವು ಬಂದು ಕೂತು ದಾಸರ ಹಾಡನ್ನು ಮೈಮರೆತು ಕೇಳುತ್ತಿದ್ದಾರೆ. ಓಂಕಾರದಂತೆ ಎಲ್ಲ ಎದೆಯಲ್ಲಿ ಮೀಟುತ್ತಿದೆ ಆ ಧ್ವನಿ, ಆ ರಾಗ

"ಗೆಲಿಸು ಭವವ ಗುರು ಹನುಮಂತಾ, ಖಳ
ಜಲದಿ ಓಡವನಾಳ ಬಲವಂತಾ ॥ಪ॥

ದಾಶರಥಿಯ ಪದವನೆ ನಂಬಿ ಇತರಾಶಿಯಿಲ್ಲದೆ ಭಕ್ತಿರಸ ತುಂಬಿ

ತೋಷ ವೃತ್ತಿಗೆ ಕಡೆ ಮೊದಲಿಲ್ಲ
ಸರ್ವ ದೇಶ-ಕೋಶದೆಣಿಕೆ ಅರಿತೆನಲ್ಲ" ॥೧॥

ಎದುರಿಗೆ ನಿಂತ ಆಂಜನೇಯ ಕೂಡ ಎಷ್ಟು ಮನಸ್ಸಿಟ್ಟು ಆಲಿಸುತ್ತಿದ್ದಾನೆ. ತನ್ನ ಭಕ್ತನ ವಾಣಿಯನ್ನು

"ಶ್ರೀ ಸತ್ಯವತಿ ಜನ ನೇಮದಲಿ
ಹರಿ ದ್ವೇಷಿಗಳನು ಗೆದ್ದೆ ಭೂಮಿಯಲಿ
ಶ್ರೀ ಸುಖತೀರ್ಥ ಭೀಮ ಕಪಿವರದಾ ಸ್ವಾಮಿ
ಸ್ವಾಮಿ ಪ್ರಸನ್ವೆಂಕಟೇಶ ಭೃತ್ಯಗಣ ಮುದದಾ ॥೩॥

ಗೆಲಿಸು ಭವವಗುರು ಹನುಮಂತಾ"

ಪಾವನವಾಗಿರಬೇಕು ಜೀವನ, ಇಂಥ ಕೀರ್ತನೆಗಳ ರಚನೆ ಭಕ್ತಿರಸ ಹರಿದಂತೆ ಭಕ್ತಿ ಜನಗಳ ಮನಸ್ಸಿಗೂ ಆಸ್ವಾದಿಸುವಂತೆ ಮಾಡಿದ್ದಾರಲ್ಲ ಶಬ್ದ ಭಂಡಾರವೆಲ್ಲ ಸೂರೆಯಾಗಿ ನಿಂತವರು ಎದೆಯಲ್ಲಿ ಭಕ್ತಿಯ ಬೀಜ ಬಿತ್ತುತ್ತಿದ್ದಾರೆ ಯಾರವರು ಆ ಮಹಾನುಭಾವರು?

"ಪ್ರಸನ್ವೆಂಕಟ ದಾಸರು"

ಕೂತವರು ನಿಂತವರು ಒಬ್ಬರಮುಖವನ್ನೊಬ್ಬರು ನೋಡುತ್ತಿದ್ದಾರೆ ಎಲ್ಲಿಂದ ಬಂದರು ಇಂಥ ಮಹಾನುಭಾವರು ನಮ್ಮೂರಿಗೆ ಹಾಡು ಮುಗಿದರೂ ದಾಸರು ಇನ್ನೂ ಕಣ್ಣುಮುಚ್ಚಿ ಕೊಂಡು ನಿಂತೇ ಇದ್ದಾರೆ.



"ಶ್ರೀ ಹರಿ ಆಜ್ಞಾದಿಂದ ಇಲ್ಲಿಗೆ ಬಂದೀನಪಾ ಈಗ ಮುಂದಿನ ಹಾದಿ ತೋರಸವಾ ನೀನೆ ಕೊತ್ಲಪ್ಪ ನೀನು ಒಬ್ಬ ಹರಿಭಕ್ತ ಈಗ ನಾನೂ ನಿನ್ನ ಮುಂದ ನಿಂತೀನಿ. ಮುಂದಿನ ಹಾದಿ ತೋರಿಸು ಈ ಬಂಧನಗಳ ಮೋಹಬ್ಯಾಡ ಅಂತ ಎಲ್ಲಾರ ಹೀನಾಯಕ್ಕೆ ಒಳಗಾಗಿ ಓಡಿ ಹೋಗಿದ್ದೆ ಈಗ ಮತ್ತೆ ಅದ ಬಂಧನದಾಗ ಇದ್ದು ನಿನ್ನ ಕರ್ಮ ನೀ ಮಾಡು ನಿನಗೆ ನಾ ಕೊಟ್ಟ ಜ್ಞಾನ ಅಕ್ಷಯಪಾತ್ರೆ ಇದ್ದಂಗ ಅಂತ ಇಲ್ಲಿ ಕಳಿಸಿದ ನನ್ನಪ್ಪಾ ಬಂದೆ ಆದರೆ ಈಗ ನನ್ನ ಸಾಧನದ ಹಾದಿ ತೋರಿಸು."

ದಾಸರ ಕಣ್ಣುಗಳು ಮುಚ್ಚಿದ್ದರೂ ಅವರ ಅಂತರಂಗದ ಹುಯಿಲು ಕೇಳುತ್ತಲೇ ಇದೆ. ಒಂದೆರಡು ಗಳಿಗೆಗಳು ಕಳೆದರಿಬೇಕು ಯಾರೋ ಕೈ ಮೃದುವಾಗಿ ಅವರ ಹೆಗಲ ಮೇಲೆ ಕೈಯಿಟ್ಟರು. ಅಂತಃಕರಣದಿಂದ "ವೆಂಕಣ್ಣ" ಎಂದರು. ದಾಸರು ನಿಧಾನವಾಗಿ ಕಣ್ಣುತೆಗೆದರೆ ಎದುರಿಗೆ ಅದೇ ಶೀನಪ್ಪ ಅವರದು ತಮ್ಮದು ಯಾವ ಜನ್ಮದ ಋಣಾನುಬಂಧವಿದ್ದೀತು ಯಾವುದೋ ಒಂದು ಸಂದರ್ಭದಲ್ಲಿ ತಮ್ಮ ಬದುಕಿನ ತಿರುವಿಗೆ ಬಂದು ನಿಲ್ಲುತ್ತಿದ್ದಾರೆ ಶೀನಪ್ಪಕಾಕಾ ತಾನು ಎಲ್ಲರ ಹೀನಾಯಕ್ಕೆ ಒಳಗಾಗಿ ಊರಿನ ಋಣ ಬ್ಯಾಡಂತ ಭಕ್ತರ ಗುಂಪಿನೊಳಗೆ ತಿರುಪತಿಗೆ ಹೋಂಟಾಗ ತನಗೆ ಜೊತೆಯಾದವರು ಶೀನಪ್ಪ ಹರಿಭಕ್ತರ ಕಥೆ ಹೇಳಿ ತನ್ನ ಹೃದಯಲ್ಲಿ ಭಕ್ತಿಯ ಬೀಜ ನೆಟ್ಟಿದ್ದರು. ತಿರುಪತಿಯೊಳಗೆ ಅಸರಂತ ತನಗೆ ಆಸರಾಗಿದ್ರು. ತನಗೊಂದು ಮುಕ್ತಿಗೆ ಹಾದಿ ಸಿಗುವ ತನಕ ತಾ ಅಲ್ಲಿಂದ ಕದಲಂಗಿಲ್ಲ ಅಂದಾಗ ತಿರುಗಿ ಹೋದ್ರು ತನಗೆ ಶ್ರೀ ಹರಿಯ ಸಾಕ್ಷಾತ್ಕಾರವಾಗಿ ತಾನು ಅಲ್ಲಿಯೇ ಉಳಿದ ಜೀವನ ಕಳೆಯಬೇಕಾದಾಗ ಮತ್ತೆ ಭೇಟಿಯಾಗಿ ಹೇಳಿದ್ದರು.

"ವೆಂಕಣ್ಣ ನೀನು ತಿರುಗಿ ಊರಿಗೆ ಬಾ ನಿನ್ನ ಹರಿಕೊಟ್ಟ ಜ್ಞಾನ ಸಂಪತ್ತ್‌ನ್ನು ಎಲ್ಲರಿಗೂ ಹಂಚು ಅದರ ನಾಮದ ಸಾರ ಎಲ್ಲಾರ ಬಾಯಾಗ ಬರೋ ಹಂಗ ಮಾಡು ಅದು ಹಂಚಿದಷ್ಟು ಅಕ್ಷಯಆಗ್ತೇದಂತ ಹೇಳಿದವ್ರು ಇವರೇ, ಇದೇ ಕಾಕಾ ಆ ಜ್ಞಾನ, ಆ ಇಚ್ಛಾ, ಆ ನನ್ನಪ್ಪ ವೆಂಕಪ್ಪಂದು ಆಗಿತ್ತು. ಹಂಗಂತ ಇವತ್ತು ಊರಿಗೆ ಬಂದು ಹನುಮಪ್ಪನ ಮುಂದೆ ಹಾದಿ ತೋರಸಪಾ ಮುಂದಿಂದು ಅಂತ ನಿಂತಾಗ ಈಗ ಆ ಕ್ಷಣ ಮತ್ತೇ ತನ್ನ ಕಣ್ಣಮುಂದೆ ನಿಂತವ್ರು ಇದೇ ಶೀನಪ್ಪ ಕಾಕಾ, ತನ್ನ ಹರಿ ಅವ್ರು ಮೂಲಕ ತನಗೆ ಹಾದಿ ತೋರಿಸಲಿಕ್ಕೆ ಹತ್ಯಾನೋ ಏನೋ?

"ಶೀನಪ್ಪ ಕಾಕಾ ನೆನೆದವ್ರು ಗತೆ ನೀವು ನನ್ನ ಕಣ್ಣುಮುಂದೆ ಬಂದು ನಿಂತ್ರಿ ಯಾವಾಗ ಹಾದಿ ಕಾಣಿಸದೇ ನಿಂದ್ರತಿನೂ ಆವಾಗ ನನ್ನ ಹರಿ ನಿಮ್ಮನ್ನ ತಂದು ನನ್ನ ಮುಂದ ನಿಂದ್ರಸ್ತಾನ ಹೇಳ್ರೀ ಶೀನಪ್ಪಾ ಕಾಕಾ ನನ್ನ ಮುಂದಿನ ಹಾದಿ ಯಾವುದು?

ಶೀನಪ್ಪ ಅದೇ ಅಂತಃಕರಣದಿಂದ ನಕ್ಕರು.

"ಹುಚ್ಚಪ್ಪಾ ನಾ ಯಾರು ನಿನಗೆ ಹಾದಿ ತೋರಸಾಂವಾ ಆ ಕರುಣಾಮಯಿ ಈಗ ನಿನ್ನೊಳಗ ನಿಂತು ನಮಗೆಲ್ಲ ಮುಕ್ತಿ ಮಾರ್ಗ ತೋರಿಸಬೇಕಂತ ನಿನ್ನ ಇಲ್ಲಿಗೆ ಕಳಿಸ್ಯಾನ ಎಲ್ಲದಕ್ಕೂ ನನ್ನ ಒಂದೇ ನಿಮಿತ್ತ ಮಾಡತಾನ ಅಷ್ಟೇ"

ಎಂದು ಅಲ್ಲಿ ನಿಂತ ಓಣಿಯ ಜನರ ಕಡೆ ತಿರುಗಿ "ಏನ್ರಪಾ ನಿಮಗೆಲ್ಲ ಈಗ ನಮ್ಮೂರಿನ ಅಮೂಲ್ಯ ನಿಧಿ ತೋರೀಸ್ತೀನಿ ನಮ್ಮೆಲ್ಲರ ಯಾವ ಜನ್ಮದ ಪುಣ್ಯನೋ ಏನೋ ಭಗವಂತ ಇವರ ರೂಪದಾಗ ಈ ಜ್ಞಾನಭಂಡಾರ ನಮಗೆ ಕೊಟ್ಟು ಕಳಿಸ್ಯಾನ ಅದನ್ನ ಜತನಗ ಕಾಪಾಡೋ ಜವಬ್ದಾರಿ ಇವತ್ತು ನಮ್ಮದು" ಎಂದರು ಶೀನಪ್ಪ. ನಿಂತ ಮಂದಿ ಏನೂ ಅರ್ಥವಾಗದೆ ಒಬ್ಬರಿಗೊಬ್ಬರು ಪಿಳಿ ಪಿಳಿ ತಮ್ಮ ತಮ್ಮಲ್ಲೇ ಪ್ರಶ್ನಾರ್ಥಕವಾಗಿ ನೋಡುತ್ತಾ ನಿಂತರು. ಮತ್ತೇ ಮತ್ತೇ ದಾಸರ ಕಡೆ ಶೀನಪ್ಪಜ್ಜನ ಕಡೆ ನೋಡುತ್ತಿದ್ದರು.

ಖರೇ ಶೀನಪ್ಪಜ್ಜ ಹೇಳಿದಂತೆ ಇವರನ್ನು ನೋಡಿದರೆ ಯಾರೋ ಒಬ್ಬರು ಮಹಾನುಭಾವರು ನಮ್ಮೆದುರು ಜ್ಞಾನದ ಜ್ಯೋತಿಯಂತೆ ನಿಂತಿದ್ದಾರೆ. ಎಂಥಹ ಶಾಂತ ಎಂಥಹ ತೇಜವಿದೆ ಇವರ ಮುಖದಲ್ಲಿ ಯಾವ ಅಮೂಲ್ಯನಿಧಿ ಇವತ್ತು ನಮ್ಮೆದುರು ಈ ರೂಪದಲ್ಲಿ ನಿಂತಿದೆ. ಯಾವ ಜ್ಞಾನಭಂಡಾರದ ಅಕ್ಷಯಪಾತ್ರೆ ಇವರು ಅನುಮಾನ ಆಸಕ್ತಿಗಳಿಂದ ತುಂಬಿದ ಜನರಲ್ಲಿ ಹಿರಿಯರಾದ ಪೂಜಾರರೇ ಕೇಳಿದರು.

"ಶೀನಪ್ಪಾ ಯಾರು? ಏನು? ಎಂತು ಅಂತ ನಮಗ ಏನೂ ಅರ್ಥ ಆಗವಲ್ದು ಇವರನ್ನು ನೋಡಿದ್ರ ಯಾರೋ ಒಬ್ಬ ಪುಣ್ಯ ಪುರುಷ ನಮ್ಮ ಮುಂದ ನಿಂತು ನಮ್ಮೆಲ್ಲಾರ ಮುಕ್ತಿ ಮಾರ್ಗಕ್ಕೆ ಹಾದಿ ತೋರಸ್ತಾರೆ ಅನಸ್ತದ ಹೇಳ್ರಿ ಶೀನಪ್ಪ ಯಾವ ಪುಣ್ಯ ಸ್ವರೂಪ ಈ ಬಾಗಲಕೋಟೆಗೆ ಬಂದದ ಎಲ್ಲಿಂದ ಬಂದಾರ" ಎಂದರು.

ಶೀನಪ್ಪಜ್ಜ ಎಲ್ಲಾರ ಮುಖ ನೋಡಿದರು. ಮತ್ತೇ ದಾಸರ ಕಡೆ ನೋಡಿದರು. ಮತ್ತೆ ಅನನ್ಯ ಅಂತಃಕರಣದಿಂದ ದಾಸರ ಕೈಹಿಡಿದು

"ಇದು ನಮ್ಮೆಲ್ಲಾರ ಪೂರ್ವ ಜನ್ಮದ ಪುಣ್ಯರಪಾ– ಈ ಪುಣ್ಯಸ್ವರೂಪ ಬ್ಯಾರೆ ಕಡೆಯಿಂದ ಬಂದದ್ದಲ್ಲ ನಮ್ಮ ಮುಂದ ಹುಟ್ಟಿ ಬೆಳೆದವ್ರು. ಇಷ್ಟು ವರ್ಷ ಈ ಬೆಳಕಿನ ಜ್ಯೋತಿ ಮ್ಯಾಲೆ ಮೋಡ ಮುಸುಕಿತ್ತು. ಇವತ್ತ ಭಗವಂತ ಆ ಮೋಡಕರಗಿಸಿ ನಮ್ಮ ಮುಂದೆ ಇಟ್ಟಾನ– ಆ ಬೆಳಕು ಇವತ್ತೇ ನಮ್ಮ ಊರು ಒಂದೇ ಅಲ್ಲ ಲೋಕ ಕಲ್ಯಾಣಕ್ಕೆ ಹಾದಿ ತೋರಸಬೇಕಾಗ್ಯಾದ. ಜ್ಞಾನದ ಭಂಡಾರನ ಆ ತಿರುಪತಿ ವೆಂಕಪ್ಪ ನಮಗೆ ಕಳಸ್ಯಾನ ನಾವೇಲ್ಲ ಭಕ್ತಿಯಿಂದ ಕೈ ಒಡ್ಡಿನಿಂದ್ರೂಣು ಯಾರ್‍ಯಾರ ಕೈಯಾಗ ಎಷ್ಟೇಷ್ಟು ಲಬ್ಧ ಅದನೋ ಅಷ್ಟು ಬೀಳ್ತದ" ಎಂದರು ಶೀನಪ್ಪ.

ಖರೇ ಶೀನಪ್ಪ ಹೇಳೋದು ಖರೇ ಯಾರೋ ಒಬ್ಬ ಮಹಾತ್ಮ ನಮ್ಮ ನಡುವೆ ನಿಂತಾರ ಕತ್ತಲಿಯೊಳಗೆ ಬೆಳಗೋ ದೈವಿದೀಪಮಾನ ದೀಪದ್ಹಂಗ ಅವ್ರು ನಮ್ಮ ಮುಂದ ನಿಂತಾರ. ಶೀನಪ್ಪಜ್ಜ ಹೇಳಿದ್ರೂ ಆ ಬೆಳಕು ಬ್ಯಾರೆ ಎಲ್ಲಿಂದಾನೋ ಬರಲಿಲ್ಲ. ನಮ್ಮ ಮುಂದ ಹುಟ್ಟಿ ಬೆಳೆದಿದ್ದು ಅಂತ ಹಂಗಾರ ಯಾರು ಇವ್ರು?

ಮತ್ತೇ ಪೂಜಾರರೇ ಕೇಳಿದರು. "ಶೀನಪ್ಪ ನಿಮ್ಮ ಮಾತು ಅರ್ಥ ಆದ್ರೂ ಅದರೊಳಗಿನ ತತ್ವ ಅರ್ಥ ಆಗವಲ್ದು. ಬಿಡಿಸಿ ಹೇಳ್ರಿ ಏನಂತ ನಮ್ಮ ಮುಂದ ಹುಟ್ಟಿ ಬೆಳೆದವ್ರು ಈ ಮಹಾತ್ಮರು ಅಂದ್ರೀ ಯಾರು ಯಾರು ಹೇಳ್ರೀ ಇಂಥವರ್ನ ಪಡೇಲಿಕ್ಕೆ ನಮ್ಮ ಊರು ಜನ ನಾವೆಲ್ಲ ಖರೇನ ಪುಣ್ಯ ಮಾಡಿರಬೇಕು. ಹೇಳ್ರೀ ಯಾರು?



"ಏನ್ರಪಾ ಬ್ಹಾಳ ವರ್ಷದ ಹಿಂದ ಇವರೊಬ್ಬ ಅಭೋದ ಅಮಾಯಕ ಹುಡುಗ ಆಗಿದ್ದ ತಂದಿ ತಾಯಿ ಇಲ್ಲದ ಅನಾಥ ಆಗಿದ್ದ, ಅಣ್ಣ ಅತ್ತಿಗೆ ಬೆಳೆಸಿದ್ರೂ ಆದರ ಜನ್ಮಕ ಹೀನಾಯ ಅನ್ನೋದು ಬಾಳ ವ್ಯಥಾ ಕೊಡ್ತದಲ್ಲ ಅಂಥಾ ಹೀನಾಯದೊಳಗ ಬೆಳೆದಾಂವಾ ಸರೀಕ ಹುಡುಗರು ಓದಿ ಬರೀ ವೇದಾಧ್ಯಾಯನ ಅಂತ ಹೋಗು ಮುಂದ ಇಂವಾ ದನಾ ಕರು ಮೇಯಿಸ್ಲಿಕ್ಕೆ ಹೋಗ್ತಿದ್ದ ಏನ್ರಪ್ಪಾ ಅಂತಾ ಹೀನಾಯಕ್ಕೆ ಬ್ಯಾಸರ ಆಗಿ"

"ಬ್ಯಾಡ್ರಿ ಕಾಕಾ ಹಿಂದಿಂದ ಹೇಳಿ ಹಳಿಯೂದ್ರಾಗ ಏನರ್ಥದ ಆ ಹೀನಾಯ ನನ್ನ ಉದ್ದಾರಕ್ಕೆ ಹಾದಿ ಆತು"

"ಖರೇನಪಾ ನಿನ್ನಂಥ ವಿರಕ್ತಿ ಭಗವದ್ಭಕ್ತ ಹೇಳೋದು ಅಂದು ಕೊಳ್ಳುದು ಸಹಜೀಕ ಅದ ಆದ್ರೂ ಓಣಿ ಜನಕ್ಕೆ ನೀ ಯಾರು? ಏನು? ಎಂತ್ತ? ಅಂತ ಗೊತ್ತಾಗ್ಬೇಕಲ್ಲ. ನೀ ಹಂಗ ಇರಬೇಕಾದ್ದು ಭಗವಂತನ ಇಚ್ಛಾ ಇತ್ತು ಏನೋ? ಈಗ ಹಿಂಗ ಆದದ್ದು ಅವನ ಇಚ್ಛಾನ, ಏನ್ರಪಾ, ಹುಡುಗ ಮನಿಯವ್ರ ಹೀನಾಯ ತಾಳಲಾರದೇ ತನ್ನ ಅಜ್ಞಾನಕ್ಕೆ ತನ್ನ ಅಂಧಕಾರ ತೊಡೆದು ಬೆಳಕು ಕೊಡು ಅಂತ ತಿರುಪತಿ ವೆಂಕಪ್ಪನ ಹತ್ರ ಹೋಗಿ ಅವನ ಕಾಲಿಗೆ ಬಿದ್ದು ಬೆಳಕು ತೋರು ಶ್ರೀ ಹರಿ ನನ್ನಂಥ ಪಾಪಿನ್ನ ಅಜ್ಞಾನಿನ್ನ ಉದ್ಧಾರ ಮಾಡು ಇಲ್ಲಾ, ಪ್ರಾಣಾರ್ಪಣಾ ಮಾಡ್ತೀನಿ ಅಂತ ಪಾದಕ್ಕೆ ಬಿದ್ದ ಆ ದಿವ್ಯ ಪಾದದ ಮಹಿಮಾ ಏನು ಹೇಳ್ತೀರಿ. ಆ ಕರುಣಾಮಯಿ ಭಗವಂತ ಪಾದಕ್ಕೆ ಬಿದ್ದ ಇವನ್ನು ಹಿಡಿದೆತ್ತಿ ಇವನ ನಾಲಗಿ ಹೊರಗ ತಗದು "ಪ್ರಸನ್ವೆಂಕಟ" ಅಂತ ಬೀಜಾಕ್ಷರ ಬರೆದು ಅವನ ಅಂಕಿತಕೊಟ್ಟು ಜ್ಞಾನದ ಭಂಡಾರ ಇವನ ಕೈಗೆ ಕೊಟ್ಟು ಎಲ್ಲಾರಿಗೂ ಜ್ಞಾನ ಹಂಚು ಭಕ್ತಿ ಪಂಥ ಪ್ರಚಾರ ಮಾಡು ಅಂತ ಇವರ್‍ನ ಕಳಸ್ಯಾನ, ಎಷ್ಟೋ ವರ್ಷ ತಿರುಪತಿಯೊಳಗೆ ಇದ್ದ ಇಂವಾ ಹರಿಕೀರ್ತನೆ ಗಳನ್ನು ಬರೆದ ಹಾಡಿದಾ ಇವನ ಜೋಡೆ ಭಕ್ತಿವೃಂದಾನೂ ಕುಣಿತು. ಹರಿ ನಾಮಾಮೃತ ಪಾನ ಮಾಡ್ತೀತ್ತು. ನೀವು ಕೇಳಿರಬೇಕು ಈಗೀಗ ಬಾಯಿಂದ ಬಾಯಿಗೆ ಇವರ ಹಾಡು ಜನಗಳು ಹಾಡುದನ್ನು.

ಹೌದು ಆಚಾರ ಕೇಳಿವಿ. ಆದ್ರ ಬ್ಹಾಳ ಕಿಂವಿಗೆ ಬಿದ್ದಿಲ್ಲ" ಅಂದರು ಯಾರೋ.

"ಈಗ ಅಂವಗ ಭಗವಂತನ ಆಜ್ಞಾ ಆಗೇದ, ನಿನ್ನ ಊರಿಗೆ ಹೋಗಿ ಸುತ್ತ ಮುತ್ತ ಎಲ್ಲಾ ಕಡೆ ಸಂಚಾರಮಾಡಿ ಭಕ್ತಿ ಜ್ಞಾನ ಧರ್ಮ ಪ್ರಚಾರಮಾಡಂತ ಇಂವಾ ಬ್ಯಾರೆ ಯಾರೂ ಅಲ್ಲ ನಮ್ಮ ಕಾಖಂಡಕಿ ನರಸಪ್ಪಯ್ಯ–ಲಕ್ಷ್ಮೀಬಾಯಿ ಮಗ ರಾಘಣ್ಣನ ತಮ್ಮ "ವೆಂಕಣ್ಣ" ಎಂದರು ಶೀನಪ್ಪ

ಜನ ಆಶ್ಚರ್ಯದಿಂದ ವಿಸ್ಮಯವನ್ನು ನೋಡುವಂತೆ ದಾಸರನ್ನು ನೋಡುತ್ತಲೇ ಇದ್ದರು. ಕಾಲಿಗೆ ಬಿದ್ದು ನಮಸ್ಕಾರ ಮಾಡುತ್ತಲೇ ಇದ್ದರು. ಇವರು ನಮ್ಮ ವೆಂಕಣ್ಣನೇ ನಮ್ಮ ಕಿಲ್ಲೇದಾಗ ಹುಟ್ಟಿ ಬೆಳೆದವ್ರು ತಾವು ನೋಡಿದಾಗ ಇಷ್ಟೇ ಇದ್ದ, ಅನಾಥಭಾವದಿಂದ ಮಖೀನ ಆಗಿ ಅಲ್ಲೋ ಒಂದು ಕಡೆ ಕೂಡತಿದ್ದ ಓಣಿಯವರು ಅಂತಃಕರಣದಿಂದ ದಯಾದಿಂದ ಮುಂದಕ ಕರೆದು ಮಾತಾಡಿಸುತ್ತಿದ್ರು ತಿನ್ಲಿಕ್ಕೆ ಕೊಡತಿದ್ರು, ಆಮ್ಯಾಲೆ ಅಣ್ಣನ ಲಗ್ನ ಆತು ವೈನಿ ಬಂದ್ಲು ಜೀವ ಭೀರಿ ಆತು. . . ಓಣಿಯವ್ರು ಉದಾಸೀನ ಮಾಡಿದ್ರು ಆಮ್ಯಾಲೆ ಯಾವ ಮಾಯದಾಗ ಹುಡುಗ ಊರು ಬಿಟ್ಕೋ ಯಾರ ಕಣ್ಣಿಗೂ ಬೀಳಲಿಲ್ಲ. ಅವರಣ್ಣ ನಾಕದಿವನ ಹಳಾಳಿಸಿದ. ಎಲ್ಲಿ ಹೋದ್ನೋ ಏನೋ ಅಂತ.

ಆದ್ರ ಈಗ ನೋಡಿದ್ರ ಅವತ್ತೇ ಮಾಯದ ಹುಡುಗ ಇವತ್ತೇ ಎಂಥಾ ಮಹಾನುಭಾವ ಆಗಿ ಬಂದಾರ ಖರೇನ ಒಂದು ವಿಸ್ಮಯ ಆದ್ಹಂಗ ಆಗೇದ ಎಂದು ಅಂದು ಕೊಂಡಿತು ಜನ ಗುಡಿಯಿಂದ ಕೆಳಗಿನ ಓಣಿಗೆ ಓಣಿಯಿಂದ ಮನೆ ಮನೆಗೆ ಕಿಲ್ಲೆಯಲ್ಲಿ ಹುಟ್ಟಿ ಬೆಳೆದ ನರಸಪ್ಪಯ್ಯನವರ ಮಗ ಈಗ "ಪ್ರಸ್ನನ್ವೆಂಕಟ ದಾಸ" ರಾಗಿ ಮಹಾನುಭಾವನಾಗಿ ಹರಿಕೃಪೆಗೆ ಪಾತ್ರನಾಗಿ ಸ್ವತಃ ವೆಂಕಪ್ಪನೇ ಅವನ ನಾಲಿಗೆ ಮೇಲೆ "ಪ್ರಸನ್ವೆಂಕಟ" ಎಂದು ಬರೆದು ಅಂಕಿತಕೊಟ್ಟು ದಾಸದೀಕ್ಷೆ ಕೊಟ್ಟಿದ್ದಾನಂತೆ ಈ ಊರಿನ ಪುಣ್ಯ ಎಷ್ಟೀದ್ದೀತು? ನರಸಪಯ್ಯ ಲಕ್ಷ್ಮೀಬಾಯಿಯ ಪುಣ್ಯ ಎಷ್ಟಿದ್ದೀತು? ಎನ್ನುತ್ತ ಊರಿನ ಓಣಿಯ ಜನ ಒಬ್ಬೊಬ್ಬರಾಗಿ ಬಂದು ಗುಡಿಯಲ್ಲಿ ಸೇರುತ್ತಿದ್ದರು.

ಅದು ರಾಘಣ್ಣನ ಕಾವೇರಿಯ ಕಿವಿಗೂ ಬೀಳುವುದು ಸಹ ಬಹಳ ಹೊತ್ತು ಹಿಡಿಯಲಿಲ್ಲ. ಏನೋ ಅಗಾಧವಾದುದನ್ನು ಕಾಣುವಂತೆ ಅಂಥ ಮಹಾನುಭಾವರ ದರ್ಶನ ಮಾಡಬೇಕೆಂದ ಜನ ಹೋಗುತ್ತಿದ್ದರು.

ಎಷ್ಟು ವರ್ಷಗಳ ಮೇಲೆ ತಾನಿಂಥ ಸುದ್ದಿ ಕೇಳುತ್ತಿದ್ದೇನೆ. ಎಂದು ಕೊಂಡ ರಾಘಣ್ಣ ನಿಜ ಅಂದ್ರೆ ವೆಂಕಣ್ಣ ಊರು ಬಿಟ್ಟು ಹೋದಾಗಿನಿಂದ ತನ್ನ ಮನಸ್ಸು ಅವನ ಬಗ್ಗೆ ಎಷ್ಟು ತಳಮಳಿಸುತ್ತಿತ್ತು. ಎಷ್ಟು ಹಂಬಲಿಸಿತ್ತು. ಸಣ್ಣ ಹುಡುಗ ಹಾಲ್ಯಾವುದು ನೀರ್ಯಾವುದು ಎಂದು ತಿಳಿಯದಷ್ಟು ಅಭೋದ ಹುಡುಗ, ಹೊರಗಿನ ಪ್ರಪಂಚದ ತಿಳುವಳಿಕೆ ಇರಲಿಲ್ಲ ಊರಿಗೆ ಬಂದ ಛಪ್ಪರ ದೇವರ ಪಲ್ಲಕ್ಕಿ ಹಿಂದೆ ಬಂದ ಭಕ್ತರೊಡನೆ ಹೋದನೆಂದು ಯಾರೋ ಹೇಳಿದ್ದರು. ಅವನು ಮನೆ ಬಿಟ್ಟು ಹೋದಾಗಿನಿಂದ ತಾನು ಎಷ್ಟು ತಳಮಳಿಸಿದ್ದೆ. ಅಪ್ಪ ಸಾಯುವಾಗ ಹೇಳಿರಲಿಲ್ಲವೇ?

"ರಾಘು ವೆಂಕಣ್ಣ ಸಣ್ಣ ಹುಡುಗ ಲಗೂನೆ ತಾಯಿನ್ನ ಕಳಕೊಂಡು ಅನಾಥ ಆದ, ಈಗ ನಾನು ಬಾರದ ಲೋಕಕ್ಕೆ ಹೊಂಟಿನಪಾ ಅವನ್ನ ನಿನ್ನ ಕೈಯಾಗ ಹಾಕಿ ಹೋಗ್ತೀನಿ ರಾಘು ನೀನೂ ಲಗೂ ಲಗ್ನ ಆದಿ ಅಂದ್ರ ಈ ಮನಿಗೆ ಹೆಣ್ಣು ಆಸರ ಆಗಿ ಬರ್ತಾಳ ಹಂಗ ವೆಂಕಣ್ಣಗೂ ತಾಯಿ ಪ್ರೀತಿ ಸಿಗ್ತದ. ಅವನ್ನ ಕೈ ಬಿಡಬ್ಯಾಡಪಾ ಗುರುಕುಲಕ್ಕೆ ಕಳಿಸು ಸಂಸ್ಕೃತ ವೇದಾಧ್ಯಯನ ಅಂತ ಮಾಡಿಸೋ" ಎಂದು ಹೇಳಿದ್ದರು. ತಾನು ಅಪ್ಪನ ಕೈಯಲ್ಲಿ ಕೈಯಿಟ್ಟು ಹೇಳಿರಲಿಲ್ಲವೇ "ವೆಂಕಣ್ಣ ಈ ಮನಿ ಮಗನಪಾ ಅವಗ ಪರದೇಶಿತನಾ ಬರಲಾರ್ದಂಗ್ಹ ನೋಡ್ಕೋಳೋ ಜವಬ್ದಾರಿ ನಂದು ಅಂತ" ಆದ್ರ ಏನಾತು? ಹಗಲು ರಾತ್ರಿ ತನ್ನ ತಿರುಗಾಟ ಪುರೋಹಿತಿಕೆ ಅದೂ ಇದೂ ಅಂತ ಅವನ ಕಡೆ ಲಕ್ಷ್ಮ ಕೊಡ್ಲಿಲ್ಲ ಲಗ್ನಾಗಿ ಬಂದ ತನ್ನ ಹೆಂಡ್ತಿ ಅಂವಂಗ ತಾಯ್ತನ ತೋರಿಸಲಿಲ್ಲ ಅಂತಃಕರಣ ಮಾಡಿ ಮುಂದ ಕರೀಲಿಲ್ಲ. ಹೊಟ್ಟಿ ತುಂಬ ಊಟಕ್ಕೆ ಹಾಕಿ ಆದರಿಸಲಿಲ್ಲ. . . ಕಡೀಕ ಈ ಅಂಗಳದಾಗ ಹೆಜ್ಜೆ ಊರಿ ನಿಲ್ಲಲಿಕ್ಕೆ ಸುದ್ದಿ ಜಾಗಕೊಡಲಿಲ್ಲ. ಅದೇಲ್ಲ ತನಗ ತಿಳಿದಾಗ ಕೈಮೀರಿತ್ತು. ವೆಂಕಣ್ಣ ಊರು ಬಿಟ್ಟು ಹೋಗಿದ್ದ ನಾಕಾರ ತಿಂಗಳ ದುಃಖ ಆತು ಓಣಿ ಓಣಿ ಹುಡುಕಿದ್ದು ಆತು. "ಅಂವ ಛಪ್ಪರ ದೇವರ ಪಲ್ಲಕ್ಕಿ ಹಿಂದ ಗುಂಪಿನ್ಯಾಗ ಹೊಂಟಿದ್ದನ್ನ ನಾ ನೋಡಿದೆ" ಎಂದು ಹೇಳಿದರು ಯಾರೋ? ನಡುವೆ ಒಂದು ಸಲ ಶಿನಪ್ಪಜ್ಜ ಬಂದು ಹೇಳಿದ್ದರು. "ಅಂವಾ ತಿರುಪತಿಯೊಳಗೆ



ಇದ್ದಾನಪಾ ಅನನ್ಯ ಭಕ್ತಿಯಿಂದ ದೇವರ ಸೇವಾ ಮಾಡ್ತಾನಾ ಯಾವಾಗ ಮನಸಿಗೆ ತಿಳಿತದೋ ಅವಾಗ ಬರ್ಲಿ ಬಿಡು" ಎಂದಿದ್ದರು. ಆತು ತಾನಾಗಿ ಬರ್ಲಿ ಎಂದು ಸುಮ್ಮನಾದೆ.

ಒಂದು ಎರಡು ಮೂರು ಎಂದು ಎಷ್ಟು ವರ್ಷಗಳು ಉರುಳಿದವು ತನಗೂ ಮಕ್ಕಳಾದವು ಸಂಸಾರ ಬೆಳೆಯಿತು. ಸಂಸಾರ ತೂಗಿಸಲು ವೈದಿಕ ಪುರೋಹಿತಿಕೆ ಎಂದು ಹಳ್ಳಿ ಹಳ್ಳಿ ಅಡ್ಡಾಡುವುದರಲ್ಲೇ ತನ್ನ ದಿನಗಳು ಕಳೆದುಹೋಗುತ್ತಿದ್ದವು.

ಬರು ಬರುತ್ತಾ ತನಗೂ ಕೂಡ ವೆಂಕಣ್ಣನೆಂಬ ತಮ್ಮ ಇದ್ದಾನೇನೋ ಎಂದು ಮರೆತು ಹೋಗುವಷ್ಟು ತನ್ನ ಲೌಕಿಕ ಜಂಜಾಟದಲ್ಲಿ ಸಿಕ್ಕಿಕೊಂಡೆ, ಹೆಂಡತಿಗೂ ವಯಸ್ಸು ಜಾರುತ್ತಿತ್ತು ಮನಸ್ಸಿನ ಪಕ್ವತೆ ಎಲ್ಲಿಯೋ ಗೂಡುಕಟ್ಟಿಕೊಂಡದ್ದು ತಿಳಿಯಾಗುತ್ತಿರಬೇಕು ಆಗೀಗ ವೆಂಕಣ್ಣನನ್ನು ನೆನಪು ಮಾಡಿಕೊಂಡು ಕಣ್ಣೀರು ಹಾಕುತ್ತಿದ್ದಳು.

"ಹೆಣ್ಣಿನ ಧರ್ಮ ನಾ ಪಾಲಿಸಿಲ್ರೀ ನಾ ಅವನ ಪಾಲಿಗೆ ತಾಯಿ ಆಗ್ಲೀಲ್ಲ. ಈ ಮನಿಗೆ ತಕ್ಕ ಸೊಸೆ ಆಗ್ಲಿಲ್ಲ. . ಎಲ್ಲಿದ್ದಾನೋ? ಹ್ಯಾಗಿದ್ದಾನೋ?

"ಎಲ್ಯಾರ ಇರ್ಲಿ ಬಿಡು ಸುಖವಾಗಿರಲಿ" ಎನ್ನುತ್ತಿದ್ದೆ ತಾನು ಆದರೆ ಈಗ ಎಷ್ಟು ವರ್ಷಗಳ ಮೇಲೆ ಗಾಜಿನ ಚೂರೆಂದು ತಿಳಿದಿದ್ದು ಮಾಣಿಕ್ಯದಂತೆ ಬಂದಿದ್ದಾನೆ. ಅದು ಎಂಥಹ ಮಹಾತ್ಮನಾಗಿ ಬಂದಿದ್ದಾನೆ. ಊರಜನ ಎಲ್ಲಾ ಹಾಡಿ ಹೊಗಳುತ್ತಿದ್ದಾರೆ. ಕೊತ್ಲಪ್ಪನ ಗುಡಿಯೊಳಗೆ ಒಬ್ಬರು ದಾಸರು ಬಂದಾರಂತ ಮಹಾನುಭಾವರು ಸ್ವತಃ ವೆಂಕಪ್ಪನೇ ಬಂದ ಅವರ ನಾಲಿಗಿ ಮ್ಯಾಲೆ "ಪ್ರಸನ್ವೆಂಕಟ" ಅಂತ ಅಂಕಿತ ಕೊಟ್ಟಾನಂತೆ ಎಂಥಾ ಪುಣ್ಯವಂತರು ಅವರು ಗೋಪಾಲಬುಟ್ಟಿ ತಂಬೂರಿ, ದೇವರವಿಗ್ರಹ ಎಲ್ಲಾ ಪೂಜಾರರ ಮುಖಾಂತರ ಅನುಗ್ರಹ ಮಾಡಿ ಕೊಟ್ಟಾನಂತ ಓದು ಬರಹ ಬಾರದ ದಡ್ಡ ಅಂತಿದ್ವಿ. ಇವತ್ತೇ ಇಡೀ ಅಕ್ಷರ ಜ್ಞಾನಭಂಡಾರ ಅವರೊಳಗೆ ತುಂಬೇದ ಅವರೇ ಕೀರ್ತನಾ ಕಟ್ಟಿ ಹಾಡ್ತಾರ. ಭಗವಂತನ ನಾನಾ ರೂಪದ ಹಾಡು ಕಟ್ಟಿ ಅವನ ಸೇವಾ ಮಾಡ್ತಾರಂತ. ಸ್ವತಃ ವೆಂಕಪ್ಪನೆ ಬಂದು ಅಪ್ಪಣಿ ಕೊಟ್ನಂತ "ನಿನ್ನ ಊರಿಗೆ ಹೋಗಪಾ. . ನಿನಗೆ ನಾ ಅನುಗ್ರಹಿಸಿದ ಜ್ಞಾನಾನ ಎಲ್ಲರಿಗೂ ಹಂಚು ಅಂತ ಎಂಥಾ ಮಹಾತ್ಮರ ಅಂಥಾವ್ರನ ಪಡೆದ ಈ ಊರು ಎಂಥಾ ಪುಣ್ಯ ಮಾಡೇದ" ಎನ್ನುತ್ತಾ ಓಣಿ ಜನ ಗುಂಪು ಗುಂಪಾಗಿ ದಾಸರನ್ನು ನೋಡಲು ಹೋಗುತ್ತಿದ್ದಾರೆ. ಅಂಥದು ನಾವು ಯಾಕೆ ಹೀಗೆ ಕೂತಿದ್ದೇವೆ ಅನ್ನಿಸಿತು ರಾಘಣ್ಣನಿಗೆ ತಾವು ಮಾಡಿದ ತಪ್ಪು ತಮ್ಮ ವಿವೇಕವನ್ನು ಹಂಗಿಸುತ್ತೀದೆಯೇ? ವೆಂಕಣ್ಣನಿಗೆ ಮುಖ ತೋರಿಸಲು ತಮಗೆ ಹೀನಾಯ ಎನಿಸುತ್ತದೆಯೇ? ವಿಚಾರ ಮಾಡುತ್ತಾ ಕುಳಿತಿದ್ದ ಅವನ ಮುಂದೆ ಒಂದು ನಿಂತಳು ಕಾವೇರಿ ಯಾಕೋ ಅವಳ ಮುಖವು ಕೂಡ ಬಾಡಿ ಒಣಗಿದಂತಿದೆ. ಏನೋ ಹೇಳಬೇಕು ಎನ್ನುತ್ತಿದ್ದಾಳೆ. ಹೇಳಲಾಗುತ್ತಿಲ್ಲ ನೋವು ದುಃಖಗಳನ್ನೂ ನುಂಗಿ ನುಂಗಿ ಗಂಟಲುಬ್ಬಿ ಬಂದಂತೆ ಅವಳ ಕಣ್ಣಲ್ಲಿ ವೇದನೆ ಪಶ್ಚಾತ್ತಾಪದ ಅಲೆಗಳಲ್ಲಿ ಸಿಕ್ಕು ಒದ್ದಾಡುವಂತಿದೆ. ಕೇಳಲೋಬೇಡವೆ ಎಂಬಂತೆ ಕೇಳಿದಳು ಅವಳು

"ಸುದ್ದಿ ಕೇಳಿದ್ರೇನು? ಓಣ್ಯಾಗ ಊರಾಗ ಅದೇ ಸುದ್ದಿ ಮುಂಜಾವಿನಿಂದ ಒಬ್ಬರಿಲ್ಲಾ ಒಬ್ಬರು ಬಂದು ಕೇಳಿಕ್ಕೆ ಹತ್ಯಾರ. "ನಿಮ್ಮ ವೆಂಕಣ್ಣ ಮಹಾನುಭಾವ ದಾಸಶ್ರೇಷ್ಠ ಆಗಿ

ಬಂದಾರಂತೆ ನಾವೆಲ್ಲ ಅವ್ರನ್ನ ಹೋಗಿ ನೋಡಿದ್ವಿ ಕಣ್ಣ ಸಾರ್ಥಕ ಆದು ಏನು ತೇಜ ಏನು ಕಳೆ ಮುಖದಾಗ ಎಂಥಾ ವಿದ್ವತು ತುಂಬೇದ ಅವ್ರ ಹಾಡು ಕೇಳಿದ್ರ ಮನಸ್ಸು ತುಂಬಿ ಬರ್ತದ ಏನು ಸಾಹಿತ್ಯ ಏನು ಪದಗಳು ಶಬ್ದದ ತಂತಿ ಹಿಡಿದು ಮೀಟಿ ಮಿಟಿ ಅಕ್ಷರ ಶಬ್ದ ಮಿಡಿಲಿಕ್ಕೆ ಹತ್ಯಾರೇನೋ ಅನಸ್ತದ ನರಸಪ್ಪಯ್ಯ ಲಕ್ಷ್ಮೀಬಾಯಿ ಏನು ಪುಣ್ಯಾ ಮಾಡಿದ್ರು ಇಂಥಾ ಮಗನ್ನ ಪಡೀಲಿಕ್ಕೆ ಆದ್ರೇನು? ಅವರ ನಸೀಬ ಖೊಟ್ಟಿ ಅದ ಇಂಥ ಮಗನ್ನ ಮಹಾತ್ಮ ನೋಡು ನಸೀಬಿಲ್ಲ ಅಂತಿದ್ರು ಏನ್ರಿ ಅಂಥಾ ವೆಂಕಣ್ಣನನ್ನು ನೋಡು ಭಾಗ್ಯ ಇಲ್ಲೇನು ನಮಗ? ಎಂದು ಕಣ್ಣೊರಿಸಿಕೊಂಡಳು.

"ಯಾಕ ಹಿಂಗಂತಿ ಕಾವೇರಿ? ಅಂವಾ ಎಂಥಾ ಮಹಾತ್ಮ ಆದ್ರೂ ನಮ್ಮ ಮನಿ ಮಗ ಅಲ್ಲ? ಅಂವಾ ನಮ್ಮ ಅಂಗಳದಾಗ ಆಡಿ ಬೆಳೆದಿದ್ದು ನಮ್ಮ ಪುಣ್ಯ ಇವತ್ತೆ ಆ ಪುಣ್ಯ ಪವಿತ್ರರೂಪದಾಗ ಬಂದದ ನಾವೂ ಹೋಗಿ ನೋಡಿ ಧನ್ಯ ಆಗೋಣು. ಮನಿಗೆ ಬಾರಪಾ ಅಂತ ಕೈಜೋಡಿಸಿ ಕರಿಯೋಣ"

"ಆದ್ರ ವೆಂಕಣ್ಣ ಬರದಿದ್ರ? ನಾ ಎಂಥೆಂಥ ಕಷ್ಟ ಕೊಟ್ಟಿನಿ ಅಂವಗ ಪರದೇಶಿ ಹುಡುಗಾ ಬಾರಪಾ ಅಂತ ಮುಂದಕ ಕರದು ಒಂದು ತುತ್ತು ಅನ್ನ ಹಾಕ್ಲಿಲ್ಲ ನೆತ್ತಿಗೆ ಒಂದು ಬಟ್ಟು ಎಣ್ಣಿ ಹಚ್ಚಿ ಎರಿಲಿಲ್ಲ. ಅಂತಃಕರಣದಿಂದ ಮುಂದ ಕರದು ಮಾತನಾಡಲಿಲ್ಲ. ಎಂಥಾ ಪಾಪಿ ಜನ್ಮ ನಂದು ದೇವರ್‍ಯಾಕ ನನಗ ಇಂಥ ಬುದ್ಧಿ ಕೊಟ್ಟ ಎನ್ರಿ ನಡೀರಿ ನೀವು ಹೇಳಿದ್ದಂಗ ಕೈ ಜೋಡಿಸಿ ಕರಿಯೋಣು ಮುಂದಕ ಅವನ ಸಹವಾಸದಾಗ ನಾವು ಮಕ್ಕಳು ಉದ್ಧಾರ ಆಗೋಣು" ಎಂದು ಹೆಂಡತಿಯ ಮಾತನ್ನು ಕೇಳುತ್ತ ಉಸಿರು ಹಾಕಿದ ರಾಘಣ್ಣ

ಹೆಂಡತಿ ಹೇಳಿದಂತೆ ಮುಂದೆ ಅರ್ಧ ತಾಸಿನಲ್ಲೇ ಅವರಿಬ್ಬರು ಗುಡಿಯ ಹತ್ತಿರ ಬಂದಿದ್ದರು ಹತ್ತಿರ ಬಂದಂತೆ ಕೇಳುತ್ತಿದೆ ತಂಬೂರಿಯ ನಾದ ಅದರ ಜೊತೆಗೆ ಮಧುರವಾದ ಹಾಡಿನ ಧ್ವನಿ.

"ನನ್ನಯ್ಯಾ ನೀನೊಬ್ಬನೇ ಮಾರುತಿ ವರದ
ನನ್ನಯ್ಯಾ ನೀನೊಬ್ಬನೇ ॥ಪ॥

ಉನ್ನತ ತಂದೆ ಕೊಲ್ಲಲು ಒಲ್ಲಲು ತಾಯಿ
ಚಿನ್ನನುಳಿಸಿ ಕೊಂಡಾಳೆ ಬನ್ನಾ ಬಡುತ॥
ನಿನ್ನಚ್ಚೆಯೆನಲು ವಿಷಾನ್ನ ವನ್ನಿತಣ್ಣಗ
ವೆನ್ನಿವೆ ತನ್ನವರಿನ್ಯಾರೋ ನರಹರಿಯೇ॥"

ಆ ಮಾರುತಿಯ ಮುಂದೆ ನಿಂತು ಭಿನ್ನಯಿಸುವ ಅವರ ಭಕ್ತಿಯ ಈ ಪರಿ ಇಂಥದೆ ಭಕ್ತಿಗೆ ಒಲಿದವನಲ್ಲವೇ? ಆ ತಿಮ್ಮಪ್ಪ ಏಳು ಲೋಕದ ಒಡೆಯ ಎಷ್ಟು ಕಾರುಣ್ಯದಿಂದ ಇವರನ್ನು ಎತ್ತಿ ಹಿಡಿದ ಅಂಥ ಕರುಣಾಳುವಿನ ಸೇವಕ ಈ ಮಾರುತಿ.

ಅವನನ್ನು ಹಾಡಿ ಹೊಗಳುವ ದಾಸರ ಪದಗಳು ಏನು ಸಾಮಾನ್ಯವೇ? ಎಂಥ ತತ್ವ ಅಡಗಿದೆ ಆ ಪದಗಳಲ್ಲಿ ಆ ಭಕ್ತಿಭಾವದಲ್ಲಿ



"ಅಗ್ರಜಾವಜ್ಞ ಮಾಡಲು ಆ ವಿಭೀಷಣನು
ಶ್ರೀ ಪದಿಪಾದಕ್ಕೆರಗಲು ಗ್ರಪ್ಲವಗ ಉಗ್ರದಿ
ನಿಗ್ರಹಿಸಿ ನೀ ಗ್ರಹಿಸಿದೆ ಭಕ್ತಾಗ್ರಣಿ
ಹನುಮ ಮತಾಗ್ರದಿ ಪ್ರಸನ್ವೆಂಕಟ"

ಇಂಥ ಶ್ರೇಷ್ಠವಾದ ಪದಗಳು ಗಾನರೂಪದಲ್ಲಿ ಹರಳುಗಟ್ಟಿನಿಲ್ಲ ಬೇಕಾದರೆ ಆ ಭಗವಂತನ ಕೃಪೆಯಲ್ಲದೆ ಇನ್ನೇನು? ಅದೇನೋ ಸಂತೋಷದಿಂದಲೂ ಪಶ್ಚಾತ್ತಾಪದಿಂದಲೋ ರಾಘಣ್ಣನ ಕಣ್ಣಿನಲ್ಲಿ ನೀರು ತುಂಬಿದವು. ಬರೇ ಜನ ಹೇಳುತ್ತಿದ್ದಂತೆ ಎಂಥ ಸಾಹಿತ್ಯ ಅಡಗಿದೆ ಈ ಕೀರ್ತನೆಯಲ್ಲಿ ಎಂಥಹ ವಿಶೇಷ ಪದಗಳು ಬರೀ ಪದಗಳ ಭಕ್ತಿರಸ ಅಕ್ಷರದ ಅಕ್ಷಯ ಪಾತ್ರೆ ಪರಮಾತ್ಮನೇ ಅನುಗ್ರಹಿಸಿ ಕೊಟ್ಟಿದ್ದಲ್ಲವೇ? ತಾನು ವೇದ ಓದಿದೆ ಉಪನಿಷತ್ ಭಾರತ, ಭಾಗವತ ಎಂದು ಅಧ್ಯಯನ ಮಾಡಿದೆ ಆದರೆ ಒಂದಕ್ಷರವೂ ಹೃದಯಲ್ಲಿ ನಿಂತು ತಲೆಯಲ್ಲಿ ಬಿತ್ತಿ ಬೆಳೆಯಲಿಲ್ಲ ಬರೀ ಹೊಟ್ಟೆ ಪಾಡಿಗಾಗಿ ಹಿಡಿದುಕೊಂಡು ದಾರಿಗೆ ಮಾತ್ರವಾಯಿತು.

ಆದರೆ ವೆಂಕಣ್ಣ?

ಎಲ್ಲ ವೇದ ಉಪನಿಷತ್ತ್‌ಗಳ ಸಾರವನ್ನೇ ಆ ಪದಗಳಲ್ಲಿ ತುಂಬಿ ಹಾಡುತ್ತಿದ್ದಾನೆ ಎಲ್ಲಿಂದ ಕಲಿತ ಇಷ್ಟೆಲ್ಲ? ಇಲ್ಲ ಇದು ಕಲಿತದ್ದಲ್ಲ, ಆ ತಿರುಪತಿ ವೆಂಕಪ್ಪನ ವರಪ್ರಸಾದ ಸ್ವತಃ ವೆಂಕಪ್ಪನೇ ಬಂದು ಇವನ ನಾಲಿಗೆ ಹೊರಗೆಳೆದು ಜ್ಞಾನದ ಬೀಜಾಕ್ಷರ ಬಿತ್ತಿದನಂತಲ್ಲ? ಅಂದ ಮೇಲೆ ವೇದದ ಸಾರವೇ ಇವನ ನಾಲಿಗೆ ಮೇಲೆ ಅಡಗದೆ ಇನ್ನೇನು? ಅಂತಲೇ ಇಂತಹ ಕೀರ್ತನೆಗಳು ಹುಟ್ಟಿಕೊಂಡು ಕೇಳುವವರ ಎದೆಯಲ್ಲಿ ಭಕ್ತಿ ಭಾವ ಸ್ಫುರಿಸುತ್ತಿವೆ.

ರಾಘಣ್ಣ ಹೆಂಡತಿಯೊಡನೆ ಬಂದು ನಿಂತಿದ್ದ ಎದುರಿಗೆ ಗುಂಪು ಗುಂಪಾಗಿ ಕುಳಿತ ಜನ ಗರ್ಭಗುಡಿಯಲ್ಲಿ ಹನುಮಪ್ಪನೂ ಕೂಡ ತನ್ನ ಕೀರ್ತನೆಯನ್ನು ತದೇಕಚಿತ್ತದಿಂದ ಕೇಳುತ್ತಿದ್ದಾನೋ ಏನೋ ಎನ್ನುವಂತೆ ಅರೆನಿಮಿಲಿತನಾಗಿ ನಿಂತಿದ್ದಾನೆ. ಅವನ ಮುಂದೆ ಉರಿಯುವ ನಂದಾದೀಪದಂತೆ ಆ ವೆಂಕಣ್ಣನ ಕಣ್ಣಲ್ಲೂ ಎಂಥಹ ಪ್ರಕಾಶಮಾನವಾದ ಜ್ಯೋತಿ ಅಡಗಿದೆ ಈ ಕಡೆಯ ಪರವೇ ಇಲ್ಲದಂತೆ ಹರಿಕೀರ್ತನೆಯನ್ನು ಹಾಡು ಮುಗಿಸಿ ಒಂದು ಗಳಿಗೆ ಕಣ್ಮುಚ್ಚಿ ಕುಳಿತರು.

ಹಾಡು ಮುಗಿದಂತೆ ಕುಳಿತ ಜನ ಅವರ ಪಾದಕ್ಕೆ ನಮಸ್ಕಾರ ಮಾಡಿ ಹೊರಡತೊಡಗಿದರು. ಹೊರಗಿನ ಸೂರ್ಯ ಈಗ ಮೇಲೆರುತ್ತ ನಡೆದಿದ್ದ ಗುಡಿಯಲ್ಲಿ ಜನ ಖಾಲಿಯಾಗಿ ಗಳಿಗೆಯಲ್ಲಿ ಮೌನ ಆವರಿಸಿತ್ತು ಮಧ್ಯಾಹ್ನ ಏರುತ್ತೆ ನಡೆದಿದ್ದರಿಂದ ತಮ್ಮ ಮುಂದೆ ಯಾರೋ ಬಂದು ನಿಂತಂತಾಗಿ ದಾಸರು ತಲೆ ಎತ್ತಿ ನೋಡಿದರು. ಈಗ ಅವರಿಗೆ ಕಂಡದ್ದು ಪಶ್ಚಾತ್ತಾಪದಿಂದ ದಗ್ದವಾಗಿ ನಿಂತ ಎರಡು ಹಿರಿಯ ಜೀವಿಗಳು ಮುಖದಲ್ಲಿ ಮಡುಗಟ್ಟಿದ ನೋವು ಎಲ್ಲಿಯೋ ಒಂದು ಕಡೆ ಸಂತಸದ ಅಲೆ ಅವರ ಮುಂದೆ ಬಂದು ನಿಂತ ರಾಘಣ್ಣ ಎರಡು ಕೈ ಜೋಡಿಸಿದ

"ವೆಂಕಣ್ಣ ಇವತ್ತೇ ನಾನು ನಿನ್ನ ಅಣ್ಣ ಅಂತ ಹೇಳಿಕೊಳ್ಳಲಿಕ್ಕೆ ಮನಸ್ಸು ಎಷ್ಟು ಸಂತೋಷದಿಂದ ತುಂಬಿ ಬರ್ತದ. ನಮ್ಮ ವಂಶ ಇವತ್ತು ಧನ್ಯ ಆತು ವೆಂಕಣ್ಣ ಹಿಂದಿಂದು, ಮುಂದಿಂದು ಎಷ್ಟೇಷ್ಟೋ ತಲೆಮಾರಿಗಳು ಎಲ್ಲ ಕುಲಕೋಟಿ ಉದ್ಧಾರ ಆತಪಾ ಕಿವಿಯಿಂದ ಕಿವಿಗೆ ಕೇಳಿದ್ದೆ ನಿನ್ನ ಬಗ್ಗೆ ಆದ್ರ ಇವತ್ತೆ ನಿನ್ನ ನೋಡಿ ನಾನು ಧನ್ಯ ಆದೇ, ವೆಂಕಣ್ಣ"

ದಾಸರ ಮುಖದ ಮೇಲೆ ಮಂದಸ್ಮಿತ ನಗುವೊಂದು ಹಾಯ್ದು ಹೋಯ್ತು ಅವರು ಎದುರಿಗೆ ನಿಂತ ಅಣ್ಣನನ್ನೊಮ್ಮೆ ಅತ್ತಿಗೆಯನ್ನೊಮ್ಮೆ ನೋಡಿ ತಂಬೂರಿ ಕೆಳಗಿಟ್ಟು ಎದ್ದು ಬಂದು ಅಣ್ಣನಿಗೆ ನಮಸ್ಕಾರ ಮಾಡಿದ ರಾಘಣ್ಣ ಸಂಕೋಚದಿಂದ

"ಬ್ಯಾಡಪಾ ನೀ ನನಗೆ ನಮಸ್ಕಾರ ಮಾಡೋದು ಬ್ಯಾಡಾ ನನಗ ಅಂಥಾ ಯೋಗ್ಯತಾಇಲ್ಲಪ್ಪಾ" ಎಂದ ವಿಷಣ್ಣದ ಧ್ವನಿಯಿಂದ

"ಇದು ಯೋಗ್ಯತಾದ ಪ್ರಶ್ನೆ ಅಲ್ಲ ಅಣ್ಣ ಗೌರವದ ಮಾತು ನೀವು ದೊಡ್ಡವರು ನನ್ನ ತಂದೆ ತಾಯಿ ಸ್ಥಾನಕ್ಕೆ ನಿಂತವರು" ಎಂದು ಅಲ್ಲಿಯೇ ನಿಂತ ಅತ್ತಿಗೆ ಕಾಲಿಗೂ ನಮಸ್ಕರಿಸಿದಾಗ ಆಕೆ ಸೆರಗಿನಿಂದ ಕಣ್ಣುಮುಚ್ಚಿಕೊಂಡು ಅಳುವನ್ನು ತಡೆಯುತ್ತಿದ್ದಳು. ಮತ್ತೇ ಸಂಕೋಚದಿಂದ ಹೆಜ್ಜೆ ಹಿಂದಿಟ್ಟಳು.

"ಬ್ಯಾಡಪಾ ವೆಂಕಣ್ಣ ತಾಯಿ ಸ್ಥಾನಕ ನಿಂತೀರಿ ಅಂದಿ ಅಂಥಾ ಯೋಗ್ಯತಾ ನಾ ಕಳ್ಕೊಂಡಿನಪಾ ಈಗ ನಾ ಕೇಳೋದು ಕ್ಷಮಾ ಒಂದ"

"ಯಾಕ ಹಂಗಂತೀರಿ ವೈನಿ ಕ್ಷಮಾ ಮಾಡುವಂಥಾ ತಪ್ಪು ಏನು ಮಾಡೀರಿ ನೀವು ತಾಯಿ, ಯಾವತ್ತೂ ತಪ್ಪು ಮಾಡಂಗಿಲ್ಲವೈನಿ" ಎಂಥ ಕರುಣೆ ದಯೇ ಅನನ್ಯತೆ ತುಂಬಿದ ಅವರ ದನಿಯಲ್ಲಿ.

ಅದೇ ಪಶ್ಚಾತ್ತಾಪದ ಧ್ವನಿಯಲ್ಲಿ ಹೇಳುತ್ತಿದ್ದಾಳೆ ಅವಳು

"ಆದ್ರ ನಾ ಪಾಪಾ ಮಾಡಿನಪಾ ಅತ್ತಿಗೆ ಅಂದ್ರ ತಾಯಿ ಸ್ಥಾನಕ್ಕೆ ನಿಂತಾರೆ ಅಂಥಾ ಅಂತಃಕರಣ ಪ್ರೀತಿ ವಾತ್ಸಲ್ಯ ನಾ ನಿನಗೆ ಕೊಡ್ಲಿಲ್ಲಪಾ ಮುಂದಕ ಕರೆದು ಮೈದಡವಲಿಲ್ಲ ಭೂಮಿಗೆ ಭಾರ ಆಗಿ ಯಾಕ ಹುಟ್ಟದಿ ಅಂತ ಹೀಯಾಳಿಸಿದೆ. ಬಿಸಿಲು, ನೆರಳು ಅನ್ನದ ದನಾ ಕಾಯಲಿಕ್ಕೆ ಕಳಿಸ್ತಿದ್ದೆ ನೀ ಓದು ಬರಹ ಕಲಿಬಾರ್ದು ಅಂತ ಕೈತುಂಬ ಕೆಲಸ ಹಚ್ತಿದ್ದೇ ಬಿಸಲಾಗ ಬಂದಾಂವಾ ಒಂದು ವಾಟಗಾ ಮಜ್ಜಿಗಿ ಕೇಳ್ದಿ ಅಂತ ಹೀನಾಯ ಮಾಡಿ ಬೈದೆ ವೆಂಕಣ್ಣ ಸಾಧ್ಯ ಆದ್ರ ನನ್ನ ಕ್ಷಮಾ ಮಾಡಪಾ ಖರೇ ಅಂದ್ರ ಕ್ಷಮಾ ಕೇಳೋ ಯೋಗ್ಯತಾನೂ ನನಗಿಲ್ಲ ಆದ್ರ ನಮ್ಮ ಮ್ಯಾಲೇ ಕರುಣಾ ಇಟ್ಟು ಈಗ ಮನಿಗೆ ನಡಿಯಪಾ ನಾವು ಮಾಡಿದ ತಪ್ಪಿಗೆ ನಾವು ಪಶ್ಚಾತ್ತಾಪ ಪಟ್ಟೇವಿ. ಪ್ರಾಯಶ್ಚಿತ್ತದ ಹಾದಿ ತೋರಿಸು ನಮಗೂ" ಎಂದಳು ಕಾವೇರಿ ಕೈಮುಗಿದು

"ಬ್ಯಾಡ್ರಿ ವೈನಿ ನೀವು ಅಂಥಾ ಮಾತಾಡಿ ನನ್ನ ಸಣ್ಣವನ್ನ ಮಾಡಬ್ಯಾಡ್ರಿ ಖರೇ ಅಂದ್ರ ನಾನಽ ನಿಮಗೆ ಅಜನ್ಮ ಋಣಿಯಾಗಿರ್ಬೇಕು. ನನ್ನ ಈ ಹಾದಿಗೆ ಹಚ್ಚಿದವ್ರು ನೀವಽ ಲೌಕಿಕ ಎಲ್ಲ ಮಾಯಾ ದೇವರನ್ನ ಕಾಣದೊಂದು ಖರೇ ಹಾದಿ ಅಂತ ಪರಿಜ್ಞಾನ ಹುಟ್ಟಿಸಿದವ್ರು ನೀವೇ"



"ಬ್ಯಾಡಪಾ ವೆಂಕಣ್ಣ ಇಂಥಾ ಮಾತಿನಿಂದ ನನ್ನ ಚುಚ್ಚಬ್ಯಾಡ" ಎಂದಳು ಕಾವೇರಿ ನೋವಿನಿಂದ

"ಇಲ್ಲಾ ವೈನಿ ಇದು ಚುಚ್ಚು ಮಾತಲ್ಲ ನನ್ನ ಆಂತರ್ಯದ ಮಾತು ನಿಮ್ಮ ಹೀನಾಯ ನಿಮ್ಮ ಅವತ್ತಿನ ಮಾತು ಇವತ್ತು ನನ್ನ ಪಾಲಿಗೆ ಜ್ಞಾನದ ಬೆಳಕಾಗ್ತದ ಅಂತ ನನಗೆ ತಿಳಿದಿರಲಿಲ್ಲ. ನೀವು ಮಾತನಾಡಿದ್ದು ನಿಮಿತ್ತ ಅಷ್ಟೇ. ಆ ಭಗವಂತ ನಿಮ್ಮ ಕಡಿಂದ ಅಂಥಾ ಮಾತಡ್ಸಿದ್ದು ಅಜ್ಞಾನದ ಕೂಪದೊಳಗೆ ಬಿದ್ದಿದ್ದ ನನ್ನನ್ನು ಅಂವಾ ಕೈ ಹಿಡಿದು ಎತ್ತ ಬೇಕಾಗಿತ್ತು. ಅದಕೊಂದು ನಿಮಿತ್ತ ಬೇಕಾಗಿತ್ತು. ನನ್ನ ಅಂತರಾತ್ಮಾನ ಎಚ್ಚರಿಸಬೇಕಾಗಿತ್ತು. ಅದರ ಅವತ್ತಿನ ನಿಮ್ಮ ಮಾತು ಚಾಟಿ ಏಟಿನಂತೆ ಹೊಡದು ಎಬ್ಬಿಸ್ತು. ಲೌಕಿಕದ ಯಾವ ಸಂಬಂಧಗಳು ಬ್ಯಾಡಾ ಭಗವಂತನ ಸಾನಿಧ್ಯವೇ ನನ್ನ ಮುಕ್ತಿ ಮಾರ್ಗ ಅಂದು ಕೊಂಡು ಹೊಂಟೆ, ವೈನಿ ನೀವು ಅವತ್ತು ಹಂಗ ಮಾತಾಡದಿದ್ರೆ ನಾನು ಇನ್ನೂ ದನಾ ಕಾಯಕೋತ ಇರ್ತಿದ್ನೋ ಏನೋ? ಇದಕ ನಿಮ್ಮನ್ನು ನಿಮಿತ್ತ ಮಾಡಿದ ಆ ಶ್ರೀ ಹರಿ ಖರೇ ಅಂದ್ರ ನಾನು ಎಂದೆಂದಿಗೂ ನಿಮಗ ಋಣಿ ಆಗಿರ್ಬೇಕು ಎನ್ನುತ್ತಾ ದಾಸರು "ಹರೇ ಶ್ರೀನಿವಾಸ" ಎಂದು ಗೋಡೆಗೊರಗಿ ಕುಳಿತರು. ಹೊತ್ತೇರಿದಂತೆ ಬಿಸಿಲುಗೋಡೆ ಗುಂಟ ಏರುತ್ತಿತ್ತು. ಪೌಳಿಯಲ್ಲಿ ನೀರವವಾದ ಮೌನ ಮಡುಗಟ್ಟಿ ನಿಂತಿತ್ತು ಅದಕ್ಕೆಲ್ಲ ಸಾಕ್ಷಿಯಾಗಿ ಕುಳಿತಂತೆ ಅವರ ಪಕ್ಕ ದೇವರು ಕರುಣಿಸಿದ ಗೋಪಾಲಬುಟ್ಟಿ ದೇವರಪೆಟ್ಟಿಗೆ ಇತ್ತು. ಅವರ ತೊಡೆಯ ಮೇಲೆ ನಿಶ್ಚಿಂತೆಯಿಂದ ಮಲಗಿದ ಮಗುವಿನಂತೆ ತಂಬೂರಿ ಇತ್ತು. ಅವರ ಬದುಕಿನ ಸಾರ ಅರ್ಥ ಅವುಗಳಲ್ಲೇ ಅಡಗಿದೆ ಎಂಬಂತೆ.

ಆ ಮೌನದಲ್ಲಿ ದೈನ್ಯ ಕಡೆದುಬಂದಂತೆ ಮಾತಾಡಿದ ರಾಘಣ್ಣ "ವೆಂಕಣ್ಣಾ ಮನಿಗೆ ನಡಿಯಪಾ" ದಾಸರು ಮಾತನಾಡಲಿಲ್ಲ.

"ನಡಿಯಪಾ ವೆಂಕಣ್ಣ" ಎಂದಳು ಅತ್ತಿಗೆ

ಪೂಜಾರರು ಇವರ ಸಂಬಂಧಗಳಿಗೆ ನಿರ್ಧಾರಗಳಿಗೆ ಸಾಕ್ಷಿ ಎಂಬಂತೆ ಮುಂದಿನ ಹಾದಿ ಯಾವುದು ಎಂಬಂತೆ ಕೂತಿದ್ದರು.

ತಿರುಪತಿಯಿಂದ ಬಂದ ಮೇಲೆ ದಾಸರಿಗೀಗ ಯಾವ ಸಂಬಂಧಗಳು ಕ್ಷಣಿಕ ಇನ್ನುವುದು ಗೊತ್ತಿತ್ತು. ಆದರೆ ಯಾವುದನ್ನು ಬಿಡಲು ಸಾಧ್ಯವಿತ್ತು? ಹುಟ್ಟಿ ಬಂದ ಮೇಲೆ ಮನುಷ್ಯನಿಗೆ ಕೆಲವು ಸಾಮಾಜಿಕ, ಲೌಕಿಕ ಹೊಣೆ ಇದ್ದೇ ಇರುತ್ತವೆ. ಅದು ಅವನು ಬಾಳುವ ರೀತಿ ನೀತಿಯಲ್ಲಿ.

ತಾನು ಊರು ಬಿಟ್ಟು ತಿರುಪತಿಗೆ ಹೋಗಿ ತನ್ನ ಸ್ವಾಮಿಯ ಪಾದಧೂಳಿ ದೊರೆಯುವವರೆಗೆ ತಾನು ಅಮಾಯಕನಂತಿದ್ದೆ ತನಗೆ ತನ್ನ ಉದ್ಧಾರದ ದಾರಿ ಗೊತ್ತಿರಲಿಲ್ಲ. ಇನ್ನು ಲೋಕದ ಸಮಾಜದ ಉದ್ಧಾರ ಹೇಗೆ ಮಾಡಿಯೇನು? ಎನಿಸುತ್ತಿತ್ತು ಆದರೆ ತನ್ನಪ್ಪ ಆ ಭಗವಂತತನ್ನ ಮೇಲೆ ಅಂತಃಕರಣ ಕರುಣೆ ಇಟ್ಟು ತನ್ನ ತಲೆಯಲ್ಲಿ ಲೋಕದ ಜ್ಞಾನ ತುಂಬಿದ, ಜ್ಞಾನದ ಭಂಡಾರ ಕೈಗೆಕೊಟ್ಟು ವೆಂಕಣ್ಣ ಊರಿಗೆ ಹೋಗಿ ಇದನ್ನೆಲ್ಲ ಸತ್ಪಾತ್ರರಿಗೆ ಅಜ್ಞಾನಿಗಳಿಗೆ ಹಂಚಿ ಹಾದಿತೋರಿಸು ಎಂದು. ಈ ಊರಿನ ಹಾದಿ ಅವನೇ ತೋರಿದ ಹಾದಿಯಲ್ಲವೇ? ಅಂದ

ಮೇಲೆ ಸಂಬಂಧಗಳು ಸಮಾಜದ ಬಂಧನ ಬೇಡ ಅಂದರೆ ಹೇಗೆ? ಅದರಲ್ಲಿದ್ದು ಕೊಂಡೆ ತಾನು ತನ್ನ ಸಾಧನೆಯ ಹಾದಿ ಕೊಂಡುಕೊಳ್ಳಬೇಕು ಮುಕ್ತಿಗೆ ಮಾರ್ಗ ಹುಡುಕಬೇಕು. ಸಂಸಾರ ಬಂಧನಕ್ಕೆ ಸಂಬಂಧಗಳಿಗೆ ಅಂಟಿಯೂ ಅಂಟದಂತಿರಬೇಕು. ದಾಸರ ವಿಚಾರಧಾರೆಗೆ ಅಡ್ಡಿ ಎಂಬಂತೆ ಮತ್ತೆ ರಾಘಣ್ಣ ಹೇಳಿದ.

"ನಡೀ ವೆಂಕಣ್ಣ ನಿನಗ ಸಂಸಾರ ಬಂಧನ ಬ್ಯಾಡ ಅಂದ್ರೂ ನಮಗೆ ನಿನ್ನ ಜೋಡಿ ಬಂಧನ ಬೇಕು ಹೂವಿನ ಜೋಡಿ ನಾರು ಸ್ವರ್ಗಕ್ಕೆ ಹೋದ್ಹಂಗ ನಿನ್ನ ಸಾನಿಧ್ಯದಾಗ ನಮ್ಮ ಉದ್ಧಾರದ ಹಾದಿ ಆದ ನಡೀ" ಎಂದು ಮುಂದೆ ಬಂದು ದಾಸರನ್ನು ಅನನ್ಯ ಪ್ರೀತಿಯಿಂದ ಎಬ್ಬಿಸಿ ಅವರ ಕೈ ಹಿಡಿದು

"ನಮ್ಮ ಮ್ಯಾಲೆ ದಯಾ ತೋರಸಿ ನೀ ಮನಿಗೆ ಬರ್ಬೇಕಂತ ನಮ್ಮ ಆಶಾನಪಾ ನೀ ಹುಟ್ಟಿ ಬೆಳೆದ ಮನಿ ಅದು ನಿನ್ನ ಹೆಜ್ಜೆ ಗುರುತು ಅವ ಅವ್ವಾ ಅಪ್ಪನ ನೆನಪ ಅದ ಅವರ ಆಶೀರ್ವಾದ ನೆಲ ಅದು ಮನಿ ಅಂಗಳ, ಪಡಸಾಲಿ ಕಂಬ ಗ್ವಾಡಿ, ದೇವರಮನಿ ಎಲ್ಲಾ ನಿನ್ನ ಸಲುವಾಗೇ ಕಾಯಲಿಕ್ಕೆ ಹತ್ತಿವೆ. ಬಾ ವೆಂಕಣ್ಣ" ಎಂದು ಅನನ್ಯತೆಯಿಂದ ಅವರನ್ನು ಎಬ್ಬಿಸಿಕೊಂಡು ಮುಂದೆ ನಡೆದ.

ರಾಘಣ್ಣ, ದಾಸರು, ಕಾವೇರಿ, ಬರುತ್ತಿದ್ದಂತೆ ಓಣಿಯವರೆಲ್ಲ ಹೊರಬಾಗಿಲಿಗೆ ನಿಂತು ನೋಡುತ್ತಲೇ ಇದ್ದಾರೆ. ಎಂಥಹ ತೇಜ, ಎಂಥಹ ದೈವಿಕಳೆ ಅವರ ಮುಖದಲ್ಲಿ ಶಾಂತ ಸಮುದ್ರದಂಥ ಮುಖ ಭಾವ ಕರುಣೆಯೇ ಮೈತುಂಬಿ ಬಂದಂತೆ, ಈತ ನಮ್ಮ ವೆಂಕಣ್ಣನೇ? ಸಣ್ಣ ಹುಡುಗ ಇದ್ದಾಗ ಮಖೀನನಾಗಿ ಓಣಿಯಲ್ಲಿ ತಿರುಗುತ್ತಿದ್ದ. ಆಕಳು ಕರುಗಳನ್ನು ಮೇಯಿಸಲು ಹೋಗುತ್ತಿದ್ದ. ಒಬ್ಬನೇ ಗಿಡದ ಬುಡದಲ್ಲಿ ಕೂತು ಆಕಾಶಕ್ಕೆ ಮುಖ ಮಾಡಿ ಏನನ್ನೋ ಹುಡುಕುತ್ತಿದ್ದ ದೈನಾಸಭಾವದಲ್ಲಿ ಎಲ್ಲರನ್ನು ನೋಡುತ್ತಿದ್ದ ತಂದೆ ತಾಯಿ ಇಲ್ಲದ ಪರದೇಶಿ ಹುಡುಗನಿಗೆ ಇಷ್ಟನ್ನೂ ಬಿಟ್ಟರೆ ಇನ್ನೇನು ಮಾಡಲು ಸಾಧ್ಯವಿತ್ತು? ಅಕ್ಷರದ ಪರಿಜ್ಞಾನವೇ ಇಲ್ಲದ ಹುಡುಗ ಇವತ್ತು ಎಂಥೆಂಥಹ ಕೀರ್ತನೆಗಳನ್ನು ರಚಿಸಿ ಹಾಡುತ್ತಾ ಕೇಳುಗರ ಮನದಲ್ಲಿ ಭಾವ ತುಂಬಿ ತೇಲಾಡಿಸುವಂಥ ಶಕ್ತಿ ಪಡೆದಿದ್ದಾನೆ. ಸುತ್ತೆಲ್ಲ ಕೇಳಿದರೂ ಇವರ ಗುಣಗಾನವೇ ಇವರು ರಚಿಸಿದ ಹಾಡುಗಳನ್ನು ಹಾಡುತ್ತಾ ಭಕ್ತಿಯಿಂದ ಮೈಮರೆಯುತ್ತಿದ್ದಾರೆ ಜನ, ಯಾರು ಕೊಟ್ಟರು ಇಂಥಹ ಶಕ್ತಿಯನ್ನು ಇವರಿಗೆ ಸ್ವತಃ ಆ ತಿರುಪತಿ ತಿಮ್ಮಪ್ಪನೇ ಇವನ ಭಕ್ತಿಗೆ, ಆರ್ತರವಕ್ಕೆ, ಹಂಬಲಕ್ಕೆ, ಮೆಚ್ಚಿ ಅಂಕಿತಕೊಟ್ಟು ಹರಸಿಕಳಿಸಿದ್ದಾನಂತಲ್ಲ. ಇನ್ನು ಕೇಳಬೇಕೆ ಇವರ ಜ್ಞಾನದ ಪರಿಧಿಯನ್ನು ಪರಮಾತ್ಮನೇ ಕೃಪೆ ತೋರಿದ ಮೇಲೆ ಇಂಥಹ ಮಹಾಮಹಿಮ ತಮ್ಮೂರಿನವ ತಮ್ಮ ಕಣ್ಣೆದುರೇ ಆಡಿ ಬೆಳೆದವ ಇಂತಹ ಅಗಾಧವಾದ ಹಮ್ಮೆಯಭಾವ ಎಲ್ಲರಲ್ಲೂ ತುಂಬಿ ತುಳುಕುತ್ತಿತ್ತು.

ದಾಸರು ಮನೆಗೆ ಬಂದ ಮೇಲೆ ದಿನಗಳು ಒಂದೊಂದಾಗಿ ಉರುಳುತ್ತಿದ್ದವು. ಅದರೊಡನೆ ಅವರಿಗೆ ತಮ್ಮ ಬಾಲ್ಯದ ಎಷ್ಟೊಂದು ಘಟನೆಗಳು ಸಂದರ್ಭಗಳು ನೆನಪಾಗುತ್ತಿದ್ದವು ಇದೇ ಅಂಗಳದಲ್ಲಿ ತಾ ಆಡಿ ಬೆಳೆದಿದ್ದು, ಸಾಯುವಾಗ ಅವ್ವ ತನ್ನ ಕೈ ಹಿಡಿದು ಅತ್ತಿದ್ದು, "ಯಾರಿಲ್ಲದವರಿಗೆ ಭಗವಂತ ಇದ್ದಾನೆ ಕಂದ" ಎಂದು ಹೇಳುತ್ತಿದ್ದುದು ಅಪ್ಪನ ಕೈ ಹಿಡಿದು ಅಂಗಳ ಓಣಿ ತುಂಬ ಅಡ್ಡಾಡಿದ್ದು ಅವ್ವ ಅಪ್ಪ ಬದುಕಿನಿಂದ ದೂರವಾದ ಮೇಲೆ ಈ



ಅನಾಥನಿಗೆ ರಕ್ಷಕನಾಗಿ ನಿಂತವ ಆ ಭಗವಂತ, ಇಲ್ಲಿದ್ದಾಗಲೆಲ್ಲಾ ತನ್ನ ಒಂಟಿತನಕ್ಕೆ ಸಂಗಾತಿಗಳಾಗಿ ನಿಂತಿದ್ದು ಈ ಮೂಕಪ್ರಾಣಿಗಳಾದ ಗಂಗೆ ತುಂಗೆ ಕಾವೇರಿ ಸಂಜೆಯಾದರೆ ತಾನು ಅವುಗಳ ಕೊಟ್ಟಿಗೆ ಹತ್ತಿರ ಹೋದರೆ ತಮ್ಮ ನಾಲಿಗೆಯಿಂದ ಅಷ್ಟು ಅಂತಃಕರಣದಿಂದ ತನ್ನ ಮೈ ಸವರುತ್ತಾ ತಾಯಿ ಪ್ರೀತಿ ತೋರಿಸುತ್ತಿದ್ದವು ಮೇಯಿಸಲು ನದಿಯಾಚೆ ಬಯಲಿಗೆ ಕರೆದುಕೊಂಡು ಹೋದರೆ ತನ್ನ ಸುತ್ತಮುತ್ತಲೇ "ಅಂಬಾ" ಎನ್ನುತ್ತಾ ಸುತ್ತುತ್ತಿದ್ದವು ಬಂದ ಮೇಲೆ

"ವೆಂಕಣ್ಣ ನೀ ಮನಿಬಿಟ್ಟು ಹೋದ ಮ್ಯಾಲೆ ಎಂಟಾನೆಂಟು ದಿನ ಯಾವು ದನಗಳೂ ಮೇವು ಮುಟ್ಟಿರಲಿಲ್ಲಪಾ ಅಂಬಾ ಎನ್ನುತ ಏನೋ ಹುಡುಕೋಹಂಗ ಕರುಳು ಕೊಯ್ಯು ಹಾಗೆ ಒದರತಿದ್ವು ಮೂಕಪ್ರಾಣಿ ಅವು. ಎಂಥಾ ಪ್ರೀತಿ ಅಂತಃಕರಣ ತೋರಸ್ತಿದ್ವು" ಎಂದಿದ್ದ ಇದೇ ವೈನಿ ಕಣ್ಣಿಗೆ ಸೆರಗೊತ್ತಿಕೊಂಡು

"ಆ ದನಗೊಳಿಗಿಂತಾ ನಾವು ಕಡಿಯಾದ್ವಿ ಏನಪಾ" ಎಂದಿದ್ದರು ಅವರ ವರ್ತನೆಗೆ ಅವರೀಗೀಗ ಪಶ್ಚಾತ್ತಾಪವಾಗಿರಬಹುದು. ತಿರುಗಿ ಬಂದಮೇಲೆ ಅವ್ವನದೆ ಅಂತಃಕರಣ ತೋರಿಸುತ್ತಿದ್ದರು. ಕೂಡ, ತಾನು ಹೇಳಿದ್ದೆ " ನಿಮ್ಮ ತಪ್ಪಿಗೆ ನೀವು ಪಶ್ಚಾತ್ತಾಪ ಪಟ್ಟಿರಬಹುದು ವೈನಿ ಆದ್ರ ನನ್ನ ಸಾಧನೆಗೆ ಹಾದಿ ತೋರಿಸಿದವ್ರು ನೀವು ಹಂಗಾಗಬೇಕಂತ ದೇವ್ರು ನಿಮಗೆ ಆ ಬುದ್ಧಿ ಕೊಟ್ಟಿರಬಹುದು ಇಲ್ಲಾಂದ್ರೆ ನಾ ತಿರುಪತಿಗೆ ಆ ನಮ್ಮಪ್ಪ ಭಗವಂತನನ್ನ ಹುಡುಕಿಕೊಂಡು ಹೋಗಲಿಕ್ಕೆ ಆಗ್ತಿತ್ತೇನು?

ಆ ಶ್ರೀ ಹರಿಪಾದಕ್ಕೆ ಬಿದ್ದು ನೀನೇ ನನ್ನ ಅವ್ವಾ ಅಪ್ಪಾ ಅಂತ ಅಲ್ಲೇ ಪ್ರಾಣಾರ್ಪಣಮಾಡ್ತೀನಿ ಅನ್ನು ಸಮರ್ಪಣಭಾವ ಬರ್ತಿತ್ತೇನು? ಖರೇ ಅಂದ್ರ ವೈನಿ ನಾ ನಿಮಗೆ ಅನಂತಾನಂತ ಕೃತಜ್ಞತಾ ಹೇಳ್ಬೇಕು" ಎಂದಿದ್ದರು ದಿನಗಳು ಉರುಳುತ್ತಿದ್ದವು ದಾಸರ ದಿನಚರಿ ಅವರು ಎಣಿಸಿದಂತೆ ನಡೆಯುತ್ತಿತ್ತು. ನಸುಕಿನಲ್ಲಿ ಬ್ರಾಹ್ಮೀಮೂಹೂರ್ತದಲ್ಲಿ ಏಳುತ್ತಿದ್ದರು. ಎದ್ದು ಚಾಪೆಯ ಮೇಲೆ ಎಷ್ಟೋ ಹೊತ್ತು ಕಣ್ಮುಚ್ಚಿ ಕೂತು ಧ್ಯಾನ ಮಾಡುತ್ತಿದ್ದರು. ನಂತರ ನದಿಗೆ ಹೋಗಿ ಸ್ನಾನ ಮಾಡಿ ನೀರಿನಲ್ಲೇ ಸ್ವಲ್ಪ ಹೊತ್ತು ಕೂತು ನಿಸರ್ಗದ ವಿಸ್ಮಯವನ್ನು ನೋಡುತ್ತಿದ್ದರು. ಎಲ್ಲ ಚರಾ ಚರ ಜೀವಿಗಳಲ್ಲೂ ಪರಮಾತ್ಮನಿದ್ದಾನೆ ಕಂದ" ಎಂದು ಹೇಳುತ್ತಿದ್ದಳಲ್ಲವೇ ಅವ್ವ? ಅದೇ ಆಗ ಎದ್ದು ಬರುವ ಸೂರ್ಯ ಹೊಂಬಣ್ಣದಂತೆ ಹರಿಯುವ ಪ್ರಭೆಯಲ್ಲೂ ಕೂಡ ಧ್ಯಾನ ತರಂಗಗಳನ್ನು ಕಾಣುತ್ತಿದ್ದರು. ನದಿಯ ಒಂಟಿ ಬಂಡೆಯ ಮೇಲೆ ಕುಳಿತು ಮನಸ್ಸಿನ ಅಂತರಾಳದೊಳಗೆ ಇಳಿದು ಹರಿಯನ್ನು ಕಾಣುತ್ತಾ ಕಾಣುತ್ತಾ ಆ ಜ್ಯೋತಿಯಲ್ಲಿ ಇವರು ತಾದ್ಯಾತ್ಮ ಹೊಂದಿ ಆ ಬೆಳಕು ಇವರ ಅಂತರಂಗದ ಒಳಗೆಲ್ಲಾ ಹರಡಿ ಆ ಬೆಳಕೇ ಇವರಾಗಿ ಇವರೇ ಬೆಳಕಾಗಿ ಪರಮಾತ್ಮ ಇವರಲ್ಲೊಂದಾಗಿ ಎಂಥಹ ಬ್ರಹ್ಮಾನಂದ ವಾಗುತ್ತಿತ್ತು.

ನಂತರ ಮನೆಗೆ ಬಂದವರೇ ತಾಳ ತಂಬೂರಿ ಹಿಡಿದು ಹೆಗಲಿಗೆ ಜೋಳಿಗೆ ಹಾಕಿಕೊಂಡು ಹರಿಕೀರ್ತನೆಗಳನ್ನು ಹಾಡುತ್ತಾ ಗೋಪಾಲಕ್ಕೆ ಹೊರಡುತ್ತಿದ್ದರು. ಹಾಗೇ ಹೋಗುವಾಗ ಒಮ್ಮೆ ಅಣ್ಣ ಅತ್ತಿಗೆ ಮುಂದೆ ನಿಂತು ಕೇಳಿದ್ದರೂ ಕೂಡ

"ವೆಂಕಣ್ಣ ನೀ ಗೋಪಾಲಕ್ಕೆ ಹೋಗು ಜರೂರು ಅಲ್ಲ? ನಾ ದುಡಕೊಂಡು ಬಂದದ್ದು ಬೇಕಾದಷ್ಟು ಬರ್ತದ ನೀನೂ ನಮ್ಮ ಮಗನ ಸಮಾನಪಾ ಸುಮ್ನ ತಿಂದುಂಡು ನಿನ್ನ ಜಪಾ

ತಪಾ ದೇವರಧ್ಯಾನ ಕೀರ್ತನಾ ಅನಕೋತ ಇರು. ಯಾವ ಯೋಚನಾನೂ ಹಚ್ಕೋಬ್ಯಾಡಾ ಯಾವುದರ ಚಿಂತಿನೂ ಬ್ಯಾಡ" ಎಂದಿದ್ದರು. ದಾಸರು ಮೃದುವಾಗಿ ನಕ್ಕಿದ್ದರು. "ನೀ ಹೇಳೋದು ಖರೇ ಅಣ್ಣ ನಾ ಸಣ್ಣವನಿದ್ದಾಗ ಅವ್ವಾ ಅಪ್ಪನ ಕಳ್ಕೊಂಡೆ ನೀವು ನನ್ನ ಮಗನಂತೆ ಬೆಳಿಸಿರಿ ಈಗೂ ನೀವು ನನಗೆ ತಂದೆ ತಾಯಿ ಸಮಾನನೇ ಆದ್ರ ನಾ ಈಗ ದಾಸವೃತ್ತಿ ಹಿಡಿದಂವಾ–ಆ ಕರುಣಾಮಯಿ ಭಗವಂತ ನನ್ನ ಕೈಗೆ ತಾಳ ತಂಬೂರಿ ಗೋಪಾಲ ಬುಟ್ಟಿ ಕೊಟ್ಟಾನ ಅವನ ಕೀರ್ತನಾ ಮಾಡಿ ಹಾಡುವಂಥಾ ಶಕ್ತಿ ಕೊಟ್ಟಾನ ದಾಸ ವೃತ್ತಿ ಕರುಣಿಸ್ಯಾನ ಅಂದಮ್ಯಾಲೆ ಅದಕ ತಕ್ಕಂಗ ಇರಬೇಕಲಾ ಪುರುಂದರದಾಸರು ಹೇಳಿಲ್ಲ "ಮಧುಕರಿ ವೃತ್ತಿ ನನ್ನದು ಬಲುಚೆನ್ನದು ಅಂತ ಈ ಮಾರ್ಗನ ನನಗೆ ಯೋಗ್ಯ ಅಣ್ಣ" ಯಾಕಂದ್ರ ಈ ವೃತ್ತಿಯಿಂದ ಮತ್ತೆ ಮತ್ತೇ ಹರಿನಾಮ ಕೀರ್ತನಾ ಹಾಡಿ ಅವನ ನಾಮಸ್ಮರಣೆ ಮಾಡುವಂಥಾ ಸಂದರ್ಭ ಬರ್ತಾವ" ಎಂದು ನಿಂತ ಅಣ್ಣ ಅತ್ತಿಗೆ ಕಾಲು ಮುಟ್ಟಿ ಗೋಪಾಲಕ್ಕೆ ತೆರಳುತ್ತಿದ್ದರು. ಅವರ ಬಾಯಿಂದ ಎಷ್ಟು ಇಂಪಾಗಿ ಬರುತ್ತಿತ್ತು ಕೀರ್ತನಾ

"ನಿನ್ನ ಮಹಿಮೆಯ ನಾರು ಬಲ್ಲರು
ಚಿನ್ಮಯಾನಂತ ರೂಪಕನೇ ಮುನ್ನ ॥ಪ॥

ಕಮಲದ ನಿನ್ನ ನಾಭಿಯೊಳನ್ನ ತೊನ್ನತದಿ
ಘನ ತಪಂಗೈದು ಕಾಣನು ।
ಇನ್ನು ಮೊಮ್ಮೆ ಶಚಿಮ್ಮ ಅರಿಯವು
ಪನ್ನಗೇಂದ್ರನು ಪೊಗಳಲರಿಯ ಪ್ರಸನ್ವೆಂಕಟನೆ ॥೧॥"

ಅಂಗಳದಾಟಿ ತಂಬೂರಿ ಮೀಟುತ್ತಾ ಅವರು ಹೊರಟು ಹೋದರು ಅವರ ಧ್ವನಿ ಆ ಕೀರ್ತನೆಯ ಆಲಾಪ ಹಂಬಲ ರಾಗದ ಇಂಪು ಇನ್ನೂ ಆ ಮನೆಯ ತುಂಬೆಲ್ಲ ಪಸರಿಸಿ ವಾತಾವರಣವನ್ನು ಪುನೀತಹಗೊಳಿಸುತ್ತಿತ್ತು

"ಧನ್ಯ ವೆಂಕಣ್ಣ ಧನ್ಯ" ಎಂದು ಅಣ್ಣ ಅತ್ತಿಗೆ ಕಣ್ಣೋರಿಸಿಕೊಳ್ಳುತ್ತಿದ್ದರು. ಐದು ಮನೆ ಗೋಪಾಲ ಮುಗಿಸಿ ಬಂದು ಮತ್ತೆ ಮಡಿಯಿಂದ ದೇವರಮನೆಗೆ ಹೊಂದಿಕೊಂಡಂತಿದ್ದ ಅಡುಗೆಮನೆಯಲ್ಲಿ ದೇವರ ನೈವೇದ್ಯಕ್ಕೆ ಅಡುಗೆ ಮಾಡಿಕೊಂಡು ಪೂಜೆಗೆ ಕೂಡುತ್ತಿದ್ದರು. ಪೂಜೆ ಮಾಡುವ ಕಟ್ಟೆಯ ಮೇಲೆ ಕುಳಿತು ಪೂಜೆಗೆ ಸುರು ಮಾಡಿದರೆ ಅಲ್ಲಿ ತಂದೆ ಕುಳಿತು ಪೂಜೆ ಮಾಡುತ್ತಿದ್ದ ದಿನಗಳು ಎಷ್ಟು ಸ್ಪಷ್ಟವಾಗಿ ನೆನಪಿದೆ ಅಂಗಳದ ತುಂಬ ಬಿಟ್ಟ ಹೂವಿನ ರಾಶಿ ತಂಪನೆಯ ಅಲಂಕಾರ ಮನೆತುಂಬ ವೈಶ್ವದೇವದ ಹೊಗೆ ಕಂಪು ಅವ್ವ ತಂದಿಡುತ್ತಿದ್ದ ನೈವೇದ್ಯ ಮಂಗಳಾರತಿ ಬೆಳಕಲ್ಲಿ ಹೊಳೆಯುತ್ತಿದ್ದ ದೇವರ ವಿಗ್ರಹಗಳು ಅಪ್ಪ ಅನ್ನುತ್ತಿದ್ದ ವಾಯು ಸ್ತುತಿ ವಿಷ್ಣು ಸಹಸ್ರನಾಮ ಕೆಲವು ಸಲ ಬಾಲ್ಯದ ನೆನಪುಗಳು ಕೂಡ ಎಷ್ಟು ಸುಂದರ .. ಬೆಳಗಾಗುತ್ತಿದ್ದಂತೆ ಅವ್ವ ಹಾಡುತ್ತಿದ್ದ ಉದಯರಾಗ ದಾಸರ ಹಾಡುಗಳು.

ದಾಸರ ನೆನಪಿನ ಚಿತ್ರಣ ಮಾಯವಾಗಿ ಅವರ ಕಣ್ಣುಗಳು ಕೈಯಲ್ಲಿಯ ವಿಗ್ರಹಗಳನ್ನು ನೋಡಿದೆವು. ಎಷ್ಟು ಸುಂದರವಾದದ್ದು ಆ ಬಾಲಗೋಪಾಲನ ಮೂರ್ತಿ ಈಗಿನ್ನು ಅಂಬೆಗಾಲಿಕ್ಕಿ ಕೊಂಡು ಬರುತ್ತಿದ್ದಾನೇನೋ ಆ ವೇಣುಗೋಪಾಲ ಕೈಯಲ್ಲಿಯ ಬೆಣ್ಣೆ ಮುದ್ದೆಯನ್ನೂ



ಯಾರ ಮನೆಯಿಂದ ಕದ್ದು ತಂದಿದ್ದಾನೋ? "ಎಲ್ಲಾಡಿ ದಣಿದು ಬಂದನೋ ಗೋಕುಲದ ತುಂಬೆಲ್ಲಾ ನಡೆದಾಡಿ ಬಂದ ಈ ಪುಟ್ಟಪಾದಗಳು ಏನೆಂದು ಬಣ್ಣಿಸಲಿ ನನ್ನಪ್ಪ ನಿನ್ನನ್ನು" ಎಂದು ತದೇಕವಾಗಿ ನೋಡುತ್ತಿದ್ದರು. ಆ ಬಾಲಗೋಪಾಲ ಇವರನ್ನು ನೋಡಿ ಮುಗುಳುನಗುವಂತಿತ್ತು. ಒಂದೊಂದಾಗಿ ವಿಗ್ರಹಗಳನ್ನು ತೆಗೆದರೇ ದೇವರೇ ಕರುಣಿಸಿದ ಶ್ರೀದೇವಿ, ಭೂದೇವಿ ವೆಂಕಟರಮಣ ತನ್ನ ಆತ್ಮ ಸಾಕ್ಷಾತ್ಕಾರದ ಮೂರ್ತಿಗಳು ತನ್ನ ಪರಮ ಸಾಧನೆಗೆ ಕಾರಣವಾದ ವೆಂಕಟರಮಣ ಕೈಯಲ್ಲಿ ಹಿಡಿದು ಒಂದು ಗಳಿಗೆ ಕಣ್ಮುಚ್ಚುತ್ತಾರೆ ಮನಸ್ಸು ನಿಧಾನವಾಗಿ ಚಲಿಸುತ್ತಾ ಚಲಿಸುತ್ತಾ ಆ ತಿರುಪತಿ ವೆಂಕಪ್ಪನ ಸಾನಿಧ್ಯದಲ್ಲಿ ಲೀನವಾಗುತ್ತದೆ. ಶ್ರೀದೇವಿ ಭೂದೇವಿಯವರ ಸಾನಿಧ್ಯ.

ಎಂಥಹ ಆನಂದಮಯವಾದ ಸಾಮ್ರಾಜ್ಯ ಅದು ಆ ನನ್ನಪ್ಪನ ಇದೇ ಪುಟ್ಟಪಾದಗಳ ಅಡಿಯಲ್ಲಿ ಬದುಕಿನ ಗತಿ ಕಂಡವನು. ಕಣ್ಮುಂದೆ ಆ ವೈಭವ ಅಲಂಕಾರ ಜೀವಂತಿಕೆ ಪಡೆದಂತಿದ್ದ ಆ ದಿವ್ಯಮನೋಹರಮೂರ್ತಿ ಮನಸ್ಸು ಆನಂದದ ಹೊನಲಾಗಿ ಆ ದಿವ್ಯಮೂರ್ತಿಗಳು ಮರೆಯಾಗಿ ಈಗ ಕೈಯಲ್ಲಿರುವ ದೇವತಾವಿಗ್ರಹಗಳಲ್ಲಿ ಆ ಭಗವಂತನ ಆವಾಹನೆಯಾಗಿ

"ಬಂದೇಯಾ ನನ್ನಪ್ಪ" ಎನ್ನುತ್ತ ದಾಸರು ನಿಧಾನವಾಗಿ ಕಣ್ಣು ತೆಗೆದು ಕೈಯಲ್ಲಿ ಹಿಡಿದಿದ್ದ ಮೂರ್ತಿಗಳ ಮೇಲೆ ದೃಷ್ಟಿ ನೆಟ್ಟಿವೆ. ನೋಡಿದರೆ ಅದೇ ನಯನ ಮನೋಹರ ವೆಂಕಪ್ಪನ ಶ್ರೀದೇವಿ, ಭೂದೇವಿಯರ ಆವ್ಹಾಹನೆಯಾಗಿದೆ ಅಲ್ಲಿ ಮುಗುಳ್ನುಗುತ್ತಾ ತನ್ನ ಭಕ್ತನನ್ನು ನೋಡುತ್ತಿರುವಂತೆ "ವೆಂಕಣ್ಣ ಭಕ್ತರೆಲ್ಲಿಯೋ ಅಲ್ಲೇ ನಾನು" ಎನ್ನುವಂತೆ ದಾಸರ ಬಾಯಿಂದ ಮನ ಮಿಡಿಯುವಂತೆ ಬರುತ್ತಿದೆ ಆ ಶ್ರೀ ಹರಿ ವರ್ಣನೆ

"ಕಂಗಳು ಹಿಂಗದಿರಲು ಎನ್ನ ನಿನ್ನ
ಮಂಗಳಾಂಘ್ರಿ ಸರೋಜಗಳಲ್ಲಿ ಕೃಷ್ಣ ॥ಪ॥

ಲೆಲ್ಲೆಯ ನಳಿದಾ ಋಷಿ ಸತಿಯಾಘಕಳದಿ।
ಶೃತಿಸಾರ ಸ್ತುತಿಗೊಮ್ಮೆ ಇತಿಗೊಡದೊಲದಿ
ಯತಿಮುನಿಜನ ದೇವ ತಲೆಗಳ ಮನದಿ
ಪ್ರತಿಕ್ಷಣ ತಟತಾದಿ ಧೃತಿಯುಳ್ಳಾ ಪದವಿ ॥೧॥"

ಎಷ್ಟು ಖರೇ, ಕೃಷ್ಣ ವಾಸುದೇವ ವೆಂಕಟಪತಿ ನಿನ್ನ ನೋಡಿದಷ್ಟು ನಿನ್ನ ಪಾದ ಕಮಲದಲ್ಲಿ ಕಂಗಳು ಹಿಂಗುವುದಿಲ್ಲ ಅನವರತ ನಿನ್ನನ್ನೇ ನೋಡುವ ಆಶೆಯಿನ್ನೂ ನೋಡಿದಷ್ಟು ತೃಪ್ತಿಯಾಗದ ಮನಸ್ಸು ಹೀಗೆ ಇಡೀ ದೇಹವನ್ನೇ ಕಣ್ಣಾಗಿ ಮನಸ್ಸು ಕೂಡ ಆ ಭಗವಂತನಲ್ಲೇ ಲೀನವಾಗಿ ದಾಸರು ಎಷ್ಟೋ ಹೊತ್ತು ದೇವರ ಪೂಜೆಯಲ್ಲಿ ಸಮಯ ಕಳೆಯುತ್ತೆ ಪೂಜೆ ಮುಗಿದು ಅತ್ತಿಗೆಗೆ ತೀರ್ಥಕೊಟ್ಟು ತಾವು ತೆಗೆದುಕೊಂಡು ದೇವರ ಮನೆಯಿಂದ ಹೊರ ಬರುತ್ತಿದ್ದರು. "ನೀ ಬಂದು ಪೂಜೆ ಮಾಡ್ಲಿಕ್ಕೆ ಸುರುಮಾಡಿದ ಮ್ಯಾಲೆ ದೇವರ ಮನೆ ಕಳೇನೇ ಬ್ಯಾರೆ ಆಗೇದ ನೋಡು ವೆಂಕಣ್ಣ ದೇವರ ಮನ್ಯಾಗ ಬಂದು ನಿಂತ್ರ ಆ ತಿರುಪತಿ ವೆಂಕಪ್ಪನ ಮುಂದ ನಿಂತ್ಹಂಗ ಆಗ್ತೆದ" ಎನ್ನುತ್ತಿದ್ದಳು ಅತ್ತಿಗೆ

"ವೈನಿ ಅದು ನಿಮ್ಮ ಶ್ರದ್ಧಾ" ಎನ್ನುತ್ತಿದ್ದರು ದಾಸರು ಮತ್ತೆ ದೇವರ ಕಟ್ಟೆ ಇಳಿದು ದೇವರ ಮನೆಯಲ್ಲಿ ಕೂತು ತಂಬೂರಿ ಮೀಟುತ್ತಾ ಒಂದೆರಡು ಕೀರ್ತನೆಗಳನ್ನು ಹಾಡುತ್ತಿದ್ದರು. ಪೂಜೆ ಮುಗಿಸಿ ಹೊರಬಂದು ಸ್ವಲ್ಪ ದೇವರ ಅಭಿಷೇಕದ ಹಾಲು ಸ್ವೀಕರಿಸಿ ಪಡಸಾಲೆಯಲ್ಲಿ ಬಂದು ಕುಳಿತು ವೇದ ಪುರಾಣ ಪುಣ್ಯ ಕಥನಗಳ ಅಧ್ಯಯನ ಮಾಡುತ್ತಿದ್ದರು. ಕೆಲವು ಸಲ ಅಣ್ಣನ ಮಕ್ಕಳು ಬಂದು ಕೂಡುವುದುಂಟು ಅವರಿಗೆ ಜ್ಞಾನದ ಸಂಸ್ಕೃತಿಯ ಸನ್ನಡತೆಯ ಭೋದನೆಯನ್ನು ಮಾಡುತ್ತಿದ್ದರು.

ಪಡಸಾಲೆಯಲ್ಲಿ ದಾಸರು ವೇದಾಧ್ಯಯನದ ಗ್ರಂಥಗಳನ್ನು ತೆಗೆದುಕೊಂಡು ಕುಳಿತರೆಂದರೆ ಸಾಕು ಓಣಿಯ ಕೆಲವು ಜನ ಬಂದು ದಾಸರ ಮುಂದೆ ಕೂಡುವುದುಂಟು ತಮಗೆ ತಿಳಿಯದ ಎಷ್ಟೋ ತತ್ವ ತರ್ಕಗಳನ್ನು ಕೇಳುತ್ತಿದ್ದರು. ಪುರಾಣದಲ್ಲಿ ಕೆಲವು ಪ್ರಕರಣಗಳ ಬಗ್ಗೆ ಕೇಳುತ್ತಿದ್ದರು. ಇಲ್ಲದಿದ್ದರೆ ದಾಸರು ರಚಿಸಿದ ಕೀರ್ತನೆಗಳನ್ನು ಹಾಡಲು ಕೇಳುತ್ತಿದ್ದರು.

ಹಾಗೆ ಬಂದವರಿಗೆ ದಾಸರು ಎಂದೂ ನಿರಾಶೆ ಮಾಡಿ ಕಳಿಸುತ್ತಿರಲಿಲ್ಲ. ತಮಗೆ ತಿಳಿದ ತತ್ವ ಸಿದ್ಧಾಂತಗಳ ಬಗ್ಗೆ ಮಾತನಾಡುತ್ತಿದ್ದರು. ತಿರುಪತಿಯಲ್ಲಿದ್ದಾಗ ಎಷ್ಟೋ ಜನ ಪಂಡಿತರ ಸಂಪರ್ಕದಲ್ಲಿ ಮಧ್ವಮತದ ಬಗ್ಗೆ ಅದರ ಸಿದ್ಧಾಂತಗಳ ಬಗ್ಗೆ ತತ್ವಗಳ ಬಗ್ಗೆ ಸವಿಸ್ತಾರವಾಗಿ ಆ ಪಂಡಿತರು ಹೇಳುತ್ತಿದ್ದ ವಿಶ್ಲೇಷಣಾ ಬಗ್ಗೆ ಕೇಳಿದ್ದರು ಹೀಗಾಗಿ ತಮಗೆ ತಿಳಿದಷ್ಟು ಮಾತ್ರ ಜನರಿಗೆ ಹೇಳುವದುಂಟು.

ದಿನದ ಹಗಲು ಹನ್ನೆರಡೇ ಗಂಟೆ ಅವರ ಮನದಲ್ಲಿ ಆ ಭಗವಂತನೇ ಸ್ಮರಣೆಯೇ ತುಂಬಿರುತ್ತಿತ್ತು. ಓಣಿಯಲ್ಲಿ ಹಾಯ್ದು ಹೋದರೇ ದಾಸರು ನಮ್ಮ ಮನೆಯ ಮುಂದೆ ಹಾಯ್ದು ಹೋದರು. ಪಾವನವಾಯಿತು. ನಮ್ಮ ಮನೆ ಎನ್ನುವಷ್ಟು ಊರವರ ಮನದಲ್ಲಿ ಮಹಾತ್ಮನಾಗಿ ನಿಂತಿದ್ದರು. ಅವರು ರಚಿಸುತ್ತಿದ್ದ ಕೀರ್ತನೆಗಳೆಲ್ಲಾ ಸುತ್ತಲಿನ ಊರು ಹಳ್ಳಿಗಳ ಜನಗಳ ಬಾಯಲ್ಲಿ ಹಾಡಿನ ರೂಪವಾಗಿ ಬಂದು ಜನ ಭಕ್ತಿಯಿಂದ ಪರವಶರಾಗುತ್ತಿದ್ದರು.

ಆದರೆ ಬದುಕು ಇಷ್ಟಕ್ಕೆ ಸೀಮಿತವಾಗಿರಬಾರದು ಎಂಬ ಯೋಚನೆ ಆಗಾಗ ದಾಸರ ಮನದಲ್ಲಿ ಸುಳಿದು ಮನಸ್ಸು ಚಿಂತಿತವಾಗುತ್ತಿತ್ತು. ಖರೇ ಆ ಕರುಣಾಮಯಿ ತನ್ನ ಮೇಲೆ ಕರುಣೆಯಿಟ್ಟು ಭಕ್ತಿ ಮಾರ್ಗ ತೋರಿದ ಅದು ಜ್ಞಾನಮಾರ್ಗಕ್ಕೂ ಹಾದಿಯಾಯಿತು. ಇಷ್ಟು ದಿನ ತಾನು ರಚಿಸಿದ ಕೀರ್ತನೆಗಳೆಲ್ಲ ಅವರ ವರಪ್ರಸಾದದಿಂದ ಬಂದ ಜ್ಞಾನದಿಂದ ಆದರೆ ಅದು ಪಾಂಡಿತ್ಯದ ತಳಹದಿಯ ಮೇಲೆ ನಿಂತಿರಬೇಕಲ್ಲ. ಜ್ಞಾನದೊಡನೆ ಪಾಂಡಿತ್ಯ ಸೇರಬೇಕು. ತಾನು ತಿರುಪತಿಯಲ್ಲಿದ್ದಾಗಿನ ಮಾತು ಮಹಾ ಮಹಾ ಪಂಡಿತರನ್ನು ವೇದಾಧ್ಯಯನ ಮಾಡಿದವರನ್ನು ಕಂಡಿದ್ದರು. ಮಧ್ವಮತದ ಸಿದ್ಧಾಂತದ ಬಗ್ಗೆ ಸರ್ವಮೂಲ ಗ್ರಂಥಗಳ ಬಗ್ಗೆ ವ್ಯಾಖ್ಯಾನಗಳಾಗುತ್ತಿದ್ದವು. ಸಂವಾದ ಗಳಾಗುತ್ತಿದ್ದವು. ಆಗೆಲ್ಲ ತಾವು ಅಲ್ಲಿ ಕುಳಿತರೂ ಯಾಕೋ ಅದು ತನ್ನ ಪರಿಜ್ಞಾನಕ್ಕೆ ನಿಲುಕದ ವಿಷಯವೇನೋ ಅನ್ನಿಸುತ್ತಿತ್ತು.

ಜ್ಞಾನದೊಡನೆ ಭಕ್ತಿಯೊಡನೆ ವೇದಾಧ್ಯಯನ ಪಾಂಡಿತ್ಯ ಮಧ್ವ ಸಿದ್ಧಾಂತದ ತಿರುಳನ್ನು ಅರೆದುಕುಡಿಯ ಬೇಕು ಅನ್ನಿಸುವುದುಂಟು.



ಮನಸ್ಸಿಗೆ ಏಕಾಂತತೆ ಬೇಕು ಎನಿಸಿದಾಗಲೆಲ್ಲಾ ದಾಸರು ಘಟಪ್ರಭೆಯ ದಂಡೆಯಾಚೆ ಕಲ್ಲು ಬಂಡೆಯ ಮೇಲೆ ಹೋಗಿ ಕೂಡುತ್ತಿದ್ದರು. ಸುತ್ತಲಿನ ನಿಸರ್ಗ ಬೆಟ್ಟ, ಗುಡ್ಡ ಗಾಳಿ, ನದಿ ಎಲ್ಲದರಲ್ಲೂ ಪರಮಾತ್ಮನಿದ್ದಾನೆ ಎನ್ನುವ ಪರಿಯನ್ನು ಹೇಳುವಂತಿತ್ತು. ಬಾಲ್ಯದಿಂದಲೂ ಇದೇ ನಿಸರ್ಗದಲ್ಲೂ ಕೂಡ ತಾಯಿಯ ಅಸ್ತಿತ್ವವನ್ನು ಹುಡುಕುತ್ತಿದ್ದೆ. ಆದರೆ ಅವ್ವ ಏನು ಹೇಳಿದ್ದಳು? ಚರಾಚರಗಳಲ್ಲೂ ಭಗವಂತ ಇದ್ದಾನಪಾ ಗಾಳಿ ಬೆಳಕು ನದಿ ಗುಡ್ಡ ಎಲ್ಲಾ ಅವಂದೆ ಅದರಾಗ ಅವನನ್ನು ಕಾಣು ಎನ್ನುವ ಅರ್ಥದ ಮಾತುಗಳನ್ನು ಹೇಳುತ್ತಿದ್ದಳು ಖರೇ ಆ ಚರಾಚರದಲ್ಲೂ ಪರಮಾತ್ಮನಿದ್ದಾನೆ ಅವನನ್ನು ಬಿಟ್ಟು ತಾನಿಲ್ಲ ಎನ್ನುವ ಅಂತರಂಗದ ಒಳಗಿನ ಪ್ರಜ್ಞೆ ಅವರನ್ನು ಸಂಪೂರ್ಣವಾಗಿ ಆವರಿಸಿಕೊಂಡು ಬಿಡುತ್ತಿತ್ತು ಒಳಗಿನ ಅಂತರಜ್ಞಾನದಿಂದ ಅವನ ನಾಮಕೀರ್ತನೆ ತಾನೇ ತಾನಾಗಿ ಹರಿದು ಹರಿಯುವ ನೀರಿನ ಮಂಜುಳ ಗಾನದೊಡನೆ ತಾಧ್ಯಾತ್ಮಕವಾಗಿ ಬಿಡುತ್ತಿತ್ತು. ಮನೆಗೆ ಬಂದರೇ ಸಂಜೆಯ ಅನ್ಹಿಕಗಳನ್ನು ಮುಗಿಸಿ ದೇವರ ವೇದ ಪುರಾಣ ಪುಣ್ಯಕಥೆ ಭಾಗವತ ಭಾರತ ಎಂದು ಓದುತ್ತಿದ್ದರು. ಆ ವೇಳೆಯಲ್ಲಿ ಓಣಿಯ ಕೆಲವು ಹಿರಿಯರು ಬಂದು ಅವರು ಓದುತ್ತಿದ್ದ ಗ್ರಂಥಗಳನ್ನು ತಾವು ಕೇಳುತ್ತಾ ಕೂಡುವುದುಂಟು. ಕತ್ತಲಾಗಿ ಅವರೆಲ್ಲ ಎದ್ದು ಹೋದರೆ ತಮ್ಮ ಓದಿನ ಆಶೆ ಪುರಾಣದ ಮೂಲವನ್ನು ಹುಡುಕಿಕೊಂಡು ಹೋಗುತ್ತಿತ್ತು ಅವರ ಮನಸ್ಸು ವಿಚಾರದ ದಿಕ್ಕು ಇದರ ಹಿಂದೆ ಮತ್ತೇನೋ ಮಹತ್ವದಾದದ್ದು ಇದೆ ಅದನ್ನೇ ತಾನೀಗ ಆಳವಾಗಿ ತಿಳಿದುಕೊಂಡು ತನ್ನ ಜ್ಞಾನದ ಅಸ್ತಿತ್ವನ್ನು ಹುಡುಕಬೇಕು.

ಸಣ್ಣವನಿದ್ದಾಗ ವೇದ ಕಲಿಯುವ ಕಾಲದಲ್ಲಿ ಅಧ್ಯಯನ ಮಾಡಿ ಈ ಮದ್ವ ಸಿದ್ಧಾಂತಗಳ ಬಗ್ಗೆ ತಿಳಿಯಲಿಲ್ಲ ಏನೋ ಪರಮಾತ್ಮನ ಕರುಣೆ ನಾಲಿಗೆಯಲ್ಲಿ ಅಕ್ಷರ ಬಿತ್ತಿ ಅಕ್ಷರ ಭಂಡಾರ ಹೊರಡಿಸಿದನಲ್ಲ ಅವರು ಅವನ ಲೀಲೆ ಕೊಂಡಾಡುವುದಕ್ಕೆ ತನ್ನ ಭಕ್ತಿಯ ಪರಾಕಾಷ್ಠತೆಯನ್ನು ಬಿಂಬಿಸುವುದಕ್ಕೆ ದಾರಿಯಾಯಿತು. ತನ್ನದು ಬರೀ ಭಕ್ತಿ ಮಾರ್ಗ ಪರಮಾತ್ಮನನ್ನು ಕಾಣಲು ಹಂಬಲಿಸುವ ಮಾರ್ಗ ಈಗ ಈ ಭಕ್ತಿಗೆ ಸಿದ್ಧಾಂತದ ತಳಹದಿ ಬೇಕೆ ಬೇಕು ಎನಿಸುವುದುಂಟು. ತಿರುಪತಿಯಲ್ಲಿದ್ದಾಗ ಪಂಡಿತರ ಸಾನಿಧ್ಯಮೊದಲು ಆಗಿ ಹೋದ ದಾಸರವರೇಣ್ಯರ ಕೀರ್ತನೆಗಳಲ್ಲಿಕೂಡ ತಾನು ಇದೇ ಮದ್ವಸಿದ್ಧಾಂತದ ತಿರುಳನ್ನು ಕಂಡಿದ್ದೆ. ಅಲ್ಲದೆ ತಾನು ತಿರುಪತಿಯಿಂದ ತಿರುಗಿ ಬರುವಾಗ ಮಂತ್ರಾಲಯದಲ್ಲಿ ಗುರುಗಳ ದರ್ಶನಕ್ಕಾಗಿ ಹೋದಾಗ ತನಗೂ ಶ್ರೀ ಮಂತ್ರಾಲಯ ಪ್ರಭುಗಳಿಂದ ಸೂಚನೆಯಾಗಿರಲಿಲ್ಲವೇ? ಏನು ಹೇಳಿದ್ದರು ಅವರು.

"ಶ್ರೀ ಹರಿಯ ಅನುಗ್ರಹ ಪಡೆದು ಬಂದಿದ್ದಿ ಮಗು ನಿನ್ನಿಂದ ಧರ್ಮ ಮದ್ವಸಿದ್ಧಾಂತದ ತತ್ವ ಪ್ರಚಾರವಾಗಲಿ ಮದ್ವ ಸಿದ್ಧಾಂತದ ಅಡಿಯಲ್ಲೇ ದಾಸದೀಕ್ಷೆ ತತ್ವ ಅಡಗಿದೆ. ಇದರೊಡನೆ ಜನರಲ್ಲಿ ಭಕ್ತಿ ಪಂಥವನ್ನು ಕೂಡ ಜಾಗೃತ ಗೊಳಿಸು" ಎಂದು

ಹೌದು ಅದು ಕೂಡ ಪರಮವಾಕ್ಯ ತನಗೆ ಕೀರ್ತನೆಗಳ ಮೂಲಕ ಮಧ್ವಸಿದ್ಧಾಂತದ ಪ್ರಚಾರವಾಗಲಿ ಎಂದು ಹೌದು ಇದು ಕೂಡ ತನಗೆ ಅರಿವಾಗಲಿ ಎಂದು ಅವರು ಸೂಚನೆ ಕೊಟ್ಟಿರಬೇಕು. ಖರೇ ತಾನು ಬಾಲ್ಯದಲ್ಲಿ ಕಂಡ ಕನಸು ವೇದಾಧ್ಯಯನ ಮದ್ವ ಸಿದ್ಧಾಂತದ ತಿರುಳು ಸರ್ವಮೂಲಗ್ರಂಥಗಳ ಪಠಣ ಇದೆಲ್ಲ ಅಧ್ಯಯನ ಮಾಡಲು ಒಬ್ಬ ಗುರುಬೇಕೆ ಬೇಕಲ್ಲವೇ?

ಹೀಗೆ ಎಂಟಾನು ಎಂಟು ದಿನ ಅದರ ಬಗ್ಗೆ ವಿಚಾರ ಮಾಡುವಾಗ ಅವರಿಗೆ ತಿಳಿದು ಬಂದಿದ್ದು ಗಲಗಲಿಯ ಶ್ರೀ ಮುದ್ಗಲಾಚಾರ್ಯರ ಬಗ್ಗೆ ಹಾಗೆ ನೋಡಿದರೆ ಬಾಗಲಕೋಟೆಯಲ್ಲೇ ಎಷ್ಟೊಂದು ಜನ ಪಂಡಿತರಿದ್ದಾರೆ ಪಂಡಿತರಿಗೆ ಪಂಡಿತರಂತೆ ಮುದ್ಗಲಚಾರ್ಯರು ಇಡೀ ಮದ್ವಸಿದ್ಧಾಂತದ ಸರ್ವ ಮೂಲ ಗ್ರಂಥಗಳನ್ನು ಅರೆದು ಕುಡಿದವರು. ಸಂಸ್ಕೃತ ವೇದಾಧ್ಯಯನದ ಎಲ್ಲ ತತ್ವ ತರ್ಕಗಳನ್ನು ನಿರ್ಗಳವಾಗಿ ಹೇಳುವವರು. ಬಾಗಲ ಕೋಟೆಯಲ್ಲೇ ಕೆಲವು ಜನ ಅವರ ಶಿಷ್ಯರಾಗಿ ಅಧ್ಯಯನ ಮಾಡಿ ಬಂದವರು ಅಂಥವರ ಶಿಷ್ಯನಾಗುವುದು ಕೂಡ ಒಂದು ಪುಣ್ಯದ ಅವಕಾಶವಲ್ಲವೇ? ಎನಿಸಿತು ದಾಸರಿಗೆ ರಾಘಣ್ಣ ಕೂಡ ಅದೇ ಅಭಿಪ್ರಾಯ ವ್ಯಕ್ತಪಡಿಸಿದ್ದ.

"ನೀನೆ ಒಂದು ಜ್ಞಾನದ ಖಣಿ ವೆಂಕಣ್ಣ ನಿನಗೆ ಮತ್ತೆ ಅಧ್ಯಯನವೇ ?ಆಗಲಿ ನೀನು ಪ್ರಚಂಡ ಪಂಡಿತನಾಗಬೇಕಂತ ಅವ್ವ ಅಪ್ಪನ ಇಚ್ಛಾನೂ ಇತ್ತು. ಖರೇ ನಿನ್ನ ಕೀರ್ತನೆಗಳಿಗೆ ಧರ್ಮ ಪ್ರಚಾರಕ್ಕೆ ಭಕ್ತಿ ಪಂಥದ ಪ್ರಸಾರಕ್ಕೆ ಅವೆಲ್ಲ ತಳಹದಿ ಇರ್ಬೇಕು. ಆತು ನೀ ಗಲಗಲಿಗೆ ಹೋಗಿ ಅಧ್ಯಯನ ಸುರುಮಾಡು" ಎಂದಿದ್ದ

ಹೀಗಾಗಿ ನಿರ್ಧಾರ ಮಾಡಿದ ಕೆಲವೇ ದಿನಗಳಲ್ಲಿ ದಾಸರು ಗಲಗಲಿಗೆ ಪ್ರಯಾಣ ಬೆಳೆಸಿದ್ದರು. ಎಷ್ಟು ದಿನಗಳ ಆಶೆ, ಸಂಸ್ಕೃತ ವೇದಗಳನ್ನು ಅಧ್ಯಯನ ಮಾಡಬೇಕೆಂಬುದು ಸಣ್ಣವನಿದ್ದಾಗ ಓರಿಗೆಯವರೆಲ್ಲ ಗುರುಕುಲಕ್ಕೆ ಹೋಗುವಾಗ ತಾನು ದನಕಾಯುತ್ತಾ ಅದೆಲ್ಲ ತನಗೆ ಸಾಧ್ಯವಾಗಲಿಲ್ಲವಲ್ಲ ಎಂದು ಎಷ್ಟೊಂದು ಕೊರಗುತ್ತಿದ್ದೆ. ಅವರೆಲ್ಲ ತನ್ನನ್ನು ನೋಡಿ ಹಾಸ್ಯ ಮಾಡುತ್ತಾ ನಗುವಾಗ ಜೀವ ಎಷ್ಟೊಂದು ಹಿಡಿಯಾಗುತ್ತಿತ್ತು. "ನಿನಗೇನಾದ್ರೂ ಭಾಗವತ ಅಂದ್ರ ಗೋತ್ತೇನೋ" ಎಂದಿದ್ದ ಗೆಳೆಯ ಈಗ ಅಂಥಹ ಮಹಾನ್‌ಗ್ರಂಥಗಳನ್ನು ಓದುವ ಅವಕಾಶ ನನ್ನ ಶ್ರೀ ಹರಿ ಕೊಡಿಸಿಕೊಟ್ಟನಲ್ಲ ಅದೂ ಶ್ರೀ ಮುದ್ಗಲಚಾರ್ಯರಂಥ ಮಹಾನುಭಾವರಿಂದ ಎಂಥ ಮೇದಾವಿಗಳು ಅವರು ವೇದ ಉಪನಿಷತ್ ಮದ್ವಸಿದ್ಧಾಂತ ಸಂಸ್ಕೃತದ ಎಲ್ಲ ಗ್ರಂಥಗಳನ್ನು ಓದಿ ಮನನ ಮಾಡಿಕೊಂಡವರು ಅವುಗಳ ಬಗ್ಗೆ ಮಾತನಾಡಲು ನಿಂತರೆ ಅದರ ಆಳಕ್ಕೆ ಇಳಿದು ಕೇಳುವವರನ್ನು ಅದರಲ್ಲಿ ಕರೆದುಕೊಂಡು ಹೋಗಿ ಮನಸ್ಸಿನ ಅಂತರಾಳಕ್ಕೆ ಇಳಿಸಿ ಅವುಗಳ ಬಗ್ಗೆ ಸಂಪೂರ್ಣ ಗ್ರಹಿಕೆ ಹುಟ್ಟಿಸುವಂಥಹ ಮಹಾಪಂಡಿತರೆಂದು ರಾಘಣ್ಣ ಹೇಳುತ್ತಿದ್ದ ಈಗ ಅಂಥವರ ಮಾರ್ಗದರ್ಶನ ಸಿಗಬೇಕಾದರೆ ನನ್ನ ಪುಣ್ಯವೇ ಅದು ಶ್ರೀ ಹರಿಯ ಇಚ್ಛೆ ಕೂಡ ಎಂದುಕೊಂಡು ದಾಸರು ಗಲಗಲಿ ಕಡೆ ಹೆಜ್ಜೆ ಹಾಕಿದರು.

ಗಲಗಲಿ ಪವಿತ್ರ ನದಿ ಕೃಷ್ಣೆ ಹರಿಯುವ ಸೆರಗಿನಲ್ಲಿ ನಿಂತ ಊರು, ಊರಿನ ಸುತ್ತಾ ಹರಡಿ ನಿಂತ ಹಸಿರು ಗುಡ್ಡ ಗುಡ್ಡದ ಸೆರಗಿನಲ್ಲೇ ಹರಿಯುವ ಕೃಷ್ಣೆ ಊರ ನಡುವಿನ ಅಗ್ರಹಾರದಿಂದ ಅಂಚಿಗೆ ಸಾಕ್ಷಿಯಾಗಿ ಬಂದು ನಿಂತಂತೆ ನಿಂತ ನರಸಿಂಹ ದೇವರಗುಡಿ ಆಧ್ಯಾತ್ಮಿಕಸಾಧನೆಗೆ ಏನೂ ಕಡಿಮೆ ಇಲ್ಲ ಎನ್ನುವುಂತೆ ಪಂಡಿತರಿಂದ ತುಂಬಿದ ಅಗ್ರಹಾರ ಅವಕ್ಕೆಲ್ಲ ಕಳಸವಿಟ್ಟಂತೆ ಊರಿನಲ್ಲೇ ವೇದ ರತ್ನರೆನಿಸಿಕೊಂಡಿದ್ದ ಶ್ರೀ ಮುದ್ಗಲಾಚಾರಾರ್ಯರು ಆಚಾರ್ಯರು ಸಾಮಾನ್ಯ ವ್ಯಕ್ತಿಯಲ್ಲ ಇಡೀ ಸುತ್ತಲಿನ ಊರುಗಳಿಗೆ ವಿದ್ವಾನ್ ಶಿಖಾಮಣಿಯಂತೆ ನಿಂತವರು ಎಂಥೆಂಥಹ ಮಹಾನ್ ವ್ಯಕ್ತಿಗಳು ಇವರ ಕೈಯಲ್ಲಿ ಅಧ್ಯಯನ ಮಾಡಿ ಪಂಡಿತರೆನಿಸಿಕೊಂಡು ಹೋದವರು.



ದಾಸರು ಅವರ ಮನೆಯ ಅಂಗಳದಲ್ಲಿ ಬಂದು ನಿಂತರು. ಎಂಥಹ ದಿವ್ಯವಾದ ವಾತಾವರಣ ಇಡೀ ಮನೆಯ ಕಂಬ ಗೋಡೆ ಬಾಗಿಲು ಸುಳಿದಾಡುವ ಗಾಳಿ ಕೂಡ ಒಂದೇ ದಿವ್ಯವಾದ ಧ್ವನಿಯಲ್ಲಿ ಮಂದವಾದ ಧ್ವನಿಯಲ್ಲಿ ವೇದಗಳನ್ನು ಪಠಿಸುತ್ತಿದೇನೋ ಏನೋ ಎನ್ನುವಂತೆ ಶ್ರೀ ಮಧ್ವಾಚಾರ್ಯರಂಥ ಒಂದು ಚೈತನ್ಯದ ಬೆಳಕು ಆ ಮನೆಯಲ್ಲಿ ಚೇತನ ರೂಪವಾಗಿ ನಿಂತು ಮನೆಯ ಅಸ್ತಿತ್ವವಾಗಿ ನಿಂತಂತೆ ಕಾಣುತ್ತಿತ್ತು.

"ಧನ್ಯನಾದೆ ಭಗವಂತ ಎಂಥಹ ದಿವ್ಯ ಸ್ಥಳವನ್ನು ಅರಸಿಕೊಂಡು ಬಂದೆ ಇದು ನನ್ನ ಜ್ಞಾನದ ಭಂಡಾರವಾಗಬೇಕು" ಎಂದುಕೊಂಡು ದಾಸರು ಮೃದುವಾಗಿ ತಂಬೂರಿ ಮೀಟಿದರು. ಮಿಡಿದ ತಂತಿಯ ನಾದ ಆ ಮನೆಯ ಅಂಗಳ, ಪಡಸಾಲೆ ಎಲ್ಲ ದಾಟಿ ಇಡೀ ಮನೆಗೆ ಗಾನ ಸುಧೆಯನ್ನು ಹರಿಸಿದಂತೆ ಅದರ ಹಿಂದೆ ದಿವ್ಯವಾದ ದಾಸರ ಹಾಡು.

"ಸಾಧುವಾಗಲಿ ಸಾಧುಸಂಗವಾಗಲಿ<br>
ಸಂಗದಿಂದ ಲಿಂಗದೇಹ ಭಂಗವಾಗಲಿ<br>
ಪಂಚಸಂಸ್ಕಾರ ಭೇದ<br>
ಪಂಚಯುಕ್ತರಾಗಿ ಪ್ರಪಂಚ ಸೂರಿ<br>
ಪ್ರಸನ್ವೆಂಕಟ ಪಂಚ ಬಾಣ ನೈಯ್ಯನವರ॥"

ಹಾಡು ಅಲೆ ಅಲೆಯಾಗಿ ಬರುತ್ತಿದೆ. ಶ್ರೀ ಮುದ್ಗಲಚಾರ್ಯರು ಯಾವುದೋ ಗ್ರಂಥಕ್ಕೆ ತಾತ್ಪರ್ಯ ನಿರ್ಣಯ ಬರೆಯುತ್ತ ಕೂತಿದ್ದಾರೆ. ಅದರಲ್ಲೇ ತನ್ಮಯರಾಗಿದ್ದರೂ ಕೂಡ ಅಂಥದರಲ್ಲಿ ಅವರಿಗೆ ತಂಬೂರಿಯ ನಾದ ಗಾನ ರೂಪದಲ್ಲಿ ಅವರೆದೆಯನ್ನು ತುಂಬಿದಂತೆನಿಸಿ, ಅದರೊಡನೆ ಬಂದ ಸುಂದರವಾದ ಕೀರ್ತನೆ, ಏನು ಹೇಳುತ್ತಿದ್ದಾರೆ?

ಪಂಚಯುಕ್ತ ರಾಗಿ ಪ್ರಪಂಚ ಸೂರಿ<br>
ಪ್ರಸನ್ವೆಂಕಟ ಪಂಚ ಬಾಣಯ್ಯನವರ

ತಲೆಯೆತ್ತಿ ನೋಡುತ್ತಿದ್ದಾರೆ ಆಚಾರ್ಯರು ಪುಣ್ಯವೇ ಪುರುಷ ರೂಪವಾಗಿ ಬಂದಂತೆ ಅವರ ಮನೆಯಂಗಳದಲ್ಲಿ ನಿಂತಿದ್ದಾರೆ ದಾಸರು ಕೈಯಲ್ಲಿ ತಂಬೂರಿ ಹೆಗಲಿಗೆ ಗೋಪಾಲಬುಟ್ಟಿ ಇನ್ನೊಂದು ಕೈಯಲ್ಲಿ ತಾಳ ಎಂಥಹ ತೇಜವಂತ ಮುಖ ದಯೆ, ಕರುಣೆ ತುಂಬಿದ ಕಣ್ಣುಗಳಲ್ಲಿ ಅನನ್ಯವಾದ ಅರ್ಪಣಾಭಾವ ಭಕ್ತಿಯೇ ಮೈದುಂಬಿ ಬಂದಂತೆ ಭಾವ ಹರಿ ಏನು ನಿನ್ನ ಕರುಣೆ.

ಪ್ರಸನ್ವೆಂಕಟರ ಅಂಕಿತದಿಂದ ಹಾಡಿದವರು.

ಹರಿ ಯಾವ ಪುಣ್ಯಾ ಕೆಲಸಕ್ಕಾಗಿ ಇವರನ್ನು ತಂದು ನನ್ನ ಮನೆಯಂಗಳದಲ್ಲಿ ನಿಲ್ಲಿಸಿದೆ ಇಲ್ಲ ಮೊದಲೇ ಸೂಚನೆ ಕೊಟ್ಟಿದ್ದಾನೆ ಭಗವಂತ ಯಾವತ್ತಿನಿಂದ ತನ್ನ ಅಂತರಂಗ ಹೇಳುತ್ತಿತ್ತು. ಒಬ್ಬ ಪುಣ್ಯಾ ಪುರುಷರ ಸಮಾಗಮ ತನ್ನ ಮನೆಯಂಗಳದಲ್ಲಿ ಆಗುವುದಿದೆ ಎಂದು ಕಾಯುತ್ತಿದ್ದೆ. ತಾನೂ ಕೂಡ ಈ ಕ್ಷಣಕ್ಕಾಗಿ ದಾಸರ ರೂಪವನ್ನು ಕಣ್ತುಂಬಿಕೊಳ್ಳುತ್ತಾ ಪಡಸಾಲೆ ಕಟ್ಟೆ ಇಳಿದು ಬಂದರು ಆಚಾರ್ಯರು ಗಂಭೀರ ನಡಿಗೆಯಲ್ಲಿ, ಕೂಡ ಅಂತಃಕರಣತುಂಬಿ

ಮೈ ಮನದಲ್ಲಿ ಹರುಷ ತುಂಬಿ ಪಡಸಾಲೆಯ ಕಟ್ಟೆ ಇಳಿದು ಅಂಗಳಕ್ಕೆ ಬಂದು ನಿಂತರು.

“ಮಹಾನುಭಾವರೆ ತಾವು ಪ್ರಸನ್ವೆಂಕಟದಾಸರು, ಕೇಳಿದ್ದೆ ನಿಮ್ಮ ಬಗ್ಗೆ ತಾವು ಬರುವಿರೆಂಬ ಸೂಚನೆಯೂ ಕೊಟ್ಟಿದ್ದ ಭಗವಂತ ಕಾಯ್ತಿದ್ದೆ ನಾನು ಈ ಕ್ಷಣಕ್ಕೆ ಈ ಪುಣ್ಯ ಪುರುಷ ಇವತ್ತೇ ನನ್ನ ಮನಿ ಅಂಗಳದಾಗ....”

ದಾಸರು ಮಾತನಾಡದೆ, ಬಾಗಿ ಅನನ್ಯ ಅಂತಃಕರಣ ಭಾವ ಭಕ್ತಿಯಿಂದ ಅವರ ಕಾಲ ಮುಟ್ಟಿದರು.

ಹರೇ ಶ್ರೀನಿವಾಸ ಹರೇ ಶ್ರೀನಿವಾಸ ನೀವು ನನ್ನ ಕಾಲು ಮುಟ್ಟಬಹುದೇ ಎಂದು ದಾಸರನ್ನು ಅನನ್ಯ ಅಂತಃಕರಣದಿಂದ ಮೈದಡವಿ ಎಬ್ಬಿಸಿದರು ಆಚಾರ್ಯರು.

“ಯಾವುದೋ ಪುಣ್ಯ ಸ್ವರೂಪ ನನ್ನ ಮನೆವರೆಗೆ ಬಂದಿದೆ. ದಾಸರೇ ನೀವು ಬರ್ತಿರಂತ ಕಾಯಸ ಇತ್ತು ನಮಗ ಹಂಗ ಭಗವಂತ ಸೂಚನಾನು ಕೊಟ್ಟಿದ್ದ ನಿಮ್ಮ ಬಗ್ಗೆ – ಬ್ಹಾಳ ಕೇಳೀನಿ, ಆ ಭಗವಂತನನ್ನ ಒಲಿಸಿಕೊಂಡು ಬಂದವ್ರು ನೀವು ನಿಮ್ಮ ಹಾಡು ಕೀರ್ತನಾ ಎಲ್ಲಾ ಮನಿ ಮಾತಾ ಆಗ್ಯಾವ ಕೇಳಿದ್ರ ಎದೆ ತುಂಬಿ ಮನಸ್ಸು ಚೇತನಾ ಭಗವಂತನೊಳಗ ಲೀನ ಆಗಿ ಬಿಡ್ತಾವ ಬರ್ರೀ ಮ್ಯಾಲ ಬರ್ರೀ” ಎಂದು ದಾಸರನ್ನು ಕೈ ಹಿಡಿದುಕೊಂಡು ಮನೆಯೊಳಗೆ ಕರೆದೊಯ್ದರು ಆಚಾರ್ಯರು.

ದಾಸರು ಆಚಾರ್ಯರನ್ನು, ಆಚಾರ್ಯರು ದಾಸರನ್ನು ಕಣ್ತುಂಬಾ ಒಬ್ಬರಿಗೊಬ್ಬರು ನೋಡುತ್ತಲೇ ಇದ್ದರು ಎದೆಯಲ್ಲಿ ಬಿತ್ತಿದ್ದ ಭಕ್ತಿರಸದ ಭಾವನೆಗಳು ಒಬ್ಬರಿಗೊಬ್ಬರ ಅಂತರಂಗದಲ್ಲಿ ಮೊಳಕೆಯೊಡೆದು ಮಾತುಗಳ ಹೊರಬರುತ್ತಿದ್ದವು.

“ಗುರುಗಳೇ” ದಾಸರ ಮಾತನ್ನು ಅರ್ಧಕ್ಕೆ ತಡೆದು ಆಚಾರ್ಯರು ವಿಸ್ಮಯದಿಂದ ಕೇಳಿದರು. “ದಾಸೋತ್ತಮರೇ ನಾನು ನಿಮ್ಮ ಗುರು?

“ಹೌದು ಸ್ವಾಮಿ ಗುರುಪಾದಾ ಹುಡುಕಿಕೊಂಡು ಬಂದಾಂವಾ ನಾನು ನಾ ಹುಡುಕುತ್ತಿದ್ದ ಅಮೋಘ ವಿದ್ಯಾ ಸಂಪತ್ತು ನಿಮ್ಮಲ್ಲಿದೆ ಅಂತ ಭಗವಂತನ ಪ್ರೇರಣಾ ಆತು ಗಲಗಲಿಗೆ ಹಾದಿ ತೋರಿಸಿದವ್ನು ಅವನ, ಕೃಷ್ಣಾತೀರ ಲಕ್ಷ್ಮೀ ನರಸಿಂಹನ ಪವಿತ್ರ ಸ್ಥಾನಾ ನಿಮ್ಮಂಥ ಗುರುಗಳ ಸಾನಿಧ್ಯ ಏನು ಬೇಕು ಇನ್ನ” ಎಂದ ದಾಸರ ಮಾತಿಗೆ ಆಚಾರ್ಯರು ದಿವ್ಯ ಭಾವದಿಂದ ಹೇಳಿದರು.

“ಧನ್ಯ ದಾಸರ ಧನ್ಯ ನಿಮ್ಮಂಥ ಮಹಾ ಮಹಿಮರು ನನಗೆ ಗುರುಗಳ ಸ್ಥಾನ ಕೊಟ್ಟಿದ್ದಕ ಆದ್ರ ಎಲ್ಲ ತಿಳಿದವ್ರು ನೀವು ಜಗತ್ತಿನ ಈ ಪ್ರಪಂಚದ ಅಣು ತೃಣ ಎಲ್ಲಾದ್ರ ಒಳಗಣ್ಣು ಜ್ಞಾನಾ ಎಲ್ಲಾ ನಿಮ್ಮೊಳಗೆ ಅದ, ಆ ಭಗವಂತ ಜ್ಞಾನದ ಭಂಡಾರಾನ ನಿಮ್ಮ ಕೈಯಾಗ ಕೊಟ್ಟಾನ ದಾಸರ ನಾ ಏನು ಕೊಡ್ಲಿ ನಿಮಗ”?

“ನಿಮ್ಮ ಶಿಷ್ಯನ ಸ್ಥಾನ ಅಷ್ಟ ಗುರುಗಳೇ, ಭಗವಂತ ಜ್ಞಾನದ ಭಂಡಾರ ಕೊಟ್ಟ ನಾಲಿಗಿಮ್ಯಾಲೆ ಅಕ್ಷರ ಭಿತ್ತಿದ ಆದ್ರ ಅದರ ಒಳಗಿನ ತಿರುಳು ನನಗಿನ್ನು ತಿಳಿದಿಲ್ಲ. ಆ



ಪಾಂಡಿತ್ಯದ ತಿರುಳು ನಿಮ್ಮಲ್ಲಿ ಅದ, ಗುರುಗಳೇ ಈ ಪಾಮರನನ್ನ ಶಿಷ್ಯ ಅಂತ ಸ್ವೀಕಾರ ಮಾಡಿ ಎಲ್ಲ ಪುರಾಣ ವೇದ ಉಪನಿಷತ್ತು ಮಧ್ವ ಸಿದ್ಧಾಂತದ ಎಲ್ಲ ತಿರುಳನ್ನು ನನಗ ಅರೆದು ಕುಡಿಸಬೇಕು ಇದು ನನ್ನ ಉದ್ಧಾರದ ಮಾತು ಅದಕ ಗುರು ಅಂತ ಅರಿಸಿ ಕೊಂಡು ಬಂದಿದ್ದೀನಿ ನನ್ನೊಳಗೆ ತಪ್ಪು ಏಣಿಸದೆ ನನ್ನ ಜ್ಞಾನದ ಭಿಕ್ಷಾ ಪಾತ್ರೆಗೆ ನಿಮ್ಮ ಔದಾರ್ಯದಿಂದ ಜ್ಞಾನಸಂಪತ್ತು ಹಾಕ್ರೀ”

ಎಂಥಾ ನಿಗರ್ವದ ಮಾತು ಎಂಥಾ ವಿನಯ, ಪರಮಾತ್ಮನನ್ನು ಒಲಿಸಿಕೊಂಡವರಿಂದ ಅವರ ಮಾತು ಕೇಳುತ್ತಾ ಮೂಕರಾದರು ಆಚಾರ್ಯರು. ಖರೇ ಭಗವದ್ಭಕ್ತರ ಹಾದಿ ಇದೆ. ತುಂಬಿದ ಕೊಡದಲ್ಲಿ ಸ್ವಲ್ಪವೂ ಕಲ್ಮಶವಿರದೆ ಮಾತು ಈ ದಿವ್ಯ ಜ್ಞಾನಿಗೆ ತಾನೇನು ಕೊಟ್ಟೇನು ಎನಿಸಿತು ಅವರಿಗೆ. ಯಾವ ರೀತಿ ನನ್ನಿಂದ ಇವರ ಜ್ಞಾನ ಭಂಡಾರಕ್ಕೆ ಅನುಪಮ ತಿರುಳು ತುಂಬೀತು? ಇದು ನನ್ನ ಪುಣ್ಯಾ ಇಂಥ ಶಿಷ್ಯ ಸಿಕ್ಕುವುದು ಕೂಡ ಗುರುವಿನ ಪುಣ್ಯವೇ ಅಲ್ಲವೇ? ಆ ಭಗವಂತನ ಇಚ್ಛೆ ಏನಿದೆಯೋ? ಇಲ್ಲಾ ಇದು ತನ್ನ ಉದ್ಧಾರಕ್ಕೆ ಇರಬೇಕು. ಇಂಥವರ ಗುರು ಎನ್ನುವುದೂ ಕೂಡ ಶ್ರೇಷ್ಠ ಪದವಿಯೇ ಅಲ್ಲವೇ?

ಎಂಥ ದಿವ್ಯವಾದ ಗುರು ಶಿಷ್ಯರ ಸಮಾಗಮ
ಜ್ಯೋತಿ ಬೆಳಕಿನಲ್ಲಿದೇಯೋ?
ಇಲ್ಲಾ ಬೆಳಕು ಜ್ಯೋತಿಯಲ್ಲಿಯೋ?
ಮುಂದಿನ ದಿನಗಳಲ್ಲಿ ಇಬ್ಬರ ಬಾಂಧವ್ಯವೂ ಕೂಡ ಹಾಗೆಯೇ ನಡೆದಿತ್ತು.

ಮುಂಜಾನೆ ನಸುಕಿನಲ್ಲಿ ಇಬ್ಬರು ಏಳುತ್ತಿದ್ದರು. ತಾಯಿ ಕೃಷ್ಣೆಯ ಮಡಿಲಲ್ಲಿ ಇಳಿದು ಸ್ನಾನಮಾಡಿ ಎಷ್ಟೋ ಹೊತ್ತು ಒಂಟಿ ಬಂಡೆ ಮೇಲೆ ಕುಳಿತು ಧ್ಯಾನ ಮಾಡುತ್ತಿದ್ದರು. ಸುತ್ತಲೂ ಕವಿದ ಮೌನ, ಆಗಿನ್ನು ಕತ್ತಲೇ ನಿಧಾನವಾಗಿ ಕರಗುತ್ತಾ ಬೆಳಕಿನ ಹೊದಿಕೆ ಜಗದೆ ತುಂಬ ಹಾಸುವ ಹೊತ್ತು. ಹೊರಗಿನ ಬೆಳಕು ಭಗವಂತನ ರೂಪದಿಂದ ಇವರ ಅಂತರಂಗಕ್ಕಿಳಿಯಬೇಕು. ಅದರಲ್ಲಿ ವಿಲೀನ ಗೊಂಡ ಮನಸ್ಸು ಆ ಬೆಳಕು ಹರಿಯ ಸುಂದರ ರೂಪವಾಗುತ್ತಾ ಆಕಾರ ಪಡೆಯುತ್ತಾ ಅವರ ಹೃದಯಕಮಲದಲ್ಲಿ ನಿಲ್ಲಬೇಕು.

ಎಂಥಹ ಬ್ರಹ್ಮಾನಂದದ ಅನುಭವ ಶರೀರವೆಲ್ಲಾ ಹಗುರವಾದಂತೆ ಸರ್ವವ್ಯಾಪಿಯಾದ ಹರಿ ತಮ್ಮೊಳಗೆ ವಿಲೀನವಾಗಿ ಇದೇ ಭಗವದ್ಭಕ್ತನ ಅನುಭವ ಎನ್ನುವಂತೆ ಮನಸ್ಸು ಪರಿಪೂರ್ಣ ಗೊಳ್ಳುತ್ತಿತ್ತು. ಅದೇ ತಾನೇ ಹುಟ್ಟುವ ಸೂರ್ಯನಿಗೆ ಅರ್ಘ್ಯ ಕೊಟ್ಟು ಧ್ಯಾನ, ಗಾಯಿತ್ರಿ ಜಪ, ಮುಗಿಸಿ ಮನೆಗೆ ಬಂದು ದಾಸರು ಒಂದ್ಮೈದು ಮನೆಯಲ್ಲಿ ಅವರ ದಾಸವೃತ್ತಿಗೆ ತಕ್ಕಂತೆ ಗೋಪಾಲ ಮುಗಿಸಿ ಬಂದಾಗ ಗುರುಗಳು ದೇವರ ಮನೆಯಲ್ಲಿ ಪೂಜೆ ಮಾಡುವಾಗ ದಾಸರು ಮಡಿಯುಟ್ಟು ತಾವು ತಮ್ಮ ದೇವರ ಪೆಟ್ಟಿಗೆ ತೆಗೆದುಪೂಜೆ ಮುಗಿಸಿ ಮತ್ತೇ ತಂಬೂರಿ ಮೀಟುತ್ತಾ ಹಾಡಬೇಕು.

“ಮರೆಯದಿರು ಮನವೇ ಮಾಧವನಾ
ದುರಿತ ದಾರಿದ್ರ್ಯವನು ಹರಿಸಿ ಹೊರೆವವನಾ”

ಭಕ್ತಿಯ ತರಂಗಗಳು ಮನೆ ತುಂಬಿ ಮನ ತುಂಬಿ ಹರಿದು ಸಂಗೀತ ಸುಧೆ ಅವರ ಹೃದಯದ ತುಂಬಾ ಚೆಲ್ಲಾಡುತ್ತಿತ್ತು. ದಾಸರ ಅನನ್ಯ ಭಕ್ತಿ ಆಚಾರ್ಯರು ಅನನ್ಯ ಅಂತಃಕರಣದಿಂದ ಹೇಳುತ್ತಿದ್ದರು.

"ಧನ್ಯ ದಾಸರೇ, ಧನ್ಯ ದೇವರ ದಯೆ ಜ್ಞಾನ ಭಕ್ತಿ ವೈರಾಗ್ಯ ಪಡೆದವರು ನೀವು ಇನ್ನು ನನ್ನ ಸಿದ್ಧಾಂತದ ಹಾದಿ ಯಾಕೆ, "ಅದು ನನ್ನ ಉದ್ಧಾರಕ್ಕೆ" ಆಚಾರ್ಯರೇ ಎನ್ನುವವರು ದಾಸರು. ಆಯಿತು ಪೂಜೆ ಪುನಸ್ಕಾರ ಮುಗಿಸಿ

ಗುರು ಶಿಷ್ಯರ ಅಧ್ಯಯನ ಸುರುವಾಗುತ್ತಿತ್ತು. ಅದು ಎಂಥಹ ಗುರು ಶಿಷ್ಯರ ಅಧ್ಯಯನ ಪರಿ

ಶ್ರೀ ಮುದ್ಗಲಾಚಾರ್ಯರೇನು ಸಾಮಾನ್ಯ ಪಂಡಿತರಲ್ಲ ಅಸಾಮಾನ್ಯವಾದ ಜ್ಞಾನ ವೇದ, ಉಪನಿಷತ್ತು, ತರ್ಕ ತತ್ವ ಮಧ್ವಸಿದ್ಧಾಂತದ ಒಳ ತಿರುಳು ಸರ್ವ ಮೂಲಗ್ರಂಥಗಳ ಸಾರವನ್ನೇ ಅರೆದು ಕುಡಿದವರೆಂದೂ ಯಾರಿಗೆ ಗೊತ್ತಿಲ? ದಾಸರಂತೂ ಅವರ ಮುಂದೆ ಕೂತರೆ ಇಡೀ ಸುತ್ತಲಿನ ಪ್ರಪಂಚದ ಅರಿವೇ ಇಲ್ಲದಷ್ಟು ತನ್ಮಯ ರಾಗಿ ಇರುತ್ತಿದ್ದರು.

ದಾಸರಲ್ಲಿ ಭಕ್ತಿಯ ಆಳ ಅಗಾಧವಾಗಿತ್ತು ಅಗಮ್ಯವಾಗಿತ್ತು. ಅನನ್ಯವಾದ ಮನಸ್ಸು ಸದಾ ಹರಿಯಲ್ಲೇ ಲೀನವಾಗಿರುತ್ತಿತ್ತು. ಹೃದಯಲ್ಲಿ ತುಂಬಿದ ಭಕ್ತಿ ಸಾಗರದೊಡನೆ ಗುರುಗಳ ಅವರ ಅಂತರಂಗಕ್ಕೆ ಹರಿಸುತ್ತಿದ್ದ ಜ್ಞಾನಸಾಗರ ಅವರನ್ನು ಪಾವನರನ್ನಾಗಿ ಮಾಡುತ್ತಿತ್ತು.

ಗುರುಗಳು ಯಾವಾಗಲೂ ಹೇಳುತ್ತಿದ್ದರು.

"ದಾಸರೇ ವೇದಾದ್ಯಯನ ಸಂಸ್ಕೃತ ಪಾಠಗಳು ಮದ್ವಮತದ ಗ್ರಂಥಗಳು ನಮ್ಮ ಸಂಸ್ಕೃತಿಯ ಅಮೂಲ್ಯ ನಿಧಿಗಳು ಬೊಗಸೆಯೊಡ್ಡಿ ಕುಡಿಯುತ್ತಿದ್ದರೆ ತಣಿಯದಂಥ ಜ್ಞಾನದಾಹದ ತಿರುಳು.

ಖರೇ ಆಚಾರ್ಯರ ವಾಣಿ ಎಂದರೆ ಶ್ರೀ ಮದಾನಂದ ತೀರ್ಥರ ವಾಣಿಯಂತೆ ದ್ವೈತದ ಅಗಾಧವಾದ ತಿರುಳು ಎಂಥೆಂಥಹ ಪ್ರಕಾಂಡ ಪಂಡಿತರೊಡನೆ ಜಿಜ್ಞಾಸೆ ನಡೆಸಿ ಗೆದ್ದು ಬಂದ ಮುಖವಾಣಿ ಅವರದು.

ದ್ವೈತಕ್ಕೂ ಅದ್ವೈತಕ್ಕೂ ಇರುವ ತಾರತಮ್ಯವನ್ನು ಹೇಳುತ್ತಿದ್ದು ಕೇಳುತ್ತಿದ್ದರೇ ಮನಸ್ಸಿನ ಅಂತರಾಳದಲ್ಲಿ ಇಳಿದು ಬೇರು ಬಿಟ್ಟು ಮತ್ತೇ ಮತ್ತೇ ಚಿಗುರುತ್ತಿರುವಂತೆ ಅನೇಕ ಪ್ರಶ್ನೆಗಳು ತಲೆದೋರುತ್ತಿದ್ದವು.

"ಹಾಗಾದರೆ ದ್ವೈತಕ್ಕೂ ಅದ್ವೈತಕ್ಕೂ ಇರುವ ತಾರತಮ್ಯ ಯಾವುದು?"

ಆಚಾರ್ಯರು ಹೇಳುತ್ತಿದ್ದರು. ಎಷ್ಟು ಸ್ಪಷ್ಟವಾಗಿ ಎಷ್ಟು ಸ್ಫುಟವಾಗಿ

"ಶ್ರೀ ಮದಾಚಾರ್ಯರು ಬರೂದಕಿಂತ ಮುಂಚೆ ಈ ಭರತಖಂಡದಾಗ ಇಪ್ಪತ್ತೊಂದು ಮತಗಳು ಇದ್ದು ಅವು ಸಹಜವಾಗೇ ತಮ್ಮ ತಮ್ಮ ತತ್ವಗಳನ್ನು ಬೀರತಿದ್ವು. ಅದು ಸಹಜ ಕೂಡ ಯಾವುದೇ ಮತ ತಮ್ಮ ತಮ್ಮ ತತ್ವ ಸಿದ್ಧಾಂತಗಳನ್ನು ಪ್ರಚಾರ ಮಾಡೋದು ಸುದ್ದೆ



ಅವುಗಳ ಸ್ವಾಭಾವಿಕ ಕ್ರಿಯೆ ಆದ್ರ ಸ್ಥಾಪಿತ ಆಗಿದ್ದ ಆ ಇಪ್ಪತ್ತೊಂದು ಮತಗಳನ್ನು ಖಂಡನಾ ಮಾಡಿ ದ್ವೈತ ಮತವನ್ನು ತತ್ವಗಳು ವಿರೋಧ ಮಾಡದಂತೆ ದ್ವೈತ ಮತ ಸ್ಥಾಪನಾ ಮಾಡಿದ್ರೂ ಅಂದ್ರ ಅದರ ಸತ್ವ ತರ್ಕ ಸಿದ್ಧಾಂತ ಎಷ್ಟು ಗಟ್ಟಿಯಾಗಿರ್ಬೇಕು ನೋಡ್ರೀ.

ಇದರ ಮೂಲ ಸಿದ್ಧಾಂತ ಏನು ಅಂದ್ರ ಶ್ರೀ ಹರಿ ಯಾವಾಗಲೂ ಸ್ವತಂತ್ರ್ಯ ಆಲಕ್ಷ್ಮೀದೇವಿ ಉಳಿದ ದೇವತೆಗಳೆಲ್ಲ ಪರತಂತ್ರರೇ ಅಂದ್ರ ಸ್ವಾಧೀನರು ಎಂದು ಪ್ರತಿಪಾದಿಸಿದ್ರು.

ಇದರ ಜೋಡಿ ಜಗತ್ತು ಸತ್ಯವಾದದ್ದು ಇದೆಲ್ಲಾ ಅಂದ್ರ ಜಗತ್ತು ಮಾಯೆ ಅಂತ ಅದ್ವೈತ ಹೇಳಿದ್ರ ಅದು ನಿತ್ಯ ಸತ್ಯವಾದದ್ದು ಅಂದ್ರು ಶ್ರೀ ಮದಾನಂದಚಾರ್ಯರು ಕಣ್ಣಿಗೆ ಕಾಣುವುದೆಲ್ಲಾ ಸತ್ಯವೇ ಅಲ್ಲವೇ ಎನ್ನುವುದು ಅವರ ತರ್ಕ.

ನೂಲೆಳೆಯನ್ನು ಹಿಂಜಿ ಹಿಂಜಿ ತೆಗೆದಂತೆ ಆಚಾರ್ಯರು ದಾಸರಿಗೆ ಈ ಸರ್ವಮೂಲ ಗ್ರಂಥಗಳ ಸಾರವನ್ನು ಬಿಡಿಸಿ ಬಿಡಿಸಿ ಹೇಳುತ್ತಿದ್ದರು. ಆ ಸಿದ್ಧಾಂತದ ಅಂತರಾಳದೊಳಗೆ ಇಳಿದು ಅರ್ಥ ಪೂರ್ಣವಾದ ಅದರ ಧ್ವನಿಗಳನ್ನು ಗ್ರಹಿಸುತ್ತಿದ್ದರು ದಾಸರು.

"ಜೀವರಾಶಿಗಳಲ್ಲಿ ಕೂಡ ಭಿನ್ನವಿದೆ ಅಂದಾರಲ್ಲ ಆಚಾರ್ಯರು ಅದರ ಮರ್ಮವೇನು? ಎನ್ನುವ ದಾಸರ ಪ್ರಶ್ನೆಗೆ ಆಚಾರ್ಯರು ಹೇಳುತ್ತಿದ್ದರು.

"ಅದು ಹ್ಯಾಂಗಂದ್ರ ಜೀವ ಜೀವ ಭೇದ ಜಡ ಜಡ ಭೇದ ಜೀವ ಜಡ ಭೇದ ಜೀವ ಈಶಗೆ ಭೇದ ಜಡ ಈಶಗೆ ಭೇದ ಹೀಗೆ ಪ್ರತಿಯೊಂದರಲ್ಲೂ ಭಿನ್ನತೆಯಿದೆ ಜೀವಕ್ಕೂ ಪರಮಾತ್ಮನಿಗೂ ಭೇದವಿದೆ".

ಜೀವ ಪರಮಾತ್ಮನಾಗಬಲ್ಲ ಎನ್ನುತ್ತದೆ ಅದ್ವೈತ ಆದರೆ ದ್ವೈತ ಹಾಗಲ್ಲ ಜೀವಕ್ಕೂ ಪರಮಾತ್ಮನಿಗೂ ಭೇದವಿದೆ. ಲಕ್ಷ್ಮೀಯೂ ನಿತ್ಯಮುಕ್ತಳಾದರೂ ಆಕೆ ಸರ್ವೋತ್ತಮನಾದ ಹರಿಗೆ ಸಮಾನಳಾಗಲಾರಳು. ಅಲ್ಲದೆ ಬ್ರಹ್ಮಾದಿ ದೇವತೆಗಳೂ ಕೂಡ ಲಕ್ಷ್ಮೀಗೆ ಸಮಾನರಾಗಲಾರರು. ಹಾಗೇ ಉಳಿದ ಜೀವರಾಶಿಗಳು ಕೂಡ, ಬ್ರಹ್ಮಾದಿದೇವತೆಗಳಿಗೆ ಸಮಾನರಾಗಲಾರರು.

ಇದು ಜೀವ ಜೀವಗಳ ಭಿನ್ನತೆಯನ್ನು ತೋರುತ್ತದೆಲ್ಲವೇ?

ಒಂದೇ ಎರಡೇ ಅಧ್ಯಯನಕ್ಕೆ ಕೂತರೇ ಸಂವಾದ ಪ್ರಶ್ನೆಗಳು ನಡೆಯುತ್ತಿದ್ದವು. ಗುರುಗಳು ಒಂದು ಬಾರಿ ಹೀಗೆಯೇ ಭಕ್ತಿ ಜ್ಞಾನದ ಮಾತು ಬಂದಾಗ ಹೇಳಿದ್ದರು.

"ದಾಸರೇ ಜ್ಞಾನ ಭಕ್ತಿಯ ಮಾರ್ಗ ಮುಕ್ತಿಯ ಮಾರ್ಗ ಅಂತ ಹೇಳ್ಯಾರ ಶ್ರೀ ಮದಾಚಾರ್ಯರು ಅದು ಸಾಕ್ಷಾತ್ ನಿಮ್ಮನ್ನು ನೋಡಿದ ಮ್ಯಾಲೆ ಅರ್ಥ ಆಗೋ ಮಾತು ನೋಡ್ರೀ" ಎಂದರು ಗುರುಗಳು

"ಅದು ದೊಡ್ಡಮಾತು ಗುರುಗಳ ನಾನು ಆ ಭಗವಂತನ ದಾಸ ಅಣು ಇದ್ಧಂಗ ಆ ಮುಕ್ತಿ ಮಾರ್ಗದ ಹಾದಿ ಇನ್ನೂ ದೂರದ ಸಾಧನೆ ಹಾದಿ ಇನ್ನೂ ನಡೆಯೋದದ ಬ್ಹಾಳ ನಡೀಬೇಕು"

ದಾಸರ ವಿನಯ ತುಂಬಿದ ಮಾತು

"ಖರೇ ದಾಸರ ಎಲ್ಲಾದರಿಂದ ವಿರಕ್ತ ಆದಾಂವಗೆ ಸಾಧನೆ ಹಾದಿ ಆತು ಮುಕ್ತಿ ಮಾರ್ಗ ಆತು ಬ್ಹಾಳ ದೂರದ್ದು ಅಲ್ಲ ಇರ್ಲಿ ಸಾಕ್ಷಾತ್ ಶ್ರೀ ಹರಿನ ಬಂದು ನಿಮ್ಮ ನಾಲಿಗೆ ಮ್ಯಾಲೆ ಅಕ್ಷರ ಬಿತ್ತಿ ದಾಂವಾ ಇನ್ನ ನಿಮಗ ಜ್ಞಾನದ ಪಾತ್ರಿ ಕೈಯಾಗ ಆದ ಆದ್ರ ಬಿತ್ತಿದ್ದನ್ನು ಬೆಳಿಲಿಕ್ಕೆ ಬ್ಯಾರೆ ಸಾಧನಾನೂ ಬೇಕು ಅದರ ಅವಶ್ಯ ಕತಾನಾ. ಮಧ್ವ ಸಿದ್ಧಾಂತ ನಮ್ಮ ಧರ್ಮ ಶಾಸ್ತ್ರ ಭಕ್ತಿ ಪಂಥಕ್ಕೆ ಮೂಲದ್ರವ್ಯ ಇದ್ಹಂಗ ಆ ದ್ರವ್ಯ ಸಂಪಾದಿಸೋ ಕಾರ್ಯ ನಿಮ್ಮದು ಅಂತ ಹೇಳಿದ್ರೀ ಅಲ್ಲ? ಈಗ ಮದ್ವ ಸಿದ್ಧಾಂತದ ತತ್ವ ತರ್ಕವ ತಿಳಿಯೋಣ" ಎನ್ನುತ್ತಾ ಗ್ರಂಥಗಳ ಪ್ರತಿಯೊಂದು ಶ್ಲೋಕ ಸಿದ್ಧಾಂತಗಳನ್ನು ಅರ್ಥೈಸುತ್ತೆ ಪರಾವರ್ಶಿಸುತ್ತೇ ಅವರ ಅಂತರಂಗಕ್ಕೆ ತಟ್ಟುವಂತೆ ಹೇಳುತ್ತಿದ್ದರು.

ಎಷ್ಟೋ ಸಲ ಅಧ್ಯಯನ ಮುಗಿಸಿ ಮೂರು ಸಂಜೆ ಹೊತ್ತಿನಲ್ಲಿ ಕೃಷ್ಣೆಯ ದಡದಲ್ಲಿ ಕುಳಿತು ದಾಸರು ಅದನ್ನೆಲ್ಲಾ ಮನನ ಮಾಡುತ್ತಿದ್ದರು. ಏನು ಹೇಳುತ್ತಿದ್ದರು ಗುರುಗಳು.

ನಿರ್ಮಲವಾದಂಥಹ ಭಕ್ತಿಯೂ ಮುಕ್ತಿಗೆ ಸಾಧನ ಸ್ವರೂಪ ಸಮಸ್ತ ವೇದಗಳಿಂದ ಮುಖ್ಯವಾಗಿ ತಿಳಿದುಕೊಳ್ಳುವುದು.

ಶ್ರೀ ಹರಿಯು "ವೇದ ವಿದೇಹ ಚಾಹವ್" ಎಂದು ಎಲ್ಲಾ ವೇದಗಳನ್ನು ತಿಳಿದುಕೊಳ್ಳುವವನು ಶ್ರೀ ಹರಿಯು.

ಸೂರ್ಯಾಸ್ತದ ವೇಳೆ ಮುಳುಗುವ ಸೂರ್ಯನನ್ನು ನೋಡುತ್ತಾ ತಾವು ಕಲಿತ ಓದಿದ ಅಧ್ಯಾಯಗಳನ್ನು ಗುರುಗಳು ಹೇಳಿದ ಎಲ್ಲಾ ವಿಚಾರಗಳನ್ನು ಮನನ ಮಾಡಿಕೊಳ್ಳುತ್ತಿದ್ದರು. ನಿಸರ್ಗ ಎಂದಿನಿಂದಲೂ ತಮಗೆ ಪ್ರಿಯವಾದ ಸಂಗಾತಿ ಸಾಮಾನ್ಯಳಾಗಿದ್ದ ಅವ್ವ ಕೂಡ ನಿಸರ್ಗದಲ್ಲಿ ದೇವರಿದ್ದಾನೆ ಎಂದಿದ್ದಳು.

ಇದೆಲ್ಲ ನಿತ್ಯ ಸತ್ಯ ಎಂದಿದ್ದಾರೆ ಆಚಾರ್ಯರು ಕೂಡ, ಪರಮಾತ್ಮ ಜೀವಾತ್ಮ ಬೇರೆಯಾದರೂ ಎಲ್ಲಾದರಲ್ಲೂ ದೇವರಿದ್ದಾನೆ ಎನ್ನುವುದು ಕೂಡ ನಿತ್ಯ ಸತ್ಯ ಜೀವಾತ್ಮನಿಲ್ಲದೇ ಪರಮಾತ್ಮ ಇರಬಹುದು ಆದರೆ ಪರಮಾತ್ಮನಿಲ್ಲದೆ ಜೀವಾತ್ಮ ಇಲ್ಲ ಎನ್ನುವುದಂತೂ ಖರೇ

ಆಗೇಲ್ಲ ದಾಸರು ನಿಸರ್ಗದ ಮಡಿಲಲ್ಲೇ ಕೂತು ಅನೇಕ ಕೀರ್ತನೆಗಳನ್ನು ರಚಿಸುತ್ತಿದ್ದರು ಅವಕ್ಕೆಲ್ಲ ಮಧ್ವಸಿದ್ಧಾಂತದ ರೂಪುಗಳೇ ಮೂಲ ದ್ರವ್ಯವಾಗಿರುತ್ತಿತ್ತು.

"ದೇವ ದೇವೇಶ ವೆಂಕಟೇಶಾ ಶ್ರೀ ವಿಧಾತಾವಂದ್ಯ
ಭೂವೆಂಕಟೇಶ
ಅನಂತಾ ಗುಣಪರಿಪೂರ್ಣ ಸ್ವಾಮಿ
ಅನತಜನ ಬುಧಾ ಭರಣ
ಧೇನೊ ಗಿರಿನಾಥ ದಾನಿ ಪ್ರಸನ್ವೆಂಕಟ
ಜಾನಾನಂದಾ ನಿತ್ಯಾತೇ ನಮೋ ಕರುಣಿ॥



ಒಂದೇ ಎರಡೇ ಅಂತರಂಗದ ಆರ್ತನಾದವೆಲ್ಲಾ ಅವರ ಕೀರ್ತನೆಗಳಲ್ಲಿ ಪರಮಾತ್ಮನ ದಿವ್ಯ ಪಾದಕ್ಕೆ ನಮೋ ಎನ್ನುವಂತೆ ಭಕ್ತಿರಸ ಅಂತರಂಗಕ್ಕಿಳಿಯುವಂತೆ ಮಿಡಿಯುತ್ತಿದ್ದವು.

ಸುಳಾದಿಗಳ ರೂಪದಲ್ಲಿ ಹರಿಯ ಸರ್ವೋತ್ತಮ ರೂಪವನ್ನು ತೋರಿಸುತ್ತಿತ್ತು.

"ಪ್ರಕೃತಿಯಿಂ ಬದ್ಧ ನಾ। ಪ್ರಕೃತಿಯಾಳುವೆ ನೀನು
ಪುರುಷಾಧೀನ ನಾನು। ಪುರುಷರು ಪ್ರಭು ನೀನು
ಸಕಲ ಸ್ವಾತಂತ್ರ್ಯ ಸ–ದ್ಭಕ್ತಿ ರಾಧೀನವೇ
ನಿಖಿಳ ಸಂದೇಹಧ್ವಾಂತಧೀಕ ಪ್ರಸನ್ವೆಂಕಟೇಶ"

ಪ್ರಕೃತಿಯಿಂದ ಅವನೆಂದು ಬೇರೆಯಲ್ಲ ಪ್ರಕೃತಿಯನ್ನಾಳುವವನು ಪ್ರಕೃತಿಯಾಧೀನ ಮನುಷ್ಯ

ಖರೇ ಜೀವವೆಂಬುದರ ಪ್ರಕೃತಿ ಕೂಡ ಆಸರೆಯ ತಾಣ ಅದನ್ನು ಬಿಟ್ಟು ಜೀವಾತ್ಮನಿಲ್ಲ.

ದಿವ್ಯವಾದ ಅವರ ಇಂಥಹ ಕೀರ್ತನೆ ಸುಳಾದಿಗಳು ಗುರುಗಳು ಹೇಳಿದ ಪಂಚಭೇದ ಜಗತ್ತು ನಿತ್ಯ ಸತ್ಯ ಎನ್ನುವುದು ಕೂಡ ಎಷ್ಟು ಸ್ಪಷ್ಟವಾಗಿ ಅಡಕವಾಗಿತ್ತು.

ಮತ್ತೆ ಎಷ್ಟೋ ವೇಳೆ ಲಕ್ಷ್ಮೀ ನರಸಿಂಹ ದೇವರ ಗುಡಿಗೆ ಹೋಗಿ ಹರಿಯೆದುರು ಧ್ಯಾನಕ್ಕೆ ಕೂತು ಶಾಂತವಾಗಿ ಉರಿಯುವ ನಂದಾದೀಪದ ಬೆಳಕಿನಲ್ಲಿ ತೇಜಃಪುಂಜನಾಗಿ ಕಾಣುತ್ತಿದ್ದ ಶ್ರೀ ಲಕ್ಷ್ಮೀನರಸಿಂಹ ಮೂರ್ತಿಯನ್ನು ತನ್ಮಯರಾಗಿ ನೋಡುತ್ತಿದ್ದರು ಬಾಲಕನ ಭಕ್ತಿಗೊಲಿದ ಕರುಣಾಮಯಿ ಅಲ್ಲವೇ? ನಮ್ಮಪ್ಪ

ಎಂಥಹ ಅಗಾಧ ಲೀಲೆ ಸ್ವಾಮಿ ನಿನ್ನದು. ಅವತಾರಗಳಲ್ಲಿ ಅವತಾರ ಪುರುಷ ನೀನು ದುಷ್ಟ ಶಿಕ್ಷಕನಾಗಿ ನಿನ್ನ ಕಂದನನ್ನು ರಕ್ಷಿಸಲು ಎಂಥಹ ಅವತಾರ ತಾಳಿಬಂದೆ ಎಂದು ಪರಮಾತ್ಮನ ಅವತಾರದ ಮಹಿಮೆಯನ್ನು ಕೊಂಡಾಡುತ್ತಿದ್ದರು.

"ಪ್ರಲ್ಹಾದ ವರದ ಭಯಗಜಕೆ ಸಿಂಹ ಪರಮ ಆಲ್ಹಾದ ಪದವಿತ್ತು ಪೊರೆಯೋ ನರಸಿಂಹ ॥ಪ॥

ಹಿಂದೆ ಹಿರಣ್ಯಕ್ಷನಲ್ಲಿ ಜನಿಸಿದ ಪ್ರಲ್ಹಾದ
ನೊಂದವನ ಭಾದೆಯಲಿ ಮರುಗಿ ಸೊರಗಿ
ಇಂದಿರೇಶ ಸಲುಹೆನಲು ಗಾಢ ಸ್ಥಂಭದಲೊದಗಿ
ಬಂದವನುದರ ಬಗಿದೆ ರುಧಿರವನು ಸವಿದೆ

ಮನಸ್ಸಿನ ಒಳಗಿನ ಆರ್ತತೆ ಹೆಚ್ಚುತ್ತಿತ್ತು. ಭಕ್ತರ–ಭಕ್ತ ನನ್ನ ಶ್ರೀ ಹರಿ, ಭಕ್ತ ಸ್ವಾಮಿ ಎಷ್ಟೊಂದು ಸ್ತುತಿಸಿದರು ಕಡಿಮೆ ನಿನ್ನ ಮಹಿಮೆಎಂದು ಕಣ್ಣೀರು ತುಂಬಿ ಹೇಳುತ್ತಿದ್ದರು.

ಕೆಲವು ಸಲ ಗುರುಗಳ ಎದುರಿಗೆ ಕೂತು ರಚಿಸಿದ ಕೀರ್ತನೆಗಳನ್ನು ಹಾಡುತ್ತಿದ್ದರು. ತಂಬೂರಿ ಹಿಡಿದು ಕುಳಿತರೆ ಕೈಬೆರಳುಗಳು ಮಾತ್ರ ತಂತಿಯ ಮೇಲೆ ಮಿಡಿಯುತ್ತಿದ್ದವು.

ಆದರೆ ಮನಸ್ಸು ಮಾತ್ರ ಆ ಭಗವಂತನಲ್ಲಿ ಜಾರಿ ಅದರ ಜಾಡನ್ನೇ ಹಿಡಿದು ಅವನ ಅಂತರಂಗದಲ್ಲಿ ಇವರು ಕರಗಿಹೋಗಿದ್ದಾರೋ ಇಲ್ಲಾ ಇವರ ಅಂತರಂಗದಲ್ಲಿ ಅವನು ಕುಳಿತು ನುಡಿಸುತ್ತಿದ್ದಾನೋ.

ಗುರುಗಳು ಮಾತ್ರ ತನ್ಮಯತೆಯಿಂದ ಮೂಕರಾಗಿ ಕೇಳುತ್ತಿದ್ದರು.

ಅಧ್ಯಯನದಲ್ಲಿ ದಿನಗಳು ಉರುಳಿದವು.

ಒಂದು ಎರಡು ನಾಕು ವರ್ಷಗಳ ಮೇಲೆ ವರ್ಷಗಳು ಕಳೇದವು. ಮದ್ವಮತದ ಸರ್ವಮೂಲ ಗ್ರಂಥಗಳನ್ನು ಅದರ ಸತ್ವವನ್ನು ಅರೆದು ಕುಡಿದೆ ಎಂಬಂತೆ ಅವರ ಮನದಲ್ಲಿ ಬೇರು ಬಿಟ್ಟಿದ್ದವು. ಅವೆಲ್ಲ ಅವರ ಮುಂದಿನ ಕೀರ್ತನೆಗಳಿಗೆ ಭದ್ರ ಬುನಾದಿ ಹಾಕಿದಂತಿತ್ತು.

ದಾಸರ ಅಧ್ಯಯನ ಕೂಡ ಮುಗಿದಿತ್ತು. ಇನ್ನು ಗುರುಗಳನ್ನು ಅಗಲುವ ದಿನಗಳು, ಅಗಲಲೇ ಬೇಕು ತಮಗೆ ಅವರು ಗುರುಗಳು ಮಾತ್ರ ಆಗಿರಲಿಲ್ಲ. ಜ್ಞಾನದ ಬೆಳಕನ್ನು ತಮ್ಮ ಮುಂದೆ ಹಿಡಿದು ಇಲ್ಲಿ ಬಾ ವೆಂಕಣ್ಣ ಇದು ಜ್ಞಾನದ ಹಾದಿ ಈ ಅಗಾಧ ಜ್ಞಾನಸಂಪತ್ತು ನಿನ್ನದು ನಿನಗಾಗೇ ಇಟ್ಟಿದ್ದೆ. ಈಗ ನಿನ್ನ ಜೋಳಿಗೆಗೆ ಸುರುವಿದ್ದೇನೆ. ಜೋಪಾನವಾಗಿ ನೋಡಿಕೋ ಎನ್ನುವಂತೆ ತಂದೆಯಂತೆ, ಗುರುವಿನಂತೆ, ಮಾರ್ಗದರ್ಶಕರಂತೆ, ಅಂತಃಕರಣ ಪ್ರೀತಿ ತುಂಬಿ ಅನನ್ಯತೆಯಿಂದ ಈ ಪಾಮರನನ್ನು ಕೈ ಹಿಡಿದು ನಡೆಸಿ ಪಾಂಡಿತ್ಯದ ಭಂಡಾರ ಕೈ ಗಿಟ್ಟವರು.

ಇಂಥವರನ್ನು ಅಗಲಿ ಹೋಗಬೇಕೆ? ಎಂಥೆಂಥಹ ಗಳಿಗೆಗಳನ್ನು ತಾನವರ ಜೊತೆ ಕಳೆದಿದೆ. ಚಿಕ್ಕವನಿದ್ದಾಗ ತಂದೆ ತಾಯಿಯವರನ್ನು  ಕಳೆದುಕೊಂಡು ಪರದೇಶಿಯಾದವ ತಾನು. ಏನೋ? ಎಷ್ಟು ಜನ್ಮದ ಸುಕೃತವೋ ಆ ಭಗವಂತ ತನ್ನನ್ನು ಉದ್ಧಾರ ಮಾಡಿದ ಈಗ? ಈಗ ಗುರುಗಳೇ ತಮಗೆ ತಂದೆ ತಾಯಿಯಂತೆ ಅಂತಃಕರಣದಿಂದ ನೋಡಿಕೊಂಡಿದ್ದರು. ತಮ್ಮ ಪಾಂಡಿತ್ಯವನ್ನೆಲ್ಲ ಅರೆದು ಕುಡಿಸಿದ್ದರು ಸಂಸ್ಕೃತ ಭಾಷೆಯ ಒಳ ತಿರುಳನ್ನು ಕೂಡ ಮನನ ಮಾಡಿಸಿದ್ದರು. ತಮ್ಮದು ಗುರು ಶಿಷ್ಯರ ಸಂಬಂಧ ಮಾತ್ರ ಆಗಿರಲಿಲ್ಲ. ಅಂತಹ ಗುರುಗಳನ್ನು ಈಗ ಅಗಲಿ ಹೋಗಬೇಕೆ? ಹೊರಡುವ ದಿನಗಳು ಹತ್ತಿರ ಬಂದಾಗ ದಾಸರು ಎರಡು ದಿನ ಮನಸ್ಸನ್ನು ಹೈರಾಣಾ ಮಾಡಿಕೊಂಡಿದ್ದರು.

"ದಾಸರ ನೀವು ತಿಳಿದವರಿದ್ದೀರಿ ವೇದಾಂತದ ಸಾರ ಎಲ್ಲ ಅರೆದು ಕುಡದೀರಿ ಜೀವ ಜೀವಗಳ ಈ ಅಗಲಿಕೆ ಋಣಾನುಬಂಧದ ಮಾತಲ್ಲ? ನಂದು ಯಾವ ಜನ್ಮದ ಸುಕೃತನೋ ನಿಮ್ಮಂಥ ಶಿಷ್ಯ ದೊರಕಿದ್ದು ನಿಮ್ಮಿಂದ ಆಗಬೇಕಾದ ಭಗವತ್ ಕಾರ್ಯ ಬ್ಹಾಳದ ನಾ ನಿಮಗ ಕೊಟ್ಟದ್ದು ಪಾಂಡಿತ್ಯದೊಳಗಿನ ಒಂದು ಬೊಗಸೆ ನೀರು. ಅದನ್ನು ಸಾಗರದ ಗತೇ ಜಗತ್ತಿಗೆ ಹಂಚಬೇಕು. ಎಂದಿದ್ದರು. ದಾಸರು ಬಾಗಿ ಗುರುಗಳ ಎರಡು ಪಾದಗಳನ್ನು ಗಟ್ಟಿಯಾಗಿ ಹಿಡಿದರು. ಎದೆಯಿಂದ ಉಕ್ಕಿಬಂದ ಅಂತಃಕರಣ, ದುಃಖ, ಗೌರವ, ಪ್ರೀತಿ ಆದರ

"ಸ್ವಾಮಿ ಏನು ಕೊಟ್ಟೇನು ನಾನು ನಿಮಗೆ? ಗುರು ದಕ್ಷಿಣೆಯಾಗಿ ಏನು ಕೊಟ್ರು ಅದ



ಕಡಮೀನ ನನ್ನ ಪ್ರೀತಿ ಅಂತಃಕರಣ ಋಣ ಮಾತುಗಳಿಗೆ ಅಷ್ಟೇ ಸೀಮಿತ" ಎಂದು ದಾಸರು ಭಾವ ತುಂಬಿ ಹಾಡಿದರು.

"ಭಜಿಸಿ ಸುಖಿಸಿರೋ ಬಿಡದೆ
ಭಕುತಿಯಲಿ ಗುರುಪದಾಂಬುಜವನನುದಿನ ಸಕಲ ಸುಜನರೆಲ್ಲ॥
ದ್ವಿಜರಾಜನಂತೆ ಬೆಳದಿಂಗಳನು ಮೂರ್ಜಗಕೆ ಬೆಳಗುತಿಹ
ಮುದ್ಗಲಾರ್ಯರನ

ಕರುಣೆ ಗೋವಿಂದಾಭಿಧಾರ್ಯಾಬ್ಧಿಯಲಿ ಜನಿಸಿ ದಿನಕರನಂತೆ ಉದಯಿಸಿ ಭೂಮಿಯಲ್ಲಿ
ಶರಣಾಗೌತಾಷಧಿ ವನಸ್ಪತಿಗಳನ್ನು ಸತತ ಹರಿದು ।
ಸಿರಿವಿಷ್ಣುಪದಹೊಂದಿ ನಂದಿಪನಾ
ಸುಖತೀರ್ಥ ಶಾಸ್ತ್ರದಿಂದ ಕಳಂಕ ಎಂದೆನಿಸಿ ಅಕಳಂಕ ವಾಗ್ರೋಚಿಯು॥"

ಹಾಡು ಮುಗಿದಾಗ ದಾಸರ ಕಣ್ಣುಗಳಿಂದಷ್ಟೇ ಅಲ್ಲ ಗುರುಗಳ ಕಣ್ಣಲ್ಲೂ ಈ ನೀರು ಅದು ಪ್ರೀತಿ ರೂಪವಾಗಿ, ಆಶೀರ್ವಾದ ರೂಪವಾಗಿ, ಗುರುಗಳು ಅನನ್ಯ ಅಂತಃಕರಣದಿಂದ ದಾಸರ ಮೈದಡವಿ ಹೇಳಿದ್ದರು.

"ಹೋಗಿ ಬರ್ರೀ ದಾಸರ ನಿಮ್ಮಿಂದ ಜಗತ್ತು ಉದ್ಧಾರ ಆಗೋ ಕಾರ್ಯ ಭಗವಂತ ಮಾಡಿಸಲಿ ನಿಮ್ಮ ಅನನ್ಯ ಶಬ್ಧ ಭಂಡಾರದಾಗ ನಾ ಇದ್ದೀನಿ ಸದಾ ಇದ್ದೀನಿ" ಎಂದು ದಾಸರನ್ನು ಬೀಳ್ಕೊಂಡರು.

ಒಂದು ಮಹಾಚೇತನ ಇನ್ನೊಂದು ಮಹಾಚೇತನವನ್ನು ಅಗಲುವಾಗ ಆಗಿದ್ದು ಬೆಳಕಿನ ಒಂದು ಮಹಾಯಾನ ಎನ್ನುವಂತೆ ದಾಸರು ತಮ್ಮ ತಂಬೂರಿ ಗೋಪಾಲಬುಟ್ಟಿ ಹಿಡಿದು ಗೆಜ್ಜೆ ಕಾಲುಗಳನ್ನು ತಾಳಕ್ಕೆ ತಕ್ಕಂತೆ ಇಡುತ್ತ ಅಂಗಳ ದಾಟಿ ನಿಧಾನವಾಗಿ ಊರಿನ ಕಾಲು ದಾರಿ ಹಿಡಿದರು. ಅವರ ಸುಮಧುರಗಾನ ಅಂಗಳದ ತುಂಬೆಲ್ಲ ಹರಡಿ ಹೋದಲೆಲ್ಲ ಪರಿಮಳ ಪಸರಿಸಿದಂತೆ ಹಬ್ಬುತ್ತಲೇ ಇತ್ತು.

"ಹರಿ ನೀ ವಿಡಿದ ಕಲ್ಲುವೆರತುನಾ॥ಪ॥
ಹರಿ ನೀ ಕನಕಗಿರಿ ಗಣಪತಿ ಎನಿಪೆ
ಹರಿ ನೀ ತೃಣವೆಚ್ಛಾ ಮಾಡುತಲಿಪ್ಪೆ
ಹರೀ ನೀ ಘನಕೆ ಘನತರ ಸನ್ಮಹಿಮಾ
ಹರಿ ನೀ ಪ್ರಸನ್ವೆಂಕಟನ ಪೊರೆಯಮ್ಮಾ॥"

ಖರೇ ದಾಸರು ಕೂಡ ಈಗ ಹರಿ ಕೈ ಎತ್ತಿ ಹಿಡಿದ ರತ್ನವೇ ಆಗಿದ್ದರು. ಈಗ ಗಲಗಲಿ ಬಿಟ್ಟು ಬಾಗಲಕೋಟೆಗೆ ಬಂದಾಗ ಅವರ ಇಡೀ ವ್ಯಕ್ತಿತ್ವದ ನಿಲುವೆ ಬೇರೆಯಾಗಿತ್ತು.

ಅಂಗಳದಲ್ಲಿ ಬಂದು ನಿಂತಿದ್ದಾರೆ ದಾಸರು ಅಂಗಳದ ತುಂಬ ಪಸರಿಸಿದ ಬೆಳಕಿನಂತೆ ಅವರ ತೇಜಃಪುಂಜನಾದ ವ್ಯಕ್ತಿತ್ವದ ಬೆಳಕು ಇಡೀ ಊರು ಇಡೀ ಓಣಿ ಪಸರಿಸಿದಂತೆ ಕಾಣುತ್ತಿದೆ. ಓಣಿಯವರು ಒಬ್ಬೊಬ್ಬರಾಗಿ ಬರುತ್ತಿದ್ದಾರೆ.

"ದಾಸರು ಬಂದಾರ ಎಷ್ಟು ವರ್ಷದ ಮ್ಯಾಲೆ ಮತ್ತೆ ಅವರ ದರ್ಶನ ಅವರು ಊರು ಬಿಟ್ಟು ಹೋದಮ್ಯಾಲೆ ಓಣಿ ಊರು ಎಲ್ಲ ಹಾಳು ಬಡೆದ್ದಂಗ ಆಗಿತ್ತು. ಈಗ ಕತ್ತಲು ಕಳೆದು ಬೆಳಕು ಹರಿದ್ಹಂಗೆ ಆಗೇದ" ಎನ್ನುತ್ತ ಬರುತ್ತಿದ್ದಾರೆ ಒಳಗಿನಿಂದ ಅಣ್ಣ ಅತ್ತಿಗೆ ಬಂದರು ಅವರ ಮಕ್ಕಳು ಬಂದರು ಓಣಿಯ ಹಿರಿಯರು ಬಂದು ನಿಂತರು.

"ದಾಸರು ಇವತ್ತೇ ಮತ್ತೆ ಊರಿಗೆ ಒಂದು ಕಳೆ ಬಂತು. ನೋಡ್ರೀ ಮತ್ತೆ ನಿಮ್ಮನ್ನ ಯಾವಾಗ ನೋಡೆವೊ ಅನಿಸ್ತಿತ್ತು" ಎನ್ನುತ್ತಿದ್ದರು

"ಬಾ ವೆಂಕಣ್ಣ" ಎನ್ನುತ್ತ ಅಣ್ಣ ಧಾವಿಸಿ ಬಂದು ಅವರ ಕೈಯಲ್ಲಿಯ ತಂಬೂರಿ ತೆಗೆದುಕೊಂಡು ಕೂಸನ್ನು ಎತ್ತಿಕೊಳ್ಳುವಂತೆ ಎತ್ತಿಕೊಂಡು ಗೋಡೆಗೆ ಒರಗಿಸಿಟ್ಟರು. "ನೀ ಹೋದ ಮ್ಯಾಲೆ ಮನಿ ಹಾಳು ಸುರಿದ್ಹಂಗಿತ್ತು ವೆಂಕಣ್ಣ ಬಂದಿ ಮತ್ತೆ ಮನಿ ತುಂಬ ಬೆಳಕು ಚೆಲ್ಲಿದ್ಹಂಗಾತು" ಎಂದಳು ಅತ್ತಿಗೆ "ಭ್ಹಾಳ ದೂರಿಂದ ನಡದು ಬಂದಿಯಪಾ ವಿಶ್ರಾಂತಿ ತಗೋ" ಎಂದರು ಆ ಜನರ ಪ್ರೀತಿಗೆ ಅಂತಃಕರಣಕ್ಕೆ ದಾಸರಿಗೆ ಎದೆ ತುಂಬಿ ಬಂದಂತೆ ಏನೂ ಮಾತಾಡದೆ ಕೈ ಎತ್ತಿ ಮುಗಿದರು. ಓಣಿಗೆ ಓಣಿಯೇ ಅಭಿಮಾನ ಅಂತಃಕರಣನಿಟ್ಟು ಬರುತ್ತಿದ್ದಾರೆ. "ದಾಸರ ನೀವಿನ್ನೂ ಎಲ್ಲೂ ಹೋಗಬಾರದು. ನೀವು ನಮ್ಮನ್ನು ಬಿಟ್ಟು ಹೋದ್ರ ನಮಗೆ ಕಣ್ಣು ಕಟ್ಟಿ ಕಾಡಿಗೆ ಬಿಟ್ಹಂಗ ಆಗ್ತದ ನಮಗೆಲ್ಲ ಮುಂದಿನ ಹಾದಿ ತೋರಿಸರುವವರು ನೀವೆ" ಎನ್ನುತ್ತಿದ್ದಾರೆ.

"ಏನ್ರಪಾ ನಿಮ್ಮ ಅಂತಃಕರಣಕ್ಕೆ ಏನು ಹೇಳ್ಲಿ ನಾನು? ನಾ ಏನು ಹಾದಿ ತೋರ್ಸಾವಾ ನಿಮಗೆ ಹಾದಿ ತೋರಸಾಂವಾ ಆ ಭಗವಂತ ಇದ್ದಾನ"

"ಖರೇ ಭಗವಂತ ಇದ್ದಾನ್ರಿ ಆದ್ರ ಅಂವಾ ನಮ್ಮ ಮುಂದೆ ಇಲ್ಲ ನಮಗೆ ಕಾಣಸಂಗಿಲ್ಲ, ಈಗ ನಮ್ಮ ಕಣ್ಣಿಗೆ ಕಾಣಸೋ ಭಗವಂತ ಅಂದ್ರ ನೀವ ಸ್ವಾಮಿ" ಎನ್ನುವ ಜನರ ಇಂಥ ಪ್ರೀತಿಗೆ ಏನು ಹೇಳಿಯಾರು ಅವರು? ಶ್ರೀ ಹರಿ ಇದು ನಿನ್ನ ಕರುಣಾ ನಿನ್ನ ಕೃಪಾ ನೀ ಒಲಿದರೆ ಜಗ ಒಲಿಯುವುದು ಹರಿ" ಎನ್ನುತ್ತಾ ಬಂದವರ ಹೆಗಲು ತಡವುತ್ತಾ ಅನನ್ಯ ಭಾವದಲ್ಲಿ ಮೀಯುತ್ತಿದ್ದರು.

ಈಗ ದಾಸರಲ್ಲಿ ಓಣಿಯ ಜನ ಬೇರೆ ವ್ಯಕ್ತಿತ್ವವನ್ನೇ ಕಾಣುವಂತಿತ್ತು ಮೊದಲು ಭಕ್ತಿಯಲ್ಲಿ ಮಿಂದು ಬಂದಂತಿದ್ದ ಅವರು ಈಗ ಜ್ಞಾನ ಪಾಂಡಿತ್ಯ ಎಲ್ಲಾ ಸಂಗಮಗಳ ಪರಿಪೂರ್ಣ ದಿಸೆಯಲ್ಲಿ ಮಿಂದು ಬಂದಂತೆ ಕಾಣುತ್ತಿದ್ದರು.

ಮುಂದಿನ ದಿನಗಳು ಅವರ ಪಾಲಿಗೆ ಬರಿ ಹಗಲು ರಾತ್ರಿಗಳಾಗಿರಲಿಲ್ಲ ಇಡೀ ಕಿಲ್ಲೆ ಓಣಿ ಊರು ಅಕ್ಕಪಕ್ಕದ ಊರುಗಳಿಂದ ಜನ ಬಂದು ದಾಸರನ್ನು ಕಂಡು ಕೊಂಡಾಡಿ ಹೋಗುತ್ತಿದ್ದರು. ಕಷ್ಟ ಸುಖ ಹೇಳಿಕೊಳ್ಳುತ್ತಿದ್ದರು. ಅವರ ಕೀರ್ತನೆಗಳು ತಂಬೂರಿ ನಾದವನ್ನು ಕೇಳುತ್ತಾ ಮೈಮರೆಯುತ್ತಿದ್ದರು. ತಮ್ಮಲ್ಲಿ ಮಥಿಸಿ ಬಂದ ಅನುಮಾನಗಳನ್ನು ಕೇಳುತ್ತಿದ್ದರು.

"ಸ್ವಾಮಿ ದೇವರು ಇದ್ದಾನ ಅಂತಾರ ಆದ್ರ ಕಣ್ಣಿಗೆ ಕಾಣಿಸದ ದೇವರನ್ನು ನಂಬೋದು ಹ್ಯಾಂಗ್ರಿ?"



"ಹುಚ್ಚಪ್ಪ ದೇವರು ನಿರಾಕಾರ" ಹೂವಿನ ಸುಗಂಧ ಇದ್ಧಂಗ ಸುಗಂಧ ನಮಗ ಅನುಭವ ಆಗ್ತೇದ ಆದ್ರಕಣ್ಣಿಗೆ ಕಾಣಸಂಗಿಲ್ಲ ಅಲ್ಲ? ಆದ್ರೂ ಅಂತಿವೆಲ್ಲೋ ಹೂವಿನ ಸುಗಂಧ ಎಷ್ಟು ಘಮ ಘಮ ಅಂತ ಹಂಗನಪ್ಪಾ. ದೇವರು ಅನ್ನುವ ನಂಬಿಕಿ ಭಾವನಾ ನಮ್ಮೊಳಗೆ ಹುಟ್ಟಬೇಕು. ಒಳಗಿನ ಕಣ್ಣು ತಗದ್ರ ಅನುಭವ ಆಗುವಂಥಾದ್ದು. ಮೊದಲ ನಮ್ಮ ಅಂತರಾತ್ಮ ನಾವು ನಂಬಬೇಕು. ನಂಬಿಕೆ ಭಕ್ತಿ ಕೊಡ್ತದ. ಭಕ್ತಿ ಜ್ಞಾನಾ ಕೊಡ್ತದ ಜ್ಞಾನಾ ಆತ್ಮದ ಶೋಧದೊಳಗೆ ಪರಮಾತ್ಮನೇ ಹುಡುಕತದೆ. ಇದು ಬೆಳಕಿನ ಶೋಧ ಇದ್ದಂಗ. ಕೈಗೆ ಸಿಗೋದು ಕಷ್ಟ. ಆದ್ರ ಸಿಕ್ರ ನೀ ಆನಂತ ಆಗ್ತಿ. ಅವನೊಳಗೆ ನಿನ್ನನ್ನ ಕಾಣ್ತಿ ಎಂದು ಭಕ್ತಿ ಪರವಶದಿಂದ ಹೇಳುತ್ತಿದ್ದರು. ಅವರ ಮಾತುಗಳನ್ನು ಕೇಳುತ್ತ ಜನ ಕೂಡ ತಮ್ಮನ್ನು ತಾವು ಶೋಧಿಸಿಕೊಳ್ಳುವ ದಾರಿ ಹುಡುಕುತ್ತಿದ್ದರು. ಭಾರತ ಭಾಗವತ ಸಾರೋದ್ದಾರಗಳನ್ನು ತತ್ಪರಸ ತುಂಬಿ ಹೇಳುತ್ತಿದ್ದರು.

ಕೇಳ್ರಪ್ಪಾ ಭಾರತ ಭಾಗವತಾ–ಗೀತಾ ನಮ್ಮ ಬದುಕಿನ ಸಾರ ಇದ್ದಂಗ್ಹ. ಅದರ ಸಾರ ನಾವು ತಿಳಿದಷ್ಟು ನಮ್ಮನ್ನು ನಾವು ತಿಳಕೋತ ಹೋಗ್ತಿವಿ. ಇದು ಅಂವಾ ಕೊಟ್ಟ ಜನ್ಮ ಅವರ ಧ್ಯಾನಾ ಅವನ ನಾಮಸ್ಮರಣೆ. ಮುಕ್ತಿ ಸಾಧನದಾಗ ಕಳಿಬೇಕು ಎನ್ನುತ್ತಿದ್ದರು.

ಖರೇ ದಾಸರಿಗೆ ಬದುಕಿನ ಭವದ ಕಟ್ಟು ಇರಲಿಲ್ಲ. ಬವಣೆ ದಾಟಿ ಬದುಕನ್ನು ಭವವನ್ನು ಗೆದ್ದವರು ಅವರು. ಆದರೆ ಬೇರೆಯವರು ಲೌಕಿಕದ ಸಾಗರದಲ್ಲಿ ಮುಳುಗಿ ಏಳುವವರು. ಹಗಲು ಹೊಟ್ಟೆಯ ಬದುಕಿನ ಚಿಂತೆ. ರಾತ್ರಿ ಸಂಸಾರದ ವಿಷಯದ ಚಿಂತೆ ಎರಡನ್ನು ಹಾಗೆ ಹೊತ್ತುಕೊಂಡು ಬರೀ ಪಾರಿಮಾರ್ಥಕವಾಗಿ ಚಿಂತಿಸುವ ಜೀವಗಳು. ದಾಸರವಾಣಿಯನ್ನು ಕೇಳುವ ಅವರಿಗೆ ಬದುಕಿನ ಉದ್ದಾರಕ್ಕೆ ಅದು ಬೇಕಿತ್ತು. ಸಂಸಾರ ಕಟ್ಟಿಕೊಂಡು ಲೌಕಿಕದ ಚಿಂತೆಗಳು ಬೇಕಿತ್ತು.

ಹೀಗೆಯೇ ಒಂದು ಸಂಜೆ ಹರಿನಾಮ ಸ್ಮರಣೆಯ ಮಹಾತ್ಮೆ ಹೇಳಿ ದಾಸರು ತಾವು ಬರೆಯುತ್ತಿದ್ದ ಸುಳಾದಿಗಳ ಗ್ರಂಥವನ್ನು ತಿರುವುತ್ತ ಕುಳಿತಿದ್ದರು. ಈಗ ಬಂದಿದ್ದ ಓಣಿಯ ಜನ ಹೋಗಿ, ಪಡಸಾಲೆ ಖಾಲಿಯಾಗಿತ್ತು. ಪಡಸಾಲೆ ತುಂಬ ಹರಿದ ಮೌನ.

ಕಣ್ಣಾಡಿಸುತ್ತಿದ್ದರು ಸುಳಾದಿಯ ಮೇಲೆ
"ಹರಿಯಂಘ್ರಿ ಮೂಲ ದಾಸತ್ವವ ಹೊಂದಿ
ಪರಮ ಮಂಗಳ ನಾಮ ಸ್ಮರಣೆಯನು ಬಿಡದೆ
ಇರಲೆನ್ನೆ ಮನವು ಇರಲೆನ್ನ ತನುವು
ನಿರುವಾಧಿಕ ಪ್ರಿಯ ನಿರ್ಮಲ ಶ್ರುತಿಗೇಯ
ನಿರುತ ಪ್ರಸನ್ವೇಂಕಟ ಸೇವೆಯಲಿರಲಿ

ಹೌದು ಪ್ರಭು ನಿರತ, ನಿರಂತರ ನಿನ್ನ ಸೇವೆ ನಿನ್ನ ನಾಮ ಸ್ಮರಣೆ ನನ್ನಿ ಜನುಮದ ಗತಿಯಾಗಿರಲಿ ಇದ ಬಿಟ್ಟು ಅನ್ಯವನು ನಾನರಿಯೇ ಹರಿಯೇ ನೀನಿತ್ತೆ ಸೌಭಗ್ಯ ನಿರಂತರವಾಗಿರಲಿ ಎನಗೆ ಎಂದು ಹಂಬಲಿಸುವ ಹೃದಯ ಹರಿಯ ನಾಮದ ಮಿಡಿತದಲ್ಲಿತ್ತು. ಅದರಂತೆ ಅವರು ಕುಳಿತಿದ್ದ ಪರಿಸರ ಕೂಡ ಮೌನ ತಪಸ್ಸು ಮಾಡುವಂತಿತ್ತು.

ಅಂಗಳ ಪಡಸಾಲೆಗೆ ಕವಿದ ಮೂರು ಸಂಜೆಯ ನಸುಗತ್ತಲು ಆ ಕತ್ತಲನ್ನು ಓಡಿಸಲು ಎಂಬಂತೆ ಅವರ ಅತ್ತಿಗೆ ಕಂದೀಲು ಹಚ್ಚಿ ತಂದು ಪಡಸಾಲೆಯ ಗೂಟಕ್ಕೆ ಹಾಕಿದರು. ಈಗ ಮಂದ ಬೆಳಕು ಪಡಸಾಲೆ ಅಂಗಳ ತುಂಬ ಹರಡಿತು. ಆಕೆ ತುಳಸಿಕಟ್ಟೆಗೆ ಅರಿಷಣ ಕುಂಕುಮ ಹಚ್ಚಿ ಒಳಬಂದಾಗಲೂ ದಾಸರು ಮೌನವಾಗಿ ಕಂದೀಲಿನ ಬೆಳಕನ್ನು ನೋಡುತ್ತಾ ಏನನ್ನೋ ಧ್ಯಾನಿಸುತ್ತಿದ್ದರು. ಏನಿದ್ದರೂ ಅವರು ಮತ್ತೇ ಮತ್ತೇ ಧ್ಯಾನಿಸುವುದು ಆ ಶ್ರೀ ಹರಿಯನ್ನೆ ಕುರಿತು ಅವರ ಅನಂತ ರೂಪಗಳನ್ನು ಅವನ ಭಗವದ್ಭಕ್ತರ ಪ್ರೀತಿಯನ್ನು ಅವನ ಲೀಲೆಗಳನ್ನು ಎಂದು ಆ ಮನೆಯವರಿಗೆಲ್ಲ ಈಗ ಗೊತ್ತಾಗೆ ಬಿಟ್ಟಿದೆ. ಅಂಥ ವೇಳೆಯಲ್ಲಿ ಅವರನ್ನು ಮಾತನಾಡಿಸುವುದು, ಬಾಹ್ಯ ಪ್ರಪಂಚಕ್ಕೆ ಎಳೆದು ತರುವುದು ಸುಲಭವೇನಲ್ಲ.

ಆದರೂ ಏನೋ ಮಾತನಾಡಬೇಕೆಂದು ನಿರ್ಧರಿಸಿಯೇ ಅವರ ಅತ್ತಿಗೆ ಬಂದು ಎದುರಿನ ಗೋಡೆಗೆ ಒರಗಿ ನಿಂತರು. ಒಂದು ಎರಡು ಮೂರು ಗಳಿಗೆಗಳು ಕಳೆದರೂ ದಾಸರ ಮನಸ್ಸು ತಮ್ಮ ಧ್ಯಾನ್ಯಾವಸ್ತೆ ಸ್ಥಿತಿಯಿಂದ ಈಚೆ ಬರಲಿಲ್ಲ. ಹಾಗೆ ಬರಬೇಕೆಂದು ಕಾಯ್ದು ಕೊಡುವುದು ತಪ್ಪು ಎಂತಲೇ ಅತ್ತಿಗೆ ಮಾತನಾಡಿದಳು.

"ದಾಸರೇ" ದಾಸರು ಕತ್ತೆತ್ತಿ ನೋಡಿದರು. ಎದುರಿಗೆ ತಾಯಿಯಂತೆ ಅತ್ತಿಗೆ ನಿಂತಿದ್ದಾರೆ. ಈ ಮನೆಗೆ ಆಕೆ ಕಾಲಿಟ್ಟು ಬಂದಾಗಿನಿಂದ ತನ್ನ ತಾಯಿಯಂತೆ ತಿಳಿದಿದ್ದೆ. ಮನುಷ್ಯ ಸಂಬಂಧಗಳನ್ನು ಭಾವನೆಯ ರೂಪದಲ್ಲಿ ಏನೆಲ್ಲ ಕಾಣಬಲ್ಲ ದಾಸರು ಮೃದುವಾಗಿ ಹೇಳಿದರು.

"ವೈನಿ, ನೀವು ನನ್ನ ಹಂಗ ಸಂಭೋಧನ ಮಾಡೋದು ತಪ್ಪಲ್ವ?

"ಯಾಕೆ– ನಾ ಏನು ತಪ್ಪು ಮಾಡಿದೆ?"

"ನಾ ನಿಮಗೆ ಮಗ ಇದ್ದಂಗ ಹೌದಲ್ಲೋ? ಅತ್ತಿಗೆ ಅಂದ್ರ ತಾಯ ಸ್ಥಾನಕ್ಕೆ ನಿಂತವ್ರು. ನಾ ಹೊರಗಿನವರಿಗೆ "ದಾಸರು" ಆಗಿರಬಹುದು ಆದ್ರ ವೈನಿ ನಾ ನಿಮಗೆ ಮೊದಲಿನ ಮೈದುನಾನ"

"ಹೌದಪ್ಪಾ ನೀ– ಮೊದಲಿನ ವೇಂಕಣ್ಣನ ಆದ್ರ ನಿನ್ನ ಮಹಿಮಾ ನಿನ್ನ ಜ್ಞಾನ ಸಂಪತ್ತು. ಜನ ನಿನ್ನನ್ನು ಕೊಂಡಾಡೋದು ನೀನು ಆ ಶ್ರೀ ಹರಿನ್ನ ಒಲಿಸಿಕೊಂಡು ಬಂದಾವಾ. ನಮಗೆಲ್ಲ ನೀನು ಮಹಾತ್ಮನೇ"

"ತಪ್ಪು ತಿಳಿದೀರಿ ವೈನಿ, ನನ್ನ ಜ್ಞಾನ ಸಂಪತ್ತು ಆ ಭಗವಂತ ಕೊಟ್ಟಿದ್ದು. ಅದು ಅವನ ಅನುಗ್ರಹ ಕರುಣಾ ಇಲ್ಲಿ ನನ್ನದನ್ನೋದು ಯಾವುದು ಇಲ್ಲ ವೈನಿ. ತಾಯಿಗೆ ಮಗಾ ಯಾವತ್ತೂ ಮಹಾತ್ಮ ಅಲ್ಲ ಸಾಮಾನ್ಯನ, ಹೇಳ್ರಿ ಏನೋ ಹೇಳಬೇಕಂತ ಬಂದೀರಲ್ಲ?"

"ಖರೇನಪ್ಪಾ ನೋಡು ನೀ ನನ್ನ ಎಲ್ಲಾ ತಪ್ಪು ಕ್ಷಮಾ ಮಾಡಿ ತಾಯಿ ಅಂದಿ. ನನ್ನ ಅಂತಃಕರಣ ತುಂಬಿ ನಿಂತದ ವೇಂಕಣ್ಣ ಅದ ತಾಯಿ ಸ್ಥಾನಕ್ಕೆ ನಿಂತು ಎರಡು ಲೌಕಿಕದ ಮಾತು ಹೇಳ್ತಿನಿ."

"ಹೇಳ್ರಿ"



"ನೋಡು ಮನುಷ್ಯನಾಗಿ ಹುಟ್ಟಿದ ಮ್ಯಾಲೆ ಯಾವ ಯಾವ ಸ್ತರದಾಗ ಏನೇನು ಆಗ್ಬೇಕು ಅದು ಆಗಬೇಕಂತೆ. ಜಗತ್ತಿನ ನಿಯಮ ಇರ್ತದ ನಾನು ಹೆಣ್ಣು ಹೆಂಗಸು ನನಗೆ ಈ ಪ್ರಪಂಚದ ನೀತಿ ನಿಯಮಾ ಒಂದು ಗೊತ್ತು. ಈಗ ನೀನು ಹರೇಕ ಬಂದಿ. ಜ್ಞಾನಾ ಅಧ್ಯಯನ ಅಂದಿ, ಆತು, ಆ ಭಗವಂತನ ಅನುಗ್ರಹ ಪಡೆದು ಬಂದಿ ಆತು, ನಿನ್ನ ಜೀವನ ಈಗ ಒಂದು ಘಟ್ಟಕ್ಕೆ ಬಂದು ನಿಂತದ. ಈಗ ಲಗ್ನ ಅಂತ ಒಂದು ಮಾಡ್ಕೊಪಾ ನೀ ಹಿಂಗ ಒಂಟಿ ಆಗಿರೋದು ನೋಡ್ಕೋತ ನಮಗ ಇರ್ಲಿಕ್ಕೆ ಆಗಂಗಿಲ್ಲ" ಅತ್ತಿಗೆ ಮಾತು ಕೇಳುತ್ತಾ ದಾಸರು ಒಂದೆರಡು ಗಳಿಗೆ ಏನೂ ಮಾತನಾಡಲಿಲ್ಲ. ಎದುರಿಗಿಟ್ಟುಕೊಂಡಿದ್ದ ಗ್ರಂಥದ ತೆರೆದ ಪುಟಗಳನ್ನೆ ನೋಡುತ್ತಿದ್ದರು.

"ಯಾಕಪ್ಪಾ ನಾ ಏನರೇ ತಪ್ಪು ಹೇಳಿದ್ನೇನು? "ಇಲ್ರಿ ನಿಮ್ಮ ದೃಷ್ಟಿಯೊಳಗ ಯಾವುದು ತಪ್ಪಲ್ಲ. ನೀವು ಹೇಳಿದ್ರಿ. ಪ್ರಪಂಚದ ನೀತಿ ನಿಯಮದ ಮಾತು ಹೇಳ್ತಿನಿ ಅಂತ ವೈನಿ ನೀವು ಅದೆಲ್ಲ ಇಚ್ಛಾಪಡೋದು ಸಹಜೀಕ ಅದ ಆತು, ಒಂದು ಹಂತಕ್ಕೆ ಬಂದಾ ಲಗ್ನ ಆಗ್ಬೇಕು. ಮಕ್ಕಳು ಆಗ್ಬೇಕು ಅಂತ ಆದ್ರ ಈ ಲೌಕಿಕ ಬಂಧನ ನನಗೆ ಬ್ಯಾಡ್ರಿ ವೈನಿ".

"ಹುಚ್ಚಪ್ಪ ಸಂಸಾರ ಬಂಧನ ಅಂದ್ರ ಹ್ಯಾಂಗಪಾ ಅದು ಒಂದು ದೇವರು ಹಚ್ಚಿದ ನಿಯಮ ಅಲ್ಲ? ಪುರಾಣ–ಪುಣ್ಯ ಕಥೆಯೊಳಗೆ ಕೇಳಿನಿ. ಗೃಹಸ್ಥ ಧರ್ಮ ಅನ್ನೋದು ಇರ್ತದ ಅಂತ ಈ ಗೃಹಸ್ಥ ಧರ್ಮ ದಾಟಿದ ಮ್ಯಾಲೆ ವೈರಾಗ್ಯ ವಿರಕ್ತಿ ಹುಟ್ಟಬೇಕು. ವೇಂಕಣ್ಣಾ ನಿನಗೆ ಇಂಥಾ ಸಣ್ಣ ವಯಸ್ಸೇನ್ಯಾಗ ಯಾಕ ಇಂಥಾ ವಿರಕ್ತಿ?" ವೈನಿಯ ಸಮಜೋತದ ಮಾತು ಖರೇ ಅವರ ಲೆಕ್ಕಕ್ಕೆ ಪ್ರಪಂಚದ ರೀತಿ ನೀತಿ ಇರುವುದೇ ಹಾಗೆ, ಆದ್ರ ತನಗೆ?

"ವಿರಕ್ತಿ ಅಂತ ಅಲ್ಲ ವೈನಿ ವೈರಾಗ್ಯ ವಿರಕ್ತಿ ಅಂತಿದ್ರ ನಾನು ಮನಿ, ಮಠ ಬಿಟ್ಟು ಕಾಡು ಬೆಟ್ಟ, ಅಲಿತಿದ್ದೆ, ಆದ್ರ ನಾಕು ಜನರ ನಡುವೆ ಇದ್ದು ನನ್ನ ಮುಕ್ತಿ ಮಾರ್ಗ ನಾನು ಕಾಣ್ಬೇಕು. ನನ್ನ ಜೋಡಿ ಇನ್ನು ನಾಕು ಕೈ ಸೇರಬೇಕು. ನನಗೆ ಆ ಭಗವಂತ ಕೊಟ್ಟ ತಂಬೂರಿ ಗೋಪಾಲಬುಟ್ಟಿ ಅದ. ಅದ ನನ್ನ ಸಂಸಾರ ವೈನಿ, ಈ ಹರಿದಾಸತ್ವನೇ ನನ್ನ ಜೀವನದ ಗುರಿ. ಸದಾಕಾಲ ಅವನ ಧ್ಯಾನ, ಅವನ ಸ್ಮರಣೆ ಅವನ ನೆನಪು, ಒಂದ ಸಾಕ ನನಗೆ"

"ಆದ್ರ ವೆಂಕಣ್ಣ, ಹರಿದಾಸ ಆದವ್ರು ಯಾರು ಹಂಗಾರೆ ಲಗ್ನಾನೇ ಆಗಿಲ್ಲೇನು? ಪುರಂದರ ದಾಸರು, ವಿಜಯ ದಾಸರು, ಜಗನ್ನಾಥ ದಾಸರು, ಅವರು ತಮ್ಮ ಸಂಸಾರದ ಜೋಡಿ ದಾಸತ್ವಾನೂ ಕೈಗೊಂಡು ತಮ್ಮ ಮುಕ್ತಿ ತಾವು ಕಂಡ್ರಿಲ್ಲೋ?"

"ಖರೇ ವೈನಿ, ಆದ್ರ ದಾಸತ್ವ ಕೈಗೊಳ್ಳುಕಿಂತ ಮುಂಚೆ ಅವರು ಸಂಸಾರ ಹಚ್ಕೊಂಡಿದ್ರು ಸಂಸಾರದಿಂದ ದಾಸತ್ವ ಹೊಂದಿದ್ರು ಆದ್ರ ನನಗೆ ಈ ದಾಸತ್ವ ಮೊದಲ ಬಂದು ಮಾಲಿ ಹಾಕ್ತು ವೈನಿ ಈ ವಿಷಯದಾಗೆ ನನ್ನ ಕ್ಷಮಾ ಮಾಡ್ರಿ ನನಗೆ ಇನ್ನೂ ಸಾಧನಾ ಮಾಡೋದು ಬ್ಹಾಳ ಅದ"

"ಹಂಗರ ಈ ವಂಶ ಮನೆತನ, ಕುಟುಂಬ"

"ಯಾಕ? ಈ ಮನೆತನ ವಂಶ ಬೆಳಗಿಸಲಿಕ್ಕೆ ನಿಮ್ಮ ಮಕ್ಕಳು ಇಲ್ಲೇನು? ದಾಮೋದರ ಕೇಶವ ಇದ್ದಾರಲ್ಲ ಆಂದ್ಹಂಗ ವೈನಿ ಹೇಳೋದು ಮರ್ತಿದ್ದೆ ನಾಳೆ ನಾಳೆ ಮುಂಜಾನೆ ನಾನು

ತುಳಸೀಗೆರೆಗೆ ಹೋಗ್ಬೇಕು. ಒಂದು ನಾಕದಿವಸ ಹನುಮಪ್ಪನ ಸಾನಿಧ್ಯಾದಾಗ ಇರಬೇಕಂತ ಅನಿಸೇದ" ಎಂದರು.

"ಇದ್ದಕ್ಕಿದ್ಹಂಗೆ ತುಳಸೀಗೇರೆಗೆ"

"ಯಾಕೋ ಒಂದು ವಾರದಿಂದ ತಿರುಪತಿ ವೆಂಕಪ್ಪನ ದರ್ಶನ ಮಾಡ್ಬೇಂಕಂತ ಮನಸು ಬ್ಹಾಳ ಚಡಪಡಸ್ತಿತ್ತು ವೈನಿ ಹಗಲು ರಾತ್ರಿ ಅದೇ ಹಂಬಲ ಆಗ್ತಿತ್ತು. ಇನ್ನಾವಾಗ ದರ್ಶನ ಕೊಡ್ತಿಯಪ್ಪಾ ಅಂತ ಆಲಪರದು ಕೇಳಿದೆ ಶ್ರೀ ಹರಿ ಕನಸ್ಯಾಗೆ ಬಂದು "ವೆಂಕಣ್ಣ ಯಾಕ ಇಂಥಾ ಹಂಬಲ ನಾ ದೂರ ಇದ್ರೂ ನಿನ್ನ ಹತ್ರ ಇದ್ದಿನಪ್ಪಾ ಆದ್ರೂ ನಿನಗನ್ನೂ ದರ್ಶನದ ಹಂಬಲ ಆಗ್ತದ ಅಲ್ಲ? ಆತು ನಿನಗೆ ನನ್ನ ದರ್ಶನ ಮಾಡ್ಬೇಕು ಅನಿಸಿದಾಗಲೆಲ್ಲಾ ತುಳಸೀಗೇರಿಗೆ ಬಾ ಹನುಮಪ್ಪನ ಹತ್ರ ನಾ ಇದ್ದೀನಿ. ಆಂದಂಗ್ಹಾತು ದೈವ ಚಿತ್ತ ಅಂವಾ ಅಪ್ಪಣೆ ಕೊಟ್ಟಾನ, ನಾ ಹೋಗಿ ಬರ್ತಿನ್ರೀ" ಎಂದು ಮುಂದಿನ ಗ್ರಂಥಗಳನ್ನು ಮುಚ್ಚಿಟ್ಟು ಕಣ್ಣಿಗೊತ್ತುಕೊಂಡು ಎದ್ದು ಹೋಗುತ್ತಿದ್ದ ದಾಸರನ್ನು ನೋಡುತ್ತಾ ತುಂಬಿದ ಕಣ್ಣೀರನ್ನು ಸೆರಗಿನಿಂದ ಒತ್ತಿಕೊಂಡಳು ಕಾವೇರಿ.

"ಪಾಪಿ ನಾನು ಎಂಥಾ ಪಾಪಿ" ನೀ ಹುಟ್ಟಲಿಲ್ಲ ಅಂತ ಯಾರು ಅಳ್ತಿದ್ರು ಮುದಿಗಾಲಕ್ಕೆ ಯಾಕೆ ಬೇಕಾಗಿತ್ತು ನಿಮ್ಮ ಅಪ್ಪ ಅವ್ವಂಗ, ನಿನ್ನಂಥ ಮಗ ಹಡೆದು ನಮ್ಮ ಪಾಲಿಗೆ ಮೂಲ ಮಾಡಿಟ್ಟು ಹೋದ್ರು ಅಂತ ಅಂತಿದ್ನಲ್ಲ-? ದೇವರೇ ಈ ಪಾಪಕ್ಕೆ ಯಾವ ನರಕ ಕಾದದ ನನಗೆ" ಎಂದು ಕಣ್ಣೊರಿಸಿಕೊಂಡು ಒಳಹೋದಳು.

ಮರುದಿನವೇ ಇರಬೇಕು ಕಾಲು ನಡಿಗೆಯಿಂದ ದಾಸರು ತುಳಸಿಗೇರಿಗೆ ಹೋಗಿ ಹನುಮಪ್ಪನ ಮುಂದೆ ನಿಂತಾಗ ಅವರ ಕಣ್ಣಿನಿಂದ ಆನಂದದ ಕಣ್ಣೀರೋ? ಧನ್ಯತೆಯ ಕಣ್ಣೀರೋ? ಭಕ್ತಿ ಪರವಶತೆಯ ಕಣ್ಣೀರೋ? ಅಮೃತ ಜಲದಂತೆ ಸುರಿಯುತ್ತಿತ್ತು. ಎದುರಿಗಿದ್ದ ಸುಂದರ ಮೂರ್ತಿ ತುಳಸಿಗೇರಿಯ ಹನುಮಪ್ಪನದು.

ಎಂಥಹ ದಾಸ ಭಾವ ಸೇವಕನೆಂದರೆ ನೀನೆ ಹನುಮ ಹರಿಸೇವೆ ಎಂದರೆ ನಿನ್ನದೆ ಯಾವ ಯಾವ ರೂಪದಿಂದ ಎಲ್ಲೆಲ್ಲಿ ಕುಳಿತೀ ಭಕ್ತರ ಉದ್ಧಾರ ಮಾಡುತ್ತಿ ಸ್ವಾಮಿ. ಸ್ವತಃ ಶ್ರೀ ಹರಿಯೇ ನಿನ್ನಲ್ಲಿದ್ದೆನೆಂದು ಹೇಳಿದನಲ್ಲ, ಇದಕ್ಕಿಂತ ಪುಣ್ಯಾ ಬೇಕೆ? ವೈ ಕುಂಠಕ್ಕೆ ಕರೆದ ನಿನ್ನನ್ನು ಆದರೆ ನೀನು, ಉಹುಂ, ನಿನ್ನ ನಾಮಸ್ಮರಣೆಯೇ ಸಾಕು ಅದಕ್ಕಿಂತ ಬೇರೆ, ವೈ ಕುಂಠ ಬೇಡವೆಂದು ಈ ಭೂಲೋಕದಲ್ಲಿಯೇ ನೆಲೆ ನಿಂತು ನಮ್ಮಂಥ ಪಾಮರರರನ್ನು ಉದ್ದಾರ ಮಾಡುತ್ತಿದ್ದೀಯಲ್ಲ ತಂದೆ" ಎಂದು ದಾಸರು ಅನನ್ಯ ಭಕ್ತಿಯಿಂದ ಕಣ್ಣೀರು ತುಂಬಿ ನೋಡುತ್ತಲೇ ಇದ್ದರು. ಈಗ ದಾಸರಿಗೆ ಸುತ್ತಲಿನ ಪರಿವೆ ಇರಲಿಲ್ಲ. ಸುತ್ತಲೂ ನಿಂತ ಜನಗಳ ಬಗ್ಗೆ ಅರಿವಿಲ್ಲ. ಮತ್ತೆ ಸ್ವತಃ ತಿರುಪತಿಯ ತನ್ನಪ್ಪನ ಮುಂದೆ ನಿಂತಂತೆ ಅನುಭವವಾಗುತ್ತಿದೆ. ಅದೇ ಭಾವೋದ್ವೇಗ; ಅದೇ ಭಕ್ತಿಯ ತನ್ಮಯತೆ ತನ್ನನ್ನು ಹನುಮಪ್ಪನನ್ನು ಬಿಟ್ಟು ಪ್ರಪಂಚದಲ್ಲಿ ಬೇರೆ ಏನೂ ಇಲ್ಲ ಎನ್ನುವ ಅನುಭವ ತಂದೆಯಂತೆ ಅವನು ಮಗುವಿನಂತೆ ತಾನು ಎನ್ನುವ ಮನಸ್ಸಿನ ಆಳದಲ್ಲಿ ತೇಲಿ ಹೋಗುತ್ತಿದ್ದಾರೆ ಅವರು, ಖರೇ ತನ್ನ ಆ ದಯಾಮಯೀ ಕರುಣಾಳು ಹೇಳಿದ್ದು ಖರೇ, ಇದ್ದಲ್ಲಿಯೇ ತನ್ನನ್ನು ಕರೆದು ಮತ್ತೆ



ತನ್ನ ಸಾನಿಧ್ಯ ಕಲ್ಪಿಸಿದ. ತನ್ನ ಭಕ್ತರಲ್ಲೆ ತಾನಿದ್ದೇನೆ ಎಂಬ ಅಖಂಡ ನಂಬಿಕೆ. ಭಕ್ತರಲ್ಲಿ ಹುಟ್ಟುವಂತೆ ಮಾಡಿದ ಇದೇ ವಿಚಾರಗಳು. ದಾಸರಲ್ಲಿ ಮನಸ್ಸಿಗೆ ತೃಪ್ತಿಯನ್ನು ಸಂತೋಷವನ್ನು ಮೇಳೈಸಿದಂತಿತ್ತು. ಅವನ ಸಾನಿಧ್ಯದಲ್ಲಿ ಭಗವಂತನನ್ನು ಕಂಡೆನೆಂಬ ತೃಪ್ತಿಯಿದ್ದರೂ ಮನಸ್ಸಿನ ದಾಹ ತೀರಲಿಲ್ಲ.

ದಾಸರು ಆಂಜನೇಯನ ಮುಂದೆ ನಿಂತು ಅನನ್ಯ ಭಕ್ತಿಯಿಂದ ಸ್ತುತಿಸುತ್ತಿದ್ದರು.

"ಹನುಮ ನಮ್ಮ ತಾಯಿ ತಂದೆ
ಭೀಮ ನಮ್ಮ ಬಂಧು ಬಳಗ
ಆನಂದ ತೀರ್ಥರೆ ನಮ್ಮ ಗತಿಗೋತ್ರರು"

ಖರೇ ಆಂಜನೇಯ ನಿನ್ನನ್ನು, ನಮ್ಮಂಥವರಿಗೆ ಯಾರಿದ್ದಾರೆ? ಈಗ ನನ್ನ ಆ ಭಗವಂತನನ್ನು ಕಾಣುತ್ತಿದ್ದುದ್ದು ನಿನ್ನಲ್ಲೆ ಅಲ್ಲವೇ?

"ತಾಯಿ ತಂದೆ ಹಸುಳೆಗೆ
ಸಾಯವಿತ್ತು ಸಾಕುವಂತೆ
ಆಯಾಸವಿಲ್ಲದೆ ಸಂಜೀವನಾ ತಂದು
ಘಾಯ ಗೊಂಡ ಕಪಿಗಳನ್ನು ಪಾಯದಿಂದ ಪೊರೆದ
"ಶ್ರೀ ರಘು ರಾಮನಂಘ್ರೀಗಳೇ ಸಾಕ್ಷಿ ತ್ರೇತಾಯುಗದಿ" ಎಂಥಹ ಮಹಿಮೆ ಅವನದು–
"ಗತೀಗೋತ್ರ ಸಾಧು। ತತಿಗಳಿಗೆ
ಸುಜ್ಞಾನವಿತ್ತು ಮತಿಗೆಡಿಸಿದ
ಇಪ್ಪತ್ತೊಂದು ಕುಭಾಷ್ಯಗಳ ಗತಿಗೆಡಿಸಿ
ಸದ್ವೈಷ್ಣವರಿಗೆ ಸದ್ಗತಿಯ ತೋರಿದ
ಪ್ರಸನ್ವೆಂಕಟ ಪ್ರತಿವ್ಯಾಸನಂಘ್ರಿಗಳೇ ಸಾಕ್ಷಿ
ಕಲಿಯುಗದಿ"

ಅನನ್ಯ ಭಕ್ತಿಯಿಂದ ಹಾಡುತ್ತ ಹಾಡುತ್ತಾ ಮೈ ಮರೆತು ನಿಂತಿದ್ದರು. ಧ್ವನಿಗೆ ತಕ್ಕಂತೆ ತಂಬೂರಿಯ ಮಿಡಿತ ಕೈಯಲ್ಲಿ ತಾಳ ಗೆಜ್ಜೆ ಕುಣಿತ.

ಅರ್ಧ ನಿಮಲೀತ ನೇತ್ರವಾಗಿ, ಭಕ್ತಿಯಿಂದ ಕೇಳುತ್ತಿದ್ದಾನೇನೋ ಆ ಆಂಜನೇಯ ಅಷ್ಟೊಂದು ಭಕ್ತಿಯ ರಸಹೊನಲಾಗಿ ಹರಿದಿತ್ತು. ತುಳಸಿಗೇರಿಯಲ್ಲಿ ಒಂದು ವಾರವಿದ್ದು ಮನಸ್ಸು ತುಂಬಿದಂತಾಗಿ ದಾಸರು ಬಾಗಲಕೋಟೆಗೆ ಬಂದಿದ್ದರು.

ಒಂದರ ಮೇಲೊಂದು ಉರುಳಿದ ದಿನಗಳಲ್ಲಿ ದಾಸರ ಕೀರ್ತಿ ಕೀರ್ತನೆಗಳು ಎಲ್ಲಾ ಕಡೆ ಹಬ್ಬಿ ನಾನಾ ಕಡೆಯಿಂದ ಅವರನ್ನು ಕಾಣಲು ಜನರು ಬರುತ್ತಿದ್ದರು.

"ದಾಸರೇ ಅಡ್ಡಬಿದ್ದೆ ದೇವಾಂಶ ಸಂಭೂತರು ನೀವು ನಮ್ಮ ಜನ್ಮ ಸಾರ್ಥಕ ಆತು" ಎನ್ನುತ್ತಿದ್ದರು.

“ಹರೇ ಶ್ರೀನಿವಾಸ ಹರೇ ಶ್ರೀನಿವಾಸ” ಎಂದು ಬಂದವರ ತಲೆ ಮೇಲೆ ಕೈ ಇಡುತ್ತಿದ್ದರು. ದಾಸರು ದೈವ ಲೀಲೆ ಎಂಬಂತೆ ದಾಸರು ಆಗಾಗ ತುಳಸಿಗೇರಿಗೆ ಬಂದಾಗಲೆಲ್ಲಾ ಊರಲ್ಲಿ ಶುಭಶಕುನಗಳಾಗುತ್ತಿದ್ದವು. ಬರಬಿದ್ದ ಭೂಮಿಗೆ ಮಳೆ ಹನಿದು ಭೂಮಿಯಲ್ಲಿ ಹಸಿರು ಚಿಗುರೊಡೆಯುತ್ತಿತ್ತು. ಫಸಲು ತುಂಬಿ ಒಡೆದು ಕಾಳು ರಾಶಿ ರಾಶಿ ಯಾಗಿ ಮನೆಗಳಿಗೆ ಬಂದು ಬೀಳುತ್ತಿತ್ತು. ಯಾರ ಮನೆಯಲ್ಲಿ ಕಾಲಿಡುತ್ತಾರೋ ಅವರ ಮನೆಯಲ್ಲಿ ಇದ್ದ ದುಷ್ಕಂಳಕ ಹರಿದು ಮನೆ ನಂದನವನ ಆಗುತ್ತಿತ್ತು. ಹೀಗಾಗಿ ಜನ ದಾಸರು ಊರಿಗೆ ಬಂದರೆ ಊರ ತಲೆಬಾಗಿಲಿಗೆ ಅವರನ್ನು ಎದುರುಗೊಂಡು ಹರುಷದಿಂದ ಕರೆತಂದು

“ದಾಸರೆ ನೀವು ಬಂದ್ರಿ ಊರಿನ ಸೌಭಾಗ್ಯ ಬಂದ್ಹಾಂಗಾತು ಸ್ವಾಮಿ ನೀವು ಮತ್ತೆ ಹೋಗೊದು ಬ್ಯಾಡ್ರಿ ಇಲ್ಲೆ ಇರ್ರಿ” ಎನ್ನುತ್ತಿದ್ದರು.

“ಹುಚ್ಚಪ್ಪಗೋಳ್ರಾ ನಂದೇನದ ಬರೇ ಅವನ ಸೇವಕ ನಾನು ಎಲ್ಲಾ ಅವನ ಕರುಣಾ” ಎನ್ನುತ್ತಿದ್ದರು ಹನುಮಪ್ಪನ ಮುಂದೆ ಅಡ್ಡ ಬಿದ್ದು”

“ಏನಪ್ಪಾ ನಿನ್ನ ಮಹಿಮಾ ಇದು ಇದಕ್ಕೆಲ್ಲಾ ನನ್ನ ಕಾರಣ ಯಾಕ ಮಾಡ್ತೀ? ತುಳಸೀಗೇರಿ ಊರಾಗೆ ನೀ ನಿಂತಿ ಅಂತ ಊರು ಸಮೃದ್ಧಿ ಆಗೇದ. ಈ ಊರನ್ನು, ಜನರನ್ನು, ಕಾಯಾಂವಾ ನೀನ” ಎನ್ನುತ್ತಿದ್ದರು.

ಹೀಗಿರುವಾಗ ಒಂದು ಮಧ್ಯಾಹ್ನ ಇರಬಹುದು. ದಾಸರು ಎಂದಿನಂತೆ ತುಳಸಿಗೇರಿಯಲ್ಲಿ ಹನುಮಪ್ಪನ ಮುಂದೆ ತಂಬೂರಿ ಮೀಟುತ್ತಾ ಹಾಡುತ್ತಿದ್ದರು.

“ಶರಣು ಸಕಲ ಪ್ರಾಣನಾಥ ।
ಸರಸಿಜ ಭವಪದ ವಿಭೋಕ್ತಾ
ಮೂರಾವತಾರಿ ಮುಖ್ಯ ಪ್ರಾಣಾ ।
ಹರಿ ಪರಾಯಣಾತೇ ನಮೋ”

ತನ್ನ ಭಕ್ತಿನ ವಾಣಿಯನ್ನು ಎಷ್ಟೋ ತನ್ಮಯದಿಂದ ಕೇಳುತ್ತಿದ್ದಾನೆ ಹನುಮಪ್ಪ ಅರ್ಧ ನಿಮಲಿತನೇತ್ರನಾಗಿ ತನ್ನ ಸ್ವಾಮಿಯ ಧ್ಯಾನದಲ್ಲಿ ನಿಂತಂತೆ

ಗುಡಿಯ ಪೌಳಿಯಲ್ಲಿ ಸುತ್ತಲಿನ ಪರಿಸರದಲ್ಲಿ ಸೂಸಿ ಬರುವ ಗಾಳಿಕೂಡ ಹರಿ ಹರಿ ಎನ್ನುವಂತೆ ದವೆಸುತ್ತಿವೆ ಏನೋ ಎನ್ನುವಂತೆ ದಾಸರು ಹಾಡುತ್ತ ಹಾಡುತ್ತಾ ಮೈಮರೆತಿದ್ದರು.

ಹಾಡು ಮುಗಿದರೂ ತಂಬೂರಿನಾದ ಕೂಡ ಇನ್ನು ಝೇಂಕಾರಿಸುತ್ತಲೇ ಇದೆ. ಭಕ್ತಿ ಭಾವದ ಬಂಧ ಎಲ್ಲರ ಎದೆಯಲ್ಲಿ ಮಿಡಿಯುತ್ತಿದೆಯೋ ಏನೋ ಎನ್ನುವಂತೆ ಹಾಡು ಮುಗಿದು ದಾಸರು ಕಣ್ತೇಗೆದಾಗ ಅವರೆದುರು ನಾಕೈದು ಜನ ಕೈ ಮುಗಿದು ನಿಂತಿದ್ದವರು ಬಂದು ದಾಸರೇ ಮುಂದೆ ಬಂದು ನಮಸ್ಕಾರ ಮಾಡಿದರು.

“ಏಳ್ರಪ್ಪಾ ದೇವರು ನಿಮಗೆ ಒಳ್ಳೇದು ಮಾಡ್ಲಿ ಎಲ್ಲಿಂದ ಬಂದೀರಿ?” ಅಷ್ಟರಲ್ಲಿ ಒಬ್ಬ ದೊಡ್ಡ ಮನುಷ್ಯರು ಬಂದು ದಾಸರ ಪಾದಕ್ಕೆ ಬಾಗಿ ನಮಸ್ಕಾರ ಮಾಡಿ ಕೈ ಮುಗಿದು ನಿಂತರು.



“ಸ್ವಾಮಿ ನಾನು ಎಂಡಿಗೇರಿಯವರು ಇಮ್ಮಡಿ ಹನುಮನಾಯ್ಕ ಅಂತ ಸ್ವಾಮಿ ತಮ್ಮ ಮಹಿಮಾ ಪವಾಡಗಳು ತಾವು ದೇವರಲ್ಲಿ ಇಟ್ಟಿರುವ ಅನನ್ಯ ಭಕ್ತಿ ಕೇಳಿ ಬಲ್ಲೆವು ದಾಸರೇ ಸ್ವತಃ ಆ ಭಗವಂತನೇ ತಮಗೆ ಪ್ರತ್ಯಕ್ಷವಾಗಿ ಅಂಕಿತ ಕೊಟ್ಟು ಜ್ಞಾನದೃಷ್ಟಿಯನ್ನು ಕೊಟ್ಟನೆಂದು ಕೇಳಿ ಬಲ್ಲೇವು. ಆದರೆ ಈಗ ನಿಮ್ಮನ್ನು ನೊಡಿದ್ರೆ ಆ ಮಾತು ನೂರಕ್ಕ ನೂರು ಸತ್ಯನ ಆದ ಸ್ವಾಮಿ ಇಂಥಾವ್ರು ನಮ್ಮ ಊರ ಸುತ್ತ ಮುತ್ತ ಇರೋದೆ ನಮ್ಮ ಪುಣ್ಯಾ”

“ಇದು ನನ್ನ ಪುಣ್ಯಾದ ಮಾತಲ್ರಪ್ಪಾ ನಿಮಗೆ ಧರ್ಮದಾಗ ಇದ್ದ ಶ್ರದ್ಧಾ, ದೇವರು ನಿಮ್ಮ ಮನಸ್ಸನ್ನು ಹಿಂಗ ಧರ್ಮದ ದಾರಿಯೊಳಗೆ ನಡೆಸಲಿ”

“ದಾಸರ ಅದು ಸುದೈವ ನಿಮ್ಮ ಅನುಗ್ರಹದಿಂದ ಆಗ್ಬೇಕಲ್ಲ, ಸ್ವಾಮಿ ನಮ್ಮದೊಂದು ವಿನಂತಿ ಅದ”

“ಹೇಳ್ರಪ್ಪಾ- ಏನು”?

“ತಾವು ದೊಡ್ಡವರು ಮಹಾಮಹಿಮರು ಇಂಥವರ ಸೇವಾದ ಯೋಗ್ಯತಾ ನಮಗೆ ಬರ್ಬೇಕು. ನಾವು ಉದ್ಧಾರ ಆಗ್ಬೇಕಂದ್ರ ದೇವರಿಗೆ ನಮ್ಮಿಂದ ಸೇವಾ ಆಗ್ಬೇಕು ಸ್ವಾಮಿ ಈ ತುಳಸಿಗೆರಿಯೊಳಗ ನನ್ನ ಇಷ್ಟು ಹೊಲ ಅವ ನಿಮ್ಮಂಥಾ ಭಗವದ್ಭಕ್ತರು ಇದನ್ನು ಸ್ವೀಕರಿಸಿ ನನ್ನ ಉದ್ಧಾರ ಮಾಡ್ರಿ” ಎಂದು ಅವರ ಮುಂದೆ ಹೊಲದ ಕಾಗದದ ಪತ್ರಗಳನ್ನಿಟ್ಟು ಉದ್ದಕ್ಕೂ ನಮಸ್ಕಾರ ಮಾಡಿದರು.

“ಏನಿದು ದೇಸಾಯರೇ ನಾವು ದಾಸ ವೃತ್ತಿಯವರು, ವಿರಕ್ತರು ನಮಗೆ ಏನಿದ್ರೂ ಭಗವಂತನ ದಿವ್ಯಪ್ರಸಾದದ ಸ್ಥಾನವೇ ಸಾಕು ದಯವಿಟ್ಟು ಈ ದಾನ ಪತ್ರವನ್ನು” ದಾಸರು ಕೈಯಿಂದಲೂ ಕೂಡ ಅದನ್ನು ಮುಟ್ಟದೇ ಹೇಳುತ್ತಿದ್ದರೇ ದೇಸಾಯರು ಮುಂದೆ ಬಂದು ಅವರ ಕಾಲುಗಳನ್ನು ಹಿಡಿದು

“ಸ್ವಾಮಿ ಇದು ನನ್ನ ಪುಣ್ಯಾ, ಸಂಪಾದನೆಗೆ ಗಳಿಸಿದ್ದರಲ್ಲಿ ಸದ್ವಿನಿಯೋಗಕ್ಕೆ ಸ್ವಲ್ಪವಾದರೂ ಅರ್ಪಿಸಿದರೇ ಅದೇ ಧರ್ಮಕಾರ್ಯ ಅಲ್ಲ? ಬ್ಯಾಡಿ ಅನ್ಬ್ಯಾಡ್ರಿ ಇದನ್ನು ಸ್ವೀಕಾರ ಮಾಡಿ ನನ್ನ ಮನಿತನ್ನು ಮುಂದಿನ ಪೀಳಿಗೆಗೆ ಸದ್ಬುದ್ಧಿ ಆಯಸ್ಸು ಆರೋಗ್ಯ ಕೊಟ್ಟು ಧರ್ಮ ಕಾರ್ಯ ಮಾಡ್ಲಿಕ್ಕೆ ಶಕ್ತಿನೂ ಕೊಟ್ಟು ಆಶೀರ್ವಾದಾ ಮಾಡ್ರಿ” ಎಂದು ಎಂಡಿಗೇರಿ ದೇಸಾಯರು ತುಳಸೀಗೇರಿ ಹೊಲದ ಕಾಗದ ಪತ್ರಗಳನ್ನು ದಾಸರ ಮುಂದಿಟ್ಟು ಮತ್ತೊಮ್ಮೆ ಸ್ರಾಷ್ಟಾಂಗವೆರಗಿ ಅವರ ಮುಂದಿಂದ ಹೊರಟು ಹೋದರು.

“ಭಗವಂತ ಏನು ನಿನ್ನ ಪ್ರೇರಣೆ, ಆಂಜನೇಯ ಏನು ನಿನ್ನ ಅಂತರಂಗದ ಶೋಧನೆ” ಎಂದು ಆ ಕಾಗದಗಳನ್ನು ಎತ್ತಿಕೊಂಡು “ತುಳಸಿಗಿರೀಶ ನಿನ್ನ ಸೇವೆಗೆ ಕೂಡ ಇದು ಮುಡಿಪಾಗಿರಲಿ” ಎಂದು ಕಣ್ಣಿಗೊತ್ತಿ ಕೊಂಡರು.

ತುಳಸಿಗೇರಿಯ ಹನುಮಪ್ಪನಷ್ಟೇ ಮಹಿಮೆ ದಾಸರ ಬಗ್ಗೆಯೋ ಕೂಡ ಅಲ್ಲಲ್ಲಿ ಹರಡುತ್ತಿತ್ತು. ಓಣಿಯ ಜನ ಸುತ್ತ ಮುತ್ತ ಊರಿನ ಜನ ಕಷ್ಟಗಳನ್ನು ರೋಗ ರುಜಿನೆಗಳನ್ನು ಕಟ್ಟಿಕೊಂಡೇ ಬರುತ್ತಿದ್ದರು.

"ಸ್ವಾಮಿ ಇಂಥಾ ಜಂಜಾಟ ಬಂದಾಗ ಬದುಕಿನ ಸಂಕಷ್ಟದಾಗ ಜೀವನ ಘೋರ ಅನಸ್ತದ ದಾಸರ– ಪರಿಹಾರ ಹೇಳ್ರಿ ನಿಮ್ಮಿಂದ ನಮ್ಮ ಕಷ್ಟ ನೀಗಬೇಕು" ಎನ್ನುತ್ತಿದ್ದರು.

"ನಾ ಏನು ಮಾಡೇನ್ರಪ್ಪಾ ಎಲ್ಲ ಭಗವಂತನ ಇಚ್ಛಾ ಅವನ ಕರುಣಾ, ಅವನ ಅನುಗ್ರಹ ನಮ್ಮೆಲ್ಲರ ಮ್ಯಾಲೆ ಇದ್ರ ಎಲ್ಲ ಭವ ಪರಿಹಾರ ಆಗ್ತಾದ ಈಕಾ ಇದು ತುಳಸಿಗೇರಿಯಪ್ಪನ ಅಂಗಾರ ಇದನ್ನು ಹಚ್ಚೋಗೋ ಬರ್ರಿಲ್ಲೆ" ಎನ್ನುತ್ತಾ ಬಂದವರಿಗೆ ಅಂಗಾರ ಹಚ್ಚಿ ತಲೆ ಮೇಲೆ ಕೈಯಾಡಿಸಿ ಹೋಗ್ರಿನ್ನು ಎಲ್ಲ ಆರಾಮ ಆಗ್ತೆದ ತುಳಸಿಗೆರೆಯಪ್ಪ ಕಾಯ್ತಾನಾ ಎಂದು ಬೆನ್ನ ಮೇಲೆ ಕೈಯಾಡಿಸಿ ಕಳಿಸಿದರು. ಕಷ್ಟವೆಂದು ಜಡ್ಡು ಜಾಪತ್ರಿ ಎಂದು ಬಂದವರು ನಗು ನಗುತ್ತಾ ಮನೆಗೆ ಹೋಗುವದಿತ್ತು. ರಾಘಣ್ಣ ಮಾತ್ರ ಭ್ರಮಾಧೀನನಂತೆ ಇದೆಲ್ಲ ನೋಡುತ್ತಾ ಕುಳಿತೇ ಇರುವುದಿತ್ತು ನಮ್ಮ ವೆಂಕಣ್ಣನಲ್ಲಿ ಇಂಥ ಶಕ್ತಿ ಇದೆಯೇ ಎನ್ನುವುದಲ್ಲ ಇಂತಹ ಶಕ್ತಿಯ ರೂಪ ನಮ್ಮ ಮನೆ ಅಂಗಳದಲ್ಲಿ ಬೆಳಕು ಬೀರುತ್ತಾ ನಿಂತಿದೆಯಲ್ಲ ಎನ್ನುವುದು.

"ರಾಘಣ್ಣ ನೋಡಿದೇನಪ್ಪಾ ನಮ್ಮ ವೆಂಕಣ್ಣನ ಮಹಿಮಾನು ಇಂವಾ ಸಾಮಾನ್ಯ ಮನುಷ್ಯಾ ಅಲ್ಲ ಬಿಡು ನಮ್ಮ ಕಣ್ಣಾ ಮುಂದೆ ಹುಟ್ಟಿ ಆಡಿ ಬೆಳದಾಂವಾ" ಎನ್ನುತ್ತಿದ್ದಾರೆ ಅಲ್ಲಿ ಕೂತ ಹಿರಿಯರೊಬ್ಬರು.

"ಖರೇ ಅಂಥಾ ಮಹಾತ್ಮ ಹುಟ್ಟಿ ಬರಲಿಕ್ಕೆ ನಮ್ಮ ಈ ಕಿಲ್ಲೆ ಓಣಿ ಈ ನೆಲ ಎಷ್ಟು ಪುಣ್ಯ ಮಾಡೇದಲ್ಲಾ ಒಬ್ಬೊಬ್ಬರದು ಒಂದೊಂದು ಮಾತು ಹೃದಯಕ್ಕೆ ತಂಪೆರೆಯುವಂತಿದೆ. ಎಲ್ಲರದು ಒಂದೇ ಮಾತು

ಬಾಗಲಕೋಟೆಯ ಶ್ರೀ ಪ್ರಸನ್ನವೆಂಕಟ ದಾಸರಂತೆ, ತಿರುಪತಿ ವೆಂಕಪ್ಪನಿಂದ ಅಂಕಿತ ಪಡೆದವರಂತೆ ಮಹಾನುಭಾವರು ಅವರು ಅವರ ಕೀರ್ತನೆಗಳಲ್ಲಿ ಹರಿಯನ್ನು ಹೃದಯ ತುಂಬಿ ಕೊಂಡಾಡಿದವರು. ಅಲ್ಲದೆ ಅವರಿಂದ ಹಲವು ಪವಾಡಗಳು ನಡೆದಿವೆಯಂತೆ ಹೀಗೆ ದಾಸರ ಮಹಾ ಮಹಿಮೆಯನ್ನು ಕೇಳಿ ಸುತ್ತಲಿನ ಊರಿಂದ ದೊಡ್ಡ ದೊಡ್ಡ ದೇಸಾಯರು ಜಮೀನ್ದಾರರು ಶ್ರೀಮಂತರು ಬಂದು ದಾಸರ ಕಾಲಿಗೆರಗಿ

"ಸ್ವಾಮಿ ನಮ್ಮ ಉದ್ದಾರ ನಿಮ್ಮಿಂದಲೇ ಆಗ್ಬೇಕು. ಶ್ರೀ ಹರಿ ನಮಗೆ ಕೊಟ್ಟಿದ್ದನ್ನ ನಾವು ನಿಮ್ಮ ಚರಣಕ್ಕ ಹಾಕಿ ಉದ್ಧಾರ ಆಗ್ತೀವಿ" ಎಂದು ಮನೆ ಹೊಲಗಳ ದಾನಪತ್ರಗಳನ್ನು ಬರೆದುಕೊಡುತ್ತಿದ್ದರು.

ಆದರೆ ಬದುಕಿನಿಂದ ಏನನ್ನೂ ಅಪೇಕ್ಷಿಸಿದವರಲ್ಲ ದಾಸರು ಅವರಿಗೆ ಬೇಕಾದದ್ದು ಹರಿ ಚಿಂತನೆಯೊಂದೆ ಅದು ಅನುಗಾಲವೂ ತನ್ನ ಜೊತೆಯಿರಬೇಕು. ಭಗವಂತನ ಕೃಪೆ ತಮಗಾದಂತೆ ಈ ಜನಕ್ಕೂ ಆಗಬೇಕು ಎಂದು ಬಯಸಿದ ಪುಣ್ಯ ಜೀವಿ ಅವರು

" ಚಂಚಲಿಸದೆ ನೀನು ಚತುರನಾಗು
ವಂಚಿಸದೆ ಸಕಲನೊಪ್ಪಿಸುಹರಿಗೆ
ಆರು ನಿನ್ನವರೆಂಬಿ ಅವರಗಲಿದರು ಕಡೆಗೆ
ಭೂರಿ ಸಂಚಿತ ಸಂಪದೆರವಾಯಿತು ॥



ಜಾರುತಿವೆ ಕ್ಷಣಲವಗಳೀಗಾಗ ತಿಳಿಯದು
ನಾರಸಿಂಹನ ನಂಬು ನಿಷ್ಠೆಯಲಿ ಮನವೆ ॥೧॥"

ಮನಸ್ಸನ್ನೇ, ತಮ್ಮ ಬದುಕಿನ ಅನಂತ ಕ್ಷಣಗಳನ್ನೇ, ಹರಿಗೆ ಕೊಟ್ಟ ಅವರಿಗೆ ಸಮಾಜದಿಂದ ಏನು ಬೇಕಿತ್ತು? ಆದರೆ ಸಮಾಜದ ಜನರ ಉದ್ಧಾರ ತಮ್ಮ ಉದ್ಧಾರ ಕೂಡ ಎಂಬುದನ್ನು ಅವರು ಮನನ ಮಾಡಿ ಕೊಂಡಿದ್ದರು.

ತಮ್ಮ ಮುಂಜಾನೆಯ ದಿನದ ಆಹ್ನಿಕಗಳನ್ನು ಮುಗಿಸಿ ದೇವರ ಪೂಜೆ ಮಾಡುವಾಗ ಭಗವಂತನ ಮುಂದೇ ಹಂಬಲಿಸಿ ಮಗುವಿನಂತೆ ಕೇಳುತ್ತಿದ್ದರು. ಬಾಲಗೋಪಾಲ ನರ್ತನಗೈದಂತೆ ಅವರ ಭಾವ ತುಂಬಿ ತಾಯಿಯಂತೆ ಅನನ್ಯ ಭಾವದಿಂದ ಕರೆಯುತ್ತಿದ್ದರು, ಪೂಜಿಸುತ್ತಿದ್ದ ಮೂರ್ತಿಗಳನ್ನು ಅಂಗೈಯಲ್ಲಿಟ್ಟು ಕೊಂಡು ಗಳಿಗೆಗಳ ಕಾಲ ಕಣ್ಮುಚ್ಚಿ ಕೊಂಡು ಅಂತರಾಳಕ್ಕಿಳಿದು ಕಾಣುತ್ತಿದ್ದ ಪರಮಾತ್ಮನನ್ನು ಆ ಮೂರ್ತಿಗಳಲ್ಲಿ ಆವಾಹನೆ ಮಾಡಿ ಕಣ್ಣು ತೆಗೆದರೆ ಕೈಮೇಲಿದ್ದ ವಿಗ್ರಹಗಳು ಭಗವಂತನ ಮೂಲ ರೂಪಗಳಂತೆ ಕಾಣುತ್ತಿದ್ದವು ಭಾವ ತುಂಬಿ ಹೊರ ಸೂಸುತ್ತಿದ್ದವು ಪದಗಳು

"ಸುಳಿದನ್ನಾರೆ ಈಗ ಸುಳಿದನ್ನಾರೆ
ಕೆಳದಿ ಎನ್ನುಪ್ಪುರಿಗೆಯ ಮುಂದೆ
ಹೊಳೆವ ಹೊಂಬಕ್ಕಿ ಮ್ಯಾಲೆ
ಥಳ ಥಳಪ ಮಿಂಚಿನಂತೆ"

ಪೂಜಿಸುವ ಕೈಗಳಲ್ಲಿ ಹರಿಯನ್ನಪ್ಪಿದ ಮಧುರ ಅನುಭಾವ ಕಣ್ಣಿಂದ ಆನಂದ ಭಾಷ್ಪಗಳು.

ಮುಂದೆ ನಿಂತು ಇವರು ಪೂಜಿಸುವ ವಿಧಾನವನ್ನು ನೋಡುತ್ತಿದ್ದ ಅವರ ಅತ್ತಿಗೆಯ ಕಣ್ಣಲ್ಲೂ ನೀರು

"ಭಗವಂತಾ ಈ ಮನಿ ಈ ಬಾಗಿಲು ಈ ಚೌಕಟ್ಟು ನೆಲ ಅಂಗಳ ಊರು ಉದ್ದಾರವಾಯ್ತು ತಂದೆ ಇಂಥಾ ಮಗನ ಮಹಿಮಾ ಕಾಣಲಿಕ್ಕೆ ಅವರ ಅವ್ವ ಅಪ್ಪಾ ಇಲ್ಲಲಾ" ಎನ್ನುವ ಅಳುವಿನೊಡನೆ ಆನಂದ ಭಾಷ್ಪ ಕೂಡ ಉದುರುತ್ತಿತ್ತು.

ಮುಂಜಾನೆಯಾದರೆ ದಾಸರು ತಮ್ಮ ತಂಬೂರಿ ಗೋಪಾಲ ಬುಟ್ಟಿ ಎತ್ತಿಕೊಂಡು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕಿಲ್ಲೇಯ ಹಾದಿಗೆ ಇಳಿಯುತ್ತಿದ್ದರು. ಹೊರಬಂದರೆ ನೀಡಲು ಕಾದು ನಿಂತ ಕೈಗಳೆಷ್ಟೋ ಈವತ್ತು ನಾವು ದಾಸರಿಗೆ ಗೋಪಾಲ ಹಾಕಿ ಧನ್ಯನಾಗ್ಬೇಕು ಎಂಬ ತಹ ತಹಿಕೆ ಎಲ್ಲ ಹೃದಯಗಳಲ್ಲಿ ಕಾದು ನಿಂತಂತಿತ್ತು.

ಗೋಪಾಲ ಮುಗಿಸಿ ಮನೆಗೆ ಬಂದು ಸ್ನಾನ ಪೂಜೆ ಮುಗಿಸಿ ಭಗವಂತನನ್ನು ಧ್ಯಾನಿಸುತ್ತಾ ಎರಡು ಗಳಿಗೆ ಕಣ್ಮುಚ್ಚಿದರೇ ಅವನೇ ಕಾಣಬೇಕೇ? ನಿದ್ದೆಯ ಮಂಪರು ಎನ್ನುವುದು ಅವನನ್ನು ಅಂತರಂಗದಲ್ಲಿ ಕಾಣುವ ಒಂದು ಧ್ಯಾನವಿದ್ದಂತೆ

ನಿದ್ದೆ ಮುಗಿದರೆ ಪಡಸಾಲೆ ಕಟ್ಟೆಗೆ ಕುಳಿತು ತಾವು ಓದಿದ ವೇದ ಪುರಾಣ ಮಧ್ವ ಸಿದ್ಧಾಂತದ ಅಧ್ಯಯನದಲ್ಲಿ ಲೀನವಾಗುತ್ತಿತ್ತು ಮನಸ್ಸು.

ಮಧ್ವ ಸಿದ್ಧಾಂತ ಎಂದರೆ ಒಂದು ವಿಶ್ವರೂಪ ದರ್ಶನವಿದ್ದಂತೆ ಎಲ್ಲಿ ನೋಡಿದರೂ ಹರಿಯ ರೂಪವನ್ನು ನೋಡಿದಂತೆ, ನೋಡಿದರೂ ತೃಪ್ತಿಯಾಗದಂತೆ, ತೃಪ್ತಿಯಾದರೂ ಮತ್ತೇ ಮತ್ತೇ ನೊಡಬೇಕೆನ್ನುವ ಹಂಬಲದಂತೆ, ಹಂಬಲದೊಂದಿಗೆ ಒಳಗಿನ ತಿರುಳನ್ನು ಅರೆದು ಕುಡಿಯಬೇಕೆನ್ನುವ ಮಹಾದಾಸೆಯಂತೆ ಈ ಮಧ್ವ ಸಿದ್ಧಾಂತ

ಆಗ ದಾಸರಿಗೆ ತಾವು ಶ್ರೀ ಮುದ್ಗಾಲಾಚಾರ್ಯರ ಹತ್ತಿರ ಸಿದ್ಧಾಂತದ ಬಗ್ಗೆ ಮಾಡಿದ ಸಂವಾದಗಳು, ತಿಳಿದುಕೊಳ್ಳುತ್ತಿದ್ದ ಹೊಸ ಹೊಸ ತರ್ಕಗಳು, ಆವಿಷ್ಕಾರಗಳ ಸುಳಿಯಲ್ಲಿ ಮುಳುಗಿ ಒಳಗಿಳಿದು ಆಳ ಪಾತಾಳದಲ್ಲೂ ಅಡಗಿದ್ದ ಅವುಗಳ ತತ್ವನ್ನು ಅರಿಯಬೇಕೆಂಬ ಅನನ್ಯ ಆಸೆ ಎಲ್ಲವೂ ನೆನಪಾಗುತ್ತಿತ್ತು.

ಒಂದು ಸಂಜೆ ಹೀಗೆ ಯಾವುದೋ ತರ್ಕದ ಕುರಿತು ಅದರಲ್ಲಿ ವಿಚಾರದಲ್ಲೇ ಮುಳುಗಿ ಲೀನವಾಗಿದ್ದರು. ದಾಸರು, ಮಧ್ವಸಿದ್ಧಾಂತದ ಬಗ್ಗೆ ತಾವು ಗುರುಗಳಲ್ಲಿ ಕೇಳಿದ ಪ್ರಶ್ನೆ ಈಗಲೂ ನೆನಪಿದೆ

“ಜೀವಾತ್ಮ ಪರಮಾತ್ಮನಿಗಿಂದ ಹೇಗೆ ಭಿನ್ನ?’ ಇದು ತಾತ್ವಿಕ ವಾದ ಪ್ರಶ್ನೆ ಇದಕ್ಕೆ ಉತ್ತರವೆಂದರೆ ಒಂದು ವಿಧವಾದ ತರ್ಕಕ್ಕೆ ತಮ್ಮನ್ನು ಒಡ್ಡಿಕೊಳ್ಳಬೇಕು ಏನದರ ತರ್ಕ ಗುರುಗಳು ಹೇಳಿದ್ದರೂ ಕೂಡ

“ಪರಮಾತ್ಮನಲ್ಲಿನ ಗುಣಗಳಿಗೆ ವಿರುದ್ಧವಾದ ಗುಣಗಳು ಜೀವಾತ್ಮದಲ್ಲಿ ಅನುಭವಕ್ಕೆ ಬರುತ್ತವೆಯಾದ್ದರಿಂದ ಜೀವ ಪರಮಾತ್ಮನಿಗಿಂತ ಭಿನ್ನ ಎನ್ನುವುದು ಸಿದ್ಧಾಂತದ ಮಾತು ಆದರೆ ಪರಮಾತ್ಮನಲ್ಲಿ ಅಂಥಹ ಗುಣಗಳಿವೆ ಎಂದು ತಿಳಿಯುವುದು ಹೇಗೆ? ಇದು ಸಾರ್ವತ್ರಿಕವಾದ ಪ್ರಶ್ನೆ, ಈ ಪ್ರಶ್ನೆಗೆ “ಸಾರ್ವಜ್ಞಾಧಿ ಗುಣಃ” ಎಂದು ಆಚಾರ್ಯರು ಉತ್ತರವನ್ನು ಕೊಟ್ಟಿದ್ದಾರೆ. ವೇದಗಳು ಪರಮಾತ್ಮನಲ್ಲಿಯ ಗುಣಗಳನ್ನು ಮಾತ್ರ ಹೇಳುತ್ತಿಲ್ಲ” ಅವು ಸತ್ಯವಾಗಿವೆ” ಎಂದು ಹೇಳುತ್ತವೆ ಎಲ್ಲಾ ಪ್ರಮಾಣಗಳು ವಸ್ತುವನ್ನು ತಿಳಿಸುವಾಗ ಅದನ್ನು ಸತ್ಯವೆಂದೇ ತಿಳಿಸುತ್ತವೆ.

“ಸತ್ಯಂ ಜ್ಞಾನಂ ಅನಂತಂ ಬ್ರಹ್ಮ” ಎಂಬ ಶ್ರುತಿಯು ಬ್ರಹ್ಮನ ಸಚ್ಚಿದಾನಂದ ಸ್ವರೂಪವನ್ನು ಹೇಳುತ್ತದೆ. ಅದು ಸತ್ಯವಾಗಿದೆ ಎಂದು ಹೇಳುತ್ತಿಲ್ಲ ಆದ್ದರಿಂದ ಬ್ರಹ್ಮಸ್ವರೂಪ “ಮಿಥ್ಯಾ” ಎಂದು ಹೇಳಬೇಕಾದೀತು.

ಭಗವಂತನ ಸ್ವರೂಪದ ಬಗ್ಗೆ ನಾನಾ ತರ್ಕಗಳಿವೆ ಸಿದ್ಧಾಂತಗಳಿವೆ. ತಾತ್ವಿಕ ನೆಲೆಗಟ್ಟಿನಲ್ಲಿ ಸತ್ಯದ ಸ್ವರೂಪವನ್ನು ತಿಳಿಸುತ್ತವೆ.

ಮಧ್ವ ಸಿದ್ಧಾಂತದ ಸರ್ವ ಮೂಲ ಗ್ರಂಥಗಳಲ್ಲಿ ಭಗವಂತನ ವಿಶ್ವರೂಪ ದರ್ಶನವಾದರೂ ಸಾಕ್ಷಾತ್ಕಾರದ ಅನುಭವವಾಗುವುದು ಅಸಾಧ್ಯ ಇನ್ನು ಭಗವಂತನನ್ನು ತಿಳಿದುಕೊಳ್ಳುವುದಾದರೂ ಏನು? ತಿಳಿದುಕೊಳ್ಳುವದೆಂದರೇ ಅನುಭವದ ಆಳದಲ್ಲಿ ಇಳಿಯಬೇಕು ಚರಾ ಚರ ಅವನೇ, ಅಣು ರೇಣು, ತೃಣ ಕಾಷ್ಠ ಅವನೇ, ಅವನಿಲ್ಲದೇ ಜೀವ ಸಂಕುಲವಿಲ್ಲ, ಜೀವ ಸಂಚಲನವಿಲ್ಲ ಜೀವ ಚೈತನ್ಯವಿಲ್ಲ, ಎನ್ನುವದಷ್ಟೇ ಮಾನವ ಜೀವಿಗೆ ಸಾಧ್ಯವಾದದ್ದು.



ಗುರುಗಳ ಸನ್ನಿಧಿಯಲ್ಲಿ ಎಂಥಹ ಬ್ರಹ್ಮಾನಂದದ ಅನುಭವವಿತ್ತು ಅವರು ಕೂಡ ಭಗವಂತನ ಸ್ವರೂಪದಂತೆ ಕಾಣುತ್ತಿದ್ದರು. ತನಗೆ ಹಾಗೆ ಹೇಳಿದಾಗ ನಕ್ಕು ಏನೆಂದು ಹೇಳಿದ್ದರು ಅವರು

“ಹುಚ್ಚಪ್ಪ ಭಗವಂತನನ್ನು ಸಾಕ್ಷಾತ್ಕಾರಿಸಿಕೊಂಡವ ನೀನು ಹಂಗಂತ ವಿಶ್ವ ಎಲ್ಲ ನಿನಗ ಭಗವಂತನ ಸ್ವರೂಪನ ಕಾಣಸ್ತದೆ” ಎಂದು.

“ದಾಸರೇ” ಯಾರೋ ಬಂದು ಕೈ ಮುಗಿದು ಕುಳಿಂತತಾಯಿತು. ದಾಸರು ಯಾವುದೋ ಗಾಡ ಯೋಚನೆಯಲ್ಲಿದ್ದಂತೆ ಕುಳಿತಿದ್ದಾರೆ ಅವರ ಮನಸ್ಸು ಭಗವಂತ, ಜೀವಾತ್ಮ, ಗುರುಗಳು ಮಧ್ವ ಸಿದ್ಧಾಂತ ಇದರ ಸುತ್ತಲೇ ಸುತ್ತುತ್ತಿವೆ.

“ದಾಸರೇ” ಮುಂದೆ ಕುಳಿತಿದ್ದ ಓಣಿಯ ರಾಮಾಚಾರ್ಯರು ಮತ್ತೆ ಕರೆದರು. ದಾಸರು ಎಚ್ಚರವಾಗಿದ್ದಂತೆ ಎದುರಿಗೆ ಕುಳಿತವರನ್ನು ನೋಡಿದರು ಬಂದವರು ದಾಸರ ಕಾಲಿಗೆ ನಮಸ್ಕಾರ ಮಾಡಿ ಮತ್ತೆ ಕುಳಿತರು.

“ಹೇಳ್ರಿ ರಾಮಣ್ಣ ಏನು?”

“ನೀವು ಇಲ್ಲ ಅನಬಾರದು ದಾಸರ”

“ಏನಂತ ಹೇಳ್ರಪ್ಪಾ ನೀವು ಹೇಳಿದ್ರ ಗೊತ್ತಾಗ್ತೇಕಲ್ಲ ಇಲ್ಲ ಅನ್ಲಿಕ್ಕೆ ನಾ ಯಾರು? ನಿಮಗೆ ಬೇಕು ಅಂದದ್ದನ್ನು ನಡೆಸಿಕೊಂಡಾವಾ ಆ ಶ್ರೀ ಹರಿ ಹೇಳ್ರಿ.

“ದಾಸರ ನಾಳೆ ಮನ್ಯಾಗ ದೇವತಾ ಕಾರ್ಯ ಆದ ನಿಮ್ಮ ಗೋಪಾಲ ಕೃಷ್ಣನ ನೈವೇದ್ಯ ಅಲ್ಲೇ ಆಗಲಿ ನೀವು ಪ್ರಸಾದಕ್ಕೆ ಬಂದು ನಮ್ಮ ಮನಿ ಉದ್ಧಾರ ಮಾಡ್ಬೇಕು”

“ರಾಮಣ್ಣ ನಾ ಏನು ಉದ್ಧಾರ ಮಾಡಾಂವಾ ಆತು ಬರ್ತೀನಿ ಬಿಡ್ರಿ ನನ್ನ ಅನ್ನದ ಋಣ ನಾಳೆ ನಿಮ್ಮನ್ಯಾಗ ಬರ್ದಾನ ಆ ಗೋಪಾಲಕೃಷ್ಣ” ಎಂದು ಎದುರಿಗಿದ್ದ ಗ್ರಂಥದ ಪುಟಗಳನ್ನು ತಿರುವಿ ಹಾಕಿದರು.

“ಆತ್ರಿ ಹಂಗರ ನಾ ಬರ್ತೀನ್ರೀ ನಾಳೆ ಹನ್ನೆರಡಕ್ಕೆ ಬಂದು ಬಿಡ್ರಿ ನಮ್ಮ ಹುಡುಗನ್ನ ಕಳಿಸ್ತೀನಿ ಕರಿಲಿಕ್ಕೆ.

“ಬ್ಯಾಡ ರಾಮಣ್ಣ ನಾನೇ ಬರ್ತೀನಿ” ರಾಮಣ್ಣ ಹೊರಟು ಹೋದರು ಮನಸ್ಸು ಮತ್ತೆ ಅದೇ ತಾತ್ವಿಕ ನಿತ್ಯ ಸತ್ಯದ ಚಿಂತನೆಯಲ್ಲಿ ತೊಡಗಿತು “ನ–ಚ ಜಗತಃ ಅಜ್ಞಾನ ಜನ್ಮ ತ್ವೇಂಕಿಂಚಿನ್ಮಾನಮ್”

“ಜಗತ್ತು ಅಜ್ಞಾನ ಕಲ್ಪಿತವಲ್ಲ”

ಜಗತ್ತು ಅಜ್ಞಾನದಿಂದ ಹುಟ್ಟಿದೆ ಎನ್ನಲು ಆಧಾರವಿಲ್ಲ ಅಜ್ಞಾನ ಜನ್ಯ ಎನ್ನುವುದು ಪ್ರಮಾಣ ವಿರುದ್ಧವು ಆಗುತ್ತದೆ ತಾನು ಮಾಯೆಯಿಂದ ಸೃಷ್ಠಿ ಮಾಡಿ ತೋರಿಸುವ ವಸ್ತುಗಳು ಇಂದ್ರ ಜಾಲಿಕನಿಗೆ ಕಾಣುವುದಿಲ್ಲ ಆದರೆ ಜಗತ್ ಕರ್ತನಾದ ಭಗವಂತ ಸರ್ವದಾ ಈ ಜಗತ್ತನ್ನು ನೋಡುತ್ತಿರುತ್ತಾನೆ. ಆದ್ದರಿಂದ ಈ ಜಗತ್ತು ಈಶ್ವರನ ಮಾಯೆಯಿಂದ ಹುಟ್ಟಿದ್ದಲ್ಲ”

“ದಾಸರ ಇದ್ದೀರೇನ್ರಿ?” ಮತ್ತೇ ಯಾರೋ ಬಂದರು ನಮಸ್ಕಾರ ಮಾಡಿದರು. ಕೂತರು ಎದುರಿಗೆ ಗ್ರಂಥಾಧ್ಯಯನದಲ್ಲಿ ಲೀನವಾದ ದಾಸರನ್ನೇ ನೋಡಿದರು. ಯಾವುದೋ ಒಂದು ಅನನ್ಯ ಭಾವ ಅವರ ಕಣ್ಣುಗಳಲ್ಲಿ ಹರಿದು ನಿಂತಿದೆ. ಅದು ಪರಮಾತ್ಮನನ್ನು ಕಾಣುವ ಅನನ್ಯ ಬಯಕೆಯೆ?

ಎಲ್ಲದರಲ್ಲಿ ಇದ್ದಾನೆ ಆ ಭಗವಂತ, ವಿವಿಧ ಜೀವಿಗಳಲ್ಲಿ ವಿಭಿನ್ನ ರೂಪದಿಂದ ಸರ್ವಾಂತರ್ಯಾಮಿ ಆದವನಿಗೆ ನೆಲೆಬೇಕು ಎನ್ನುವುದೇನಿದೆ? ಎಲ್ಲರಲ್ಲೂ ನೆಲೆ ನಿಂತವನಲ್ಲವೆ ಅವನು? ಅವನಿಲ್ಲದೆ ಅಣು, ತೃಣ ಕೂಡ ಅಲುಗಾಡಲಾಗದು ಎನ್ನುವ ಭಗವದ್ಗೀತೆಯ ತಾತ್ಪರ್ಯವನ್ನು ತಿಳಿಯದವರ್‍ಯಾರು?

ಅಂತಲೇ ಭಗವತ್ಪಾದಾಚಾರ್ಯರು ಹೇಳಿರಲಿಲ್ಲವೇ? ಪರಮಾತ್ಮ ಸತ್ಯ, ಪರಮಾತ್ಮನ ಸಾನಿಧ್ಯದಿಂದ ಪ್ರಪಂಚ ಕೂಡ ಚಲನೆಯ ಹಾದಿಯಲ್ಲಿದೆ.

“ಸ್ವಾಮಿ ದಾಸರ” ಮತ್ತೆ ಎಲ್ಲಿಂದಲೋ ಆಳದಿಂದ ಬಂದಂತಹ ಧ್ವನಿ ದಾಸರು ಅರೆನಿಮಲಿತರಾಗಿಯೇ ಎದುರಿಗೆ ಕುಳಿತವರನ್ನು ನೋಡಿದರು.

“ಏನು” ಎನ್ನುವಂತೆ

“ಏನಿಲ್ರಿ ನಾಳೆ ಮನ್ಯಾಗ ದೊಡ್ಡದೇವರ ತಗೀತೀವ್ರಿ ನಮಗೆ ನಿಮಗಿಂತ ದೊಡ್ಡ ಆಚಾರ್‍ಯರು ಯಾರಿದ್ದಾರೆ? ಭಗವದ್ಭಕ್ತರು ನೀವು ನೀವು ಮನಿಗೆ ಬಂದು ಪ್ರಸಾದ ತಗೊಂಡು ನಮ್ಮ ಮನಿ ಉದ್ಧಾರ ಮಾಡ್ಬೇಕು”.

“––––”

ಎಲ್ಲಿ ಹುದುಗಿದೆಯೋ ಅವರ ಅಂತರಂಗದ ಧ್ಯಾನ ಇಹದ ಅರಿವಿಲ್ಲದಂತೆ ಕುಳಿತಿದ್ದವರಿಗೆ

“ಬರ್ತೀರಲ್ರಿ ದಾಸರ ಇಲ್ಲಾ ಅನ್ಬ್ಯಾಡ್ರಿ” ದಾಸರು ಧ್ಯಾನದಲ್ಲಿದ್ದಂತೆ ಕತ್ತು ಆಡಿಸಿದರು. “ಕುಳಿತವರು ಆನಂದದಿಂದ ಎದ್ದರು.

“ಬಡವನ ಮನಿ ಪಾವನ ಆತ್ರಿ ನಿಮ್ಮ ಪವಿತ್ರ ಸಾನಿಧ್ಯ ನಮ್ಮ ಮನಿಗೆ ಬರ್ಬೇಕಂತ ಇಚ್ಛಾ ಇತ್ತು. ಆತು ದಾಸರ ನಾಳೆ ಹನ್ನೆರಡಕ್ಕೆ ಬರ್ರಿ ಕರೀಲಿಕ್ಕೆ ನಮ್ಮ ಹುಡುಗನ್ನ ಕೊಟ್ಟು ಕಳಿಸಿತ್ತೀವಿ” ಎನ್ನುತ್ತಾ ಆನಂದಾತಿಶಯದಿಂದ ಹಗುರವಾದ ಹೆಜ್ಜೆ ಇಡುತ್ತಾ ಇಳಿದು ಹೋದರು ಆ ಹಿರಿಯರು.

ಯಾರು ಬಂದರೋ? ಯಾರು ಕರೆದರೋ? ಇಹದ ಅರಿವಿಲ್ಲದಂತೆ ಕುಳಿತಿದ್ದವರಿಗೆ ಕತ್ತಲು ಕಳೆದು ಹಗಲಾಗಿ ಸೂರ್ಯ ನಿಧಾನವಾಗಿ ಮಲ್ಲಯ್ಯನ ಗುಡ್ಡದಾಚೆ ತೇಲಿಬಂದ. ದಾಸರು ನದಿಗೆ ಹೋಗಿ ಸ್ನಾನ ಮಾಡಿ ಪೂಜೆ ಪುನಸ್ಕಾರ ಮುಗಿಸಿ ತಮ್ಮ ಅಂತರಂಗ ಧ್ಯಾನದಲ್ಲಿದ್ದರು. ಪೂಜೆ ಮುಗಿಸಿ ಎದ್ದಾಗಿನ ಮಾತು ಮನಸ್ಸು ಎಚ್ಚರವಾದಂತೆ ಹಿಂದಿನ ದಿನದ ಸಂಜೆಯ ನೆನಪು. ತಾನು ಗ್ರಂಥಾಧ್ಯಯನ ಮಾಡುತ್ತಾ ಹರಿಧ್ಯಾನದಲ್ಲಿದ್ದಾಗ ಯಾರೋ ಪ್ರಸಾದಕ್ಕೆ ಬರಬೇಕೆಂದು ಹೇಳಿದ್ದು ತಾನು ಒಪ್ಪಿದ್ದು ಆದಾದ ಮೇಲೆ ಮತ್ತ್ಯಾರೋ



ಬಂದರು ಮನೆಯಲ್ಲಿ ದೊಡ್ಡ ದೇವರನ್ನು ತೆಗೆಯುತ್ತಾರೆ ಪ್ರಸಾದಕ್ಕೆ ಬರಬೇಕು ಎನ್ನುವ ಬಿನ್ನಹ ಯಾವ ಜ್ಞಾನದಲ್ಲಿದ್ದೆನೋ “ಆಯ್ತು” ಎಂದೆ ಹರಿ ಭಗವಂತ ತನ್ನ ಬಾಯಿಂದ ಯಾಕೆ ಹಾಗೆ ನುಡಿಸಿದ ಇಬ್ಬರಿಗೂ ಪ್ರಸಾದಕ್ಕೆ ಬರುತ್ತೇನೆಂದು ಮಾತು ಕೊಟ್ಟಾಗಿದೆ ಈಗ ಇಬ್ಬರ ಮನೆಗೆ ಪ್ರಸಾದಕ್ಕೆ ಒಬ್ಬನೇ ಹೋಗುವ ಮಾತು ಭಗವಂತ ಏನಿದು ವಿಚಿತ್ರ? ಇರಲಿ ಪರಮಾತ್ಮನ ಧ್ಯಾನದಲ್ಲಿದ್ದೆ ತಾನು. ಅವನೇ ನುಡಿಸಿದ ಆ ಮಾತನ್ನು ಅವನು ನುಡಿಸಿದಂತೆ ನಡೆಸುವವನು ಅವನೇ ಅಲ್ಲವೇ? ಎನ್ನುವ ನಿರಂಬಳ ಮನಸ್ಸಿನಿಂದ ಪಡಸಾಲೆ ಕಟ್ಟೆಗೆ ಬಂದು ಜಪ ಮಾಲೆ ಹಿಡಿದು ಕುಳಿತರು.

“ಓಂ ವಿಶ್ವರೂಪಾಯ ಅನಂತಾಯ ವಿಷ್ಣುವೇನಮಃ” ವಿಷ್ಣು ಎನ್ನುವುದು ವಿಶ್ವ, ವಿಶ್ವ ಎನ್ನುವುದು ಅನಂತ, ಅನಂತ ಎನ್ನುವುದು ಅಗೋಚರ, ಅಗೋಚರಲ್ಲಿ ತುಂಬಿದ ಬ್ರಹ್ಮಾಂಡದೊಳಗೆ ಅವನ ಅನಂತ ರೂಪ.

ಅಂತರಂಗದ ಒಳಗೆ ಒಳಗೆ ಇಳಿಯುತ್ತಾ ಪರಮಾತ್ಮ ಎನ್ನುವ ಅಮೃತವನ್ನು ಮನಸ್ಸಿನ ಒಳಗೆ ಹರಿಬಿಡುತ್ತಾ ಬ್ರಹ್ಮಾನಂದದ ಅನುಭವದಲ್ಲಿ ಲೀನವಾಗಿರಬೇಕು ದಾಸರಿಗೆ ಊಟದ ಪರಿವಿಲ್ಲ ಮಧ್ಯಾಹ್ನದ ಬಿಸಿಲು ಅಂಗಳ ಕಟ್ಟೆ ಏರಿ ಬರುತ್ತಿದೆ. ಅಂಗಳದಲ್ಲಿ ಬಂದು ನಿಂತ ರಾಮಣ್ಣನ ಮಗ. ದಾಸರ ಅತ್ತಿಗೆ ಬಂದು ಹೊರ ನಿಂತಳು.

“ಏನಪ್ಪಾ ಗೋಪಾಲ”

“ಮಾಮಿ ಇವತ್ತ ದಾಸರು ನಮ್ಮ ಮನಿಗೆ ಊಟಕ್ಕೆ ಬರಬೇಕಂತ ಅಪ್ಪ ಕರೆದು ಹೋಗಿದ್ರು ಈಗ ಪೂಜೆ ನೈವೇದ್ಯ ಎಲ್ಲಾ ಆಗೇದ, ದಾಸರನ ಕರ್ಕೊಂಡು ಬಾ ಅಂತ ಕಳಿಸ್ಯಾರಿ”

“ಹೌದೇನಪ್ಪಾ ಆತು ಜಪಾ ಮಾಡ್ಲಿಕ್ಕೆ ಹತ್ಯಾರ ಮುಗದ ಕೂಡ್ಲೆ ಕಳಿಸ್ತೀನಪಾ ಹೋಗು”

“ಇಲ್ರಿ ಅಪ್ಪ ನಿಂತು ಕರ್ಕೊಂಡು ಬಾ ಅಂದಾರ್ರಿ ಮುಗಿಯು ತನಕಾ ಇಲ್ಲೇ ಕೂತಿರ್ತಿನಿ” ಎಂದು ಅಂಗಳದ ಕಟ್ಟೆಗೆ ಕುಳಿತ ಅತ್ತಿಗೆ ಒಳಹೋದಳು. ಅಡುಗೆ ಮನೆಯಲ್ಲಿ ದಿಂಡಿ ಕೆಲಸ ಇತ್ತು. ಗಂಡ ಕೂಡ ಯಾರದೋ ಸತ್ಯನಾರಾಯಣ ಪೂಜೆ ಮಾಡಿಸಿಲಿಕ್ಕೆಂದು ಹೋದವರು ಅಲ್ಲಿಯೇ ಊಟ ಮುಗಿಸಿ ಬರುವವರಿದ್ದರು. ಇನ್ನು ಮಕ್ಕಳು ಅಧ್ಯಯನ ಪಾಠ ಎಂದು ಪಾಠ ಶಾಲೆಗೆ ಹೋಗಿದ್ದಾರೆ. ಅವರು ಬರುವುದರೊಳಗೆ ಕೆಲಸ ಮುಗಿಸಬೇಕು ಎಂದು ಒಂದೊಂದಾಗಿ ಪಾತ್ರೆ ಎತ್ತುತ್ತ ಕೆಲಸ ನಡೆಸಿದ್ದರು. ಉಪಕಾರಣಿ ತೊಳೆಯಲು ಬಚ್ಚಲಮನೆಗೆ ಹಾಕಿ ಹೊರ ಬಂದಾಗ ಅಂಗಳದ ಕಟ್ಟೆಗೆ ಕೂತ ರಾಮಣ್ಣನ ಮಗನಿರಲಿಲ್ಲ. ಅವನು ಕೂತ ಜಾಗದಲ್ಲಿ ಈಗ ಬಿಸಿಲೇರಿ ಬಂದಿತ್ತು. ಆದರೆ ಪಡಸಾಲೆಗೋಡೆಗೆ ದಾಸರು ಹಾಗೆಯೇ ಕಣ್ಮುಚ್ಚಿ ಧ್ಯಾನದಲ್ಲಿದ್ದಾರೆ ಪಾಪ ಹುಡುಗ ಹಾದಿ ಕಾಯ್ದು ಕಾಯ್ದು ಹಾಗೇ ಹೋದನೋ ಹ್ಯಾಗೆ? ಅವರ ಮನೆಯಲ್ಲಿ ಬೇರೆ ಬ್ರಾಹ್ಮಣರು ಹಸಿದು ಕೂರಬಾರದಲ್ಲ? ತಾನೆ ದಾಸರನ್ನು ಧ್ಯಾನದಿಂದ ಎಚ್ಚರಗೊಳಿಸಿ ಕಳಿಸಬೇಕೆಂದುಕೊಂಡು ಪಡಸಾಲೆ ಬಾಗಿಲಿಗೆ ಬಂದು ನಿಂತರೆ ಅಂಗಳದಲ್ಲಿ ಬಂದು ನಿಂತ ಎದುರು ಮನೆ ನಾರಾಯಣನ ತಮ್ಮ

"ವೈನಿಯವರೇ ದಾಸರು ಇದ್ದಾರೇನ್ರಿ?"

"ಇದೇನಪ್ಪಾ– ನಿನ್ನ ಎದುರಿಗೆ ಕಾಣಸ್ತಾರಲ್ಲ ಜಪಮಾಡ್ಕೋತ ಕೂತಾರ ಯಾಕ?

"ಏನಿಲ್ರಿ ನಿನ್ನೆ ನಮ್ಮ ನಾನಣ್ಣ ಬಂದು ಇವತ್ತೇ ನಮ್ಮ ಮನ್ಯಾಗ ದೊಡ್ಡ ದೇವರ್‍ನ ತಗೀತಾರೆ ಅದಕ್ಕ ಪ್ರಸಾದಕ್ಕೆ ಬರ್‍ಲಿಕ್ಕೆ ದಾಸರನ್ನ ಕರೆದು ಹೋಗಿದ್ರಂತೆ ಅದಕ್ಕೆ ಈಗ ಕರ್‍ಕೊಂಡು ಹೋಗಲಿಕ್ಕೆ ಬಂದೀನ್ರಿ"

"ನಿಮ್ಮನಿಗೆ ಊಟಕ್ಕ ಬರ್‍ಲಿಕ್ಕೆ ಹೇಳಿದ್ರ" ಆಶ್ಚರ್ಯದಿಂದ ಕೇಳಿದ್ಲು

"ಹೂಂನ್ರಿ"

"ಖರೇ ಹೇಳ್ತಿಏನಪ್ಪಾ?

"ಯಾಕ್ರಿ ವೈನಿ ನಾ ಯಾಕ ಸುಳ್ಳು ಹೇಳ್ಳಿ ನಿನ್ನೆ ಅಣ್ಣ ಬಂದಾಗ ನೀವಿರಲಿಲ್ಲ ಕಾಣಾಸ್ತದಾ. ಇರ್‍ಲಿ ಬಿಡ್ರಿ ಈಗ ದಾಸರನ್ನು ಕಳಿಸಿರಿ" ಎಂದು ಅಂಗಳದ ಕಂಬದ ಮುಂದೆ ನಿಂತೇ ಇದ್ದ. ಆಕೆ ಕೂಡ ದಿಗ್ಭ್ರಮೆಯಿಂದ ನಿಂತಿದ್ದಳು ಅರ್ಧ ತಾಸಿನ ಹಿಂದೆ ರಾಮಣ್ಣ ಕಾಕಾನ ಮಗ ಬಂದಿದ್ದ, ಮನೆಯಲ್ಲಿ ದೇವತಾ ಕಾರ್ಯಪ್ರಸಾದಕ್ಕೆ ಬರಬೇಕೆಂದಿದ್ದ ಕಾಯ್ದುಕೊಂಡು ಕೂತು ಕೂತು ಅವರನ್ನು ಕರೆದುಕೊಂಡೇ ಹೋಗಬೇಕೆಂದು ಕೂತವ ಈಗಿಲ್ಲ ಹಾಗಾದರೆ ಹಾಗೇ ಹೋದನೋ ಹ್ಯಾಗೇ? ಈಗ ನೋಡಿದರೇ ನಾರಾಯಣನ ತಮ್ಮ ಬಂದಿದ್ದಾನೆ. ಇಬ್ಬರ ಮನೆಯ ಔತಣವನ್ನು ವೆಂಕಣ್ಣ ಒಪ್ಪಿಕೊಂಡಿದ್ದನೋ ಹ್ಯಾಗೆ? ಈಗ ಇವರು ನಾರಾಯಣನ ಮನೆಗೆ ಹೋದರೆ ಮತ್ತೆ ರಾಮಣ್ಣ ಮಗ ಕರೆಯಲು ಬಂದರೆ? ಯಾಕೋ ಯಾವುದು ಮನಸ್ಸಿಗೆ ನಿಶ್ಚಯಿಸಲು ಸಾಧ್ಯವಾಗುತ್ತಿಲ್ಲ ಇಲ್ಲಾ ಯಾವುದೋ ಧ್ಯಾನದಲ್ಲಿದ್ದವರು ಇಬ್ಬರ ಮನೆಯ ಔತಣಕ್ಕೂ ಒಪ್ಪಿಕೊಂಡಿದ್ದರೋ ಹ್ಯಾಗೆ? ಕಾವೇರಿ ಈ ಗೊಂದಲದಲ್ಲಿದ್ದಾಗಲೇ ದಾಸರು ಕಣ್ತೆಗೆದರು ಅಂತರಂಗದಲ್ಲಿ ತುಂಬಿದ ದೈವಾನುಭವದ ಆ ಆನಂದ ಅವರ ಮುಖದಲ್ಲಿ ಹೊಸ ಚೈತನ್ಯವನ್ನು ತುಂಬಿದಂತಿತ್ತು. ಕಣ್ತೆಗೆದರೆ ಎದುರಿಗೆ ಅಯೋಮಯವಾಗಿ ಕೂತ ಅತ್ತಿಗೆ ಕಂಬದ ಮುಂದೆ ನಿಂತ ಹುಡುಗಾ

"ಯಾರಪ್ಪಾ?"

"ನಾನ್ರಿ ನಾರಾಯಣನ ತಮ್ಮ ದಾಸರ ಇವತ್ತು ನಮ್ಮ ಮನಿಯೊಳಗೆ ದೊಡ್ಡದೇವರ ತಗೀತಾರಂತ ನಿಮಗ ಔತಣಕ್ಕೆ ಹೇಳಿದ್ರು ನಮ್ಮ ಅಣ್ಣ ಮನ್ಯಾಗ ಪೂಜಾ ನೈವೇದ್ಯಕ್ಕೆ ಆಗಿ ಎಲಿ ಹಾಕಲಿಕ್ಕೆ ಹತ್ಯಾರ ಬರ್‍ತೀರಿ"

"ಆತಪ್ಪಾ ನಡಿ ಬಂದೆ ನಡಿ" ಎಂದು ಎದ್ದರು ಆತ ಅಂಗಳ ದಾಟಿ ಮುಂದೆ ನಡೆದು ಹೋದ. ಎದ್ದ ದಾಸರು ಎದುರಿಗೆ ಕುಳಿತ ಅತ್ತಿಗೆಯನ್ನು ನೋಡಿದರು. ಯಾವುದೋ ಗೊಂದಲದಲ್ಲಿ ಇದ್ದಂತಿತ್ತು ಅವರ ಮುಖ.

"ಯಾಕ ವೈನಿ ಹಿಂಗ ಕೂತಿರಿ ನೀವು ಊಟ ಮುಗಿಸಿಬೇಕಲ್ಲೋ ಅಣ್ಣ ಸತ್ಯನಾರಾಯಣ ಪೂಜೆ ಮಾಡಿಸ್ಲಿಕ್ಕೆ ಹೋಗ್ಯಾನಂತೆ ಅಲ್ಲೇ ಊಟ ಆಗೇದನೋ? ನೀವು ಉಪವಾಸ ಎಷ್ಟೋತ್ತು ಕೂಡ್ತೀರಿ"



"ಹಂಗಲ್ಲ ವೆಂಕಣ್ಣ–ಅಲ್ಲಾ ನಿನಗೆ ನಾರಾಯಣ ಕಾಕಾನ ಮನ್ಯಾಗೂ ಪ್ರಸಾದಕ್ಕ ಹೇಳಿದ್ರೆನೋ?

"ಹೂಂ ಹೇಳಿದ್ರಂತ ಕಾಣಸ್ತಾದ ಅದಕ ಕರೀಲಿಕ್ಕೆ ಬಂದಾನ" "ಹಂಗಂದ್ರ ಹ್ಯಾಂಗ–? ಅಲ್ಲ ರಾಮಣ್ಣನ ಮಗನೂ ಬಂದಿದ್ದಾ ಇಬ್ಬರ ಮನಿ "ಔತಣಾ"

ದಾಸರು ಮಾತನಾಡಲಿಲ್ಲ ಕೈಯಲ್ಲಿ ಬೆಳ್ಳಿ ಲೋಟ ತೀರ್ಥದ ಸೌಟು ಹಿಡಿದು ಅಂಗಳ ಕಟ್ಟೆ ಇಳಿದು "ಎಲ್ಲಾ ದೇವರ ಇಚ್ಛಾವೈನಿ ಆಡೋ ಆಟಾ ಎಲ್ಲ ಅಂವಂದೆ" ಎಂದು ಬಾಗಿಲು ದಾಟಿ ಹೋದವರನ್ನು ವಿಸ್ಮಯದಿಂದ ನೋಡುತ್ತಲೇ ಇದ್ದಳು ಅತ್ತಿಗೆ "ಹಂಗರ ರಾಮಣ್ಣನ ಮಗ ಮತ್ತೆ ಕರೀಲಿಕ್ಕೆ ಬಂದ್ರ ಏನು ಮಾಡೋದು" ಎಂದು ಕೊಳ್ಳುತ್ತಾ, ಮಧ್ಯಾಹ್ನ ಕಳೆದು ಸಂಜೆ ಯಾಯ್ತು ದಿನದಂತೆ ದಾಸರು ಪಡಸಾಲೆ ಕಟ್ಟೆಗೆ ಕಂದೀಲು ದೀಪ ಹಚ್ಚಿಟ್ಟು ಕೊಂಡು ಸಂಧ್ಯಾವಂದನೆ ಮುಗಿಸಿ ಮತ್ತೆ ಬಂದು ದೀಪದ ಬೆಳಕಿನಲ್ಲಿ ಭಾಗವತದ ಗ್ರಂಥಗಳನ್ನು ತೆಗೆದರು ಓದುತ್ತಾ ಓದುತ್ತಾ ಅದರಲ್ಲೇ ಲೀನವಾಯಿತು ಮನಸ್ಸು. ಏನು ಕೃಷ್ಣನ ಅಗಾಧ ಲೀಲೆ ಮಡಿಲಲ್ಲಿಟ್ಟು ಕೊಂಡು ಈ ಮುದ್ದು ಜೀವವನ್ನು ತನ್ನದೆ ಕುಡಿ ಎಂಬಂತೆ ಬೆಳೆಸಿದ ಯಶೋಧೆಗೆ ಕೂಡ ತಿಳಿಯಲಿಲ್ಲವಲ್ಲ ಇವನ ಈ ಅಗಾಧ ಲೀಲೆ ಇವನ ತುಂಟಾಟಕ್ಕೆ ಬೇಸತ್ತು. ಕಟ್ಟಿ ಹಾಕಲು ಬಂದರೆ ಅನಂತ ರೂಪದಿಂದ ಕಂಡನಂತೆ ಮನದುಂಬಿ ಬಂದಿರಬೇಕು ಆ ತಾಯಿಗೆ ತನ್ನ ಇಡೀ ಜೀವನಕ್ಕೆ ತಾಯ್ತನ ತುಂಬಿ ಮುದ್ದು ಗರೆಯುತ್ತಿದ್ದಳು ದೇಹದ ಪ್ರತಿ ಅಣುವಿನಲ್ಲಿ ತಾಯ್ತನದ ಮಮತೆ ಹೊಮ್ಮುತ್ತಿತ್ತು.

"ರಂಗ ಬಾ ಮೋಹನಾಂಗ ಬಾ ದೇವೊ
ತುಂಗ ಬಾರೆಂದು ಕರೆದಾಳು ಗೋಪಿ
ಎನ್ನ ಬೇಡು ನೀ ಮನದಣಿ ನೀಡುವೆ
ಅನ್ಯರ ಮನೆಗೆ ಪೊಗಲಿಬ್ಯಾಡವೋ
ಚಿನ್ಮಯ ಮಾರುತಿ ಪ್ರಸನ್ವೆಂಕಟ ಕೃಷ್ಣಾ
ನನ್ನಾಣೆ ಮನೆಯ ಬಿಟ್ಟಗಲದಿರೋ"

ಮನಸ್ಸಿನ ತರಂಗಗಳಿಂದ ಹೊನಲಾಗಿ ಹರಿಯುತ್ತಿದೆ. ಆ ಕೃಷ್ಣನ ಬಾಲಲೀಲೆಯ ಪದಗಳು.

"ವೆಂಕಣ್ಣ ಕೂತ್ಲಪ್ಪಗೆ ಹೋಗಿ ಬರ್‍ತೀನಪ್ಪ" ಎಂದು ಅಂಗಳದಾಟಿ ಹೋದಳು ಕಾವೇರಿ, ಕೃಷ್ಣನ ಬಾಲಲೀಲೆಗಳನ್ನು ಕಣ್ತುಂಬುವಂತೆ ಪದಗಳನ್ನು ರಚಿಸುತ್ತಾ ಅದರಲ್ಲೇ ತಲ್ಲೀನರಾಗಿದ್ದರು ದಾಸರು. ಯಾಕೋ ಭಾಗವತ ಓದುತ್ತಿದ್ದಂತೆ ಮನಸ್ಸಿನ ಮೂಲೆಯಲ್ಲಿ ದಿವ್ಯ ಆಶೆಯೊಂದು ಹಂಬಲಿಸಿ ಕೇಳುತ್ತಿತ್ತು.

ಒಂದು ಸಲ ಆದ್ರೂ ದ್ವಾರಕಾ ಮಥುರಾ ಅಂತ ಹೋಗಿ ಬರ್‍ಬೇಕು. ನಮ್ಮಪ್ಪ ಶ್ರೀ ಹರಿ ಹುಟ್ಟಿ ಆಡಿ ಬೆಳೆದು ಅವತಾರ ಪುರುಷನಾಗಿ ಬಾಳಿದ ಸ್ಥಳ, ಎಂಥದಿರಬೇಕು. ದಿವ್ಯವಾದ ಆ ಜಾಗಕ್ಕೆ ಕಾಲಿಟ್ಟರೆ ಎಂಥಹ ಪುನೀತವಾದ ಅನುಭಾವ, ಅವನಾಡಿ ನಲಿದ ಆ ಯಮುನೆ ಆ

ಗೋವುಗಳು, ಕರುಗಳ ಹಿಂಡು, ಅವನೂದಿದ ಕೊಳಲ ಧ್ವನಿಯ ನಿನಾದ ಇನ್ನು ಗುಯ್ಗುಡುತ್ತಿರಬೇಕು. ಅದನ್ನು ನೋಡಬೇಕೆಂಬ ಪ್ರಬಲ ಆಶೆಯು ಅವರಂತರಂಗದಲ್ಲಿ ಗೂಡುಕಟ್ಟುತ್ತಿತ್ತು.

ಇತ್ತ ಕಾವೇರಿ ಗುಡಿಗೆ ಬಂದು ಹನುಮಪ್ಪನ ಮುಂದೆ ಮುಷ್ಟಿ ಅಕ್ಕಿ ಹಾಕಿ ತೊಯ್ಸಿದ ಬತ್ತಿಯನ್ನು ಇಟ್ಟು ಪ್ರದಕ್ಷಿಣೆ ನಮಸ್ಕಾರ ಹಾಕಿ ಪೌಳಿಯ ಮುಂದೆ ಬಂದು ಕೂತಳು. ಪೌಳಿಯ ಗೋಡೆಯ ಪಕ್ಕ ಹೊಂದಿಕೊಂಡು ಒಂದು ವಿಶಾಲ ಕಟ್ಟೆಯಿದೆ. ಸಾಮಾನ್ಯ ವಾಗಿ ಅಲ್ಲಿ ಓಣಿಯ ಗಂಡಸರು ಸಂಜೆಯ ಹೊತ್ತು ಅಲ್ಲಿ ಬಂದು ಕೂತು ಜೀವನದ ಕಷ್ಟ ಸುಖಗಳನ್ನು, ಇಲ್ಲಾ ದಿನ ನಿತ್ಯದ ಆಗು ಹೋಗುಗಳನ್ನು ಒಬ್ಬರಿಗೊಬ್ಬರು ಹೇಳಿಕೊಳ್ಳುವುದುಂಟು. ಹನುಮಪ್ಪನ ಗುಡಿಯಲ್ಲಿ ನಾಕಾರು ಜನ ಪ್ರದಕ್ಷಿಣೆ ಹಾಕುತ್ತಿದ್ದಾರೆ ಇನ್ಯಾರೋ ಮಂಗಳಾರತಿ ಮಾಡಿಸುತ್ತಿದ್ದಾರೆ ಪೌಳಿಯ ಮುಂದೆ ಪಾವಟಿಗೆ ಮೇಲೆ ಪ್ರಸಾದ ಹಿಡಿದುಕೊಂಡು ಕೂತೇ ಇದ್ದಳು ಕಾವೇರಿ. ಪೌಳಿಯ ಗೋಡೆಗೆ ಹೊಂದಿಕೊಂಡೇ ಇರುವ ಆ ಕಡೆ ಕಟ್ಟೆಯ ಮೇಲೆ ಕೂತ ಗಂಡಸರ ಮಾತು ಕತೆ ನಡೆದೆ ಇದೆ.

"ಏನ್ರಪ್ಪಾ ರಾಮಣ್ಣ ಇವತ್ತೇನೋ ವಿಶೇಷ ಇತ್ತು ಕಾಣಸ್ತದ ನಿಮ್ಮನ್ಯಾಗ?

"ಹೌದ್ರಿ ಮುಂದಿನ ತಿಂಗಳು ಮಗನ ಲಗ್ನ ಅದಕ ಮನ್ಯಾಗ ದೊಡ್ಡದೇವರನ ತಗಸೋ ಪದ್ಧತಿ. ಅಲ್ಲದ ಇನ್ನು ಒಂದು ವಿಶೇಷ ಅಂದ್ರ ಇವತ್ತು ದಾಸರು ನಮ್ಮನಿಗೆ ಪ್ರಸಾದಕ್ಕೆ ಬಂದಿದ್ದು ಇನ್ನು ಯಾವ ಅಡ್ಡಿ ಆತಂಕ ಇಲ್ಲದ ಮಗನ ಲಗ್ನ ಸುರಳೀತ ಆಗ್ತದ ನೋಡ್ರಿ"

"ಏನು ಏನು ಹೇಳ್ತೀರಿ ರಾಮಣ್ಣ ದಾಸರು ನಿಮ್ಮನಿಗೆ ಊಟಕ್ಕೆ ಬಂದಿದ್ರ? ಆದ್ರ ಅದು ಹ್ಯಾಂಗ ಸಾಧ್ಯ?" ಮೂಲಿಮನಿ ನಾರಾರಣ ಕಾಕಾನ ಧ್ವನಿ ಅಲ್ಲವೆ ಇದು

"ಯಾಕ ಹಂಗ್ಯಾಕ ಗಾಬರಿ ಆಗಿ ಕೇಳ್ತೀರಿ ಯಾಕ? ದಾಸರು ನಮ್ಮನಿಗೆ ಔತಣಕ್ಕೆ ಬರಬಾರ್ದೇನು? ನಾನೀ ಕಾಕಾ–ಅವ್ರು ಎಷ್ಟು ದೊಡ್ಡ ಮಹಾನುಭಾವರೇ ಇರ್ಲಿ ಆದ್ರ ಅವ್ರ ದಯಾಕ ಅಂತಃಕರಣಕ್ಕೆ ಬರಾ ಇಲ್ಲ. ತುಂಬಿದ ಕೊಡಾ ಇದ್ದಂಗ ಅವರು. ಯಾರು ಬೊಗಸಿಯೊಡ್ಡಿ ಮುಂದೆ ನಿಂತ್ರು ಮನಸ್ಸು ತುಂಬುವಷ್ಟು ಅಂತಃಕರಣ ಪ್ರೀತಿ ಜ್ಞಾನಾ ಹಾಕ್ತಾರಾ"

"ನಾನು ಆ ಮಾತು ಹೇಳ್ತಿಲ್ಲ ರಾಮಣ್ಣ, ಖರೇ ಹೇಳು ಹನುಮಪ್ಪನ ಮುಂದೆ ಕೂತಿ ದಾಸರು ಖರೇನ ಪ್ರಸಾದಕ್ಕೆ ಬಂದಿದ್ರ ನಿಮ್ಮನಿಗೆ?"

"ನಾ ಯಾಕ ಸುಳ್ಳು ಹೇಳ್ಲೀ ನಾನಿ ಕಾಕಾ ಹನುಮಪ್ಪನ ಮುಂದ ಕೂತೇ ಹೇಳಲಿಕ್ಕೆ ಹತ್ತೀನಿ".

"ಆದ್ರೆ ಹಂಗ್ಯಾಂಗೆ ಸಾಧ್ಯ? ಹೋಗ್ಲೀ ದಾಸರು ನಿಮ್ಮ ಮನಿಗೆ ಎಷ್ಟೊತ್ತಿಗೆ ಬಂದಿದ್ರು?

"ಆಗಿರ್ಬೇಕಪಾ ಬಾರ ಸಾಡೇ ಬಾರ ಅಜಮಾಸು ಒಂದು ಹೊಡೆದಿರಬೇಕು"

"ಇಲ್ಲ ಅದು ಸಾಧ್ಯಾನೇ ಇಲ್ಲ"



"ಏನು ಹಂಗಂದ್ರ ನಾ ಯಾಕ ಸುಳ್ಳು ಹೇಳ್ಲೀ? ನಾನss ಮಡಿಲೇ ನಿಂತು ಅವ್ರಿಗೆ ಬಡಸೀನಿ, ಇಂಥಾ ಅನುಮಾನ ಯಾಕ ಬಂತು ನಿಮಗ" ರಾಮಣ್ಣ ಅಸಮಾಧಾನದಿಂದ ಕೇಳಿದರು.

ಪೌಳಿಯಲ್ಲಿ ಕೂತ ಕಾವೇರಿ ವಿಸ್ಮಯದಿಂದ ಗಾಬರಿಯಿಂದ ಕೇಳುತ್ತಲೇ ಇದ್ದಾಳೆ.

"ಅನುಮಾನ ಅಲ್ಲ ರಾಮಣ್ಣ ಯಾಕಂದ್ರ ನಾನೂ ನಿನ್ನೆ ಹೋಗಿ ನಮ್ಮನ್ಯಾಗೆ ದೇವತಾ ಕಾರ್ಯ ಅದ ಪ್ರಸಾದಕ್ಕೆ ಬರ್ರೀ ಅಂತ ಕರೆದು ಬಂದಿದ್ದೆ. ಇವತ್ತೆ ಅದೇ ಸಾಡೇ ಬಾರಾ–ಒಂದಕ್ಕೆ ದಾಸರು ನಮ್ಮನಿಗೆ ಊಟಕ್ಕೆ ಬಂದಿದ್ರು."

"ನಾನಿ ಕಾಕಾ ಹುಚ್ಚ ಹಿಡದೇನು ನಿಮಗೆ? ಏನು ಹೂರಣ ತಿಂದು ಅಬ್ರಂ ಸುಬ್ರಂ ಆಗಿಯೋದಾಸರು ನಮ್ಮನಿಗೆ ಬಂದಿದ್ದಂತೂ ಖರೇ ಈಗ ನಿನ್ನ ಮಾತು ನಾನು ನಂಬ್ತಿನೇನು?

"ನಂಬು ಅಂತನಾ ಹೇಳಿಲ್ಲ ಆದ್ರ ನಮ್ಮನಿಗೂ ಬಂದದ್ದಂತೂ ಖರೆ– ನಾನು ಮಡಿಲೇ ನಿಂತೆ ಅವ್ರಿಗೆ ಬಡಿಸೀನಿ. ಬೇಕಾದ್ರೆ ಶಿನಣ್ಣನನ್ನು ಕೇಳು ಅವನೂ ಬಂದಿದ್ದ ನಮ್ಮನಿಗೆ ಊಟಕ್ಕೆ"

"ಹೌದು ರಾಮಣ್ಣ ದಾಸರು ನಾನೀ ಕಾಕನ ಮನಿಗೆ ಊಟಕ್ಕೆ ಬಂದದ್ದು ಖರೇ"

"ಆದ್ರ ನಮ್ಮನಿಗೂ ಅದೇ ವ್ಯಾಳ್ಯಾಕೆ ಬಂದಿದ್ರಲ್ಲಾ ಬೇಕಾದ್ರೆ ಗೋವಿಂದನ್ನ ಕೇಳು ಇಲ್ಲೇ ಇದ್ದಾನೆ"

"ಹೌದ್ರಿ ನಾನೀ ಕಾಕಾ ದಾಸರು ರಾಮಣ್ಣನ ಮನಿಗೆ ಬಂದಿದ್ರು"

"ಹಂಗರ ಏನಿದು ವಿಚಿತ್ರ" ಎಂದು ಎಲ್ಲರೂ ಒಬ್ಬರಿಗೊಬ್ಬರು ದಿಗ್ಭ್ರಮೆಯಿಂದ ನೋಡಿಕೊಳ್ಳತ್ತಲೇ ಇದ್ದಾರೆ. ಇದೇನು ದಾಸರ ಮಹಿಮೆಯೋ? ಪವಾಡವೋ? ಇಲ್ಲಾ ಇನ್ನೇನೋ ಕಣ್ಣ ಕಟ್ಟು ಆಟಾ ಆಡ್ತಾರೋ ಹ್ಯಾಂಗ ಎಂದು ಮಾತಾಡಿಕೊಂಡರು.

"ಅವ್ವಯ್ಯಾ ತಾಯಿ ಏನಿದು? ನನಗೂ ತಿಳಿಲಾರ್ದಂಗ ಆಗೇದಲ್ಲಾ ವೆಂಕಣ್ಣನಿಗೆ ಹೋಗಿ ಒಂದು ಮಾತssರ ಹೇಳ್ಬೇಕು ಏನು ನಡದದೋ? ಏನಿಲ್ಲೋ?" ಎನ್ನುತ್ತಾ ಪ್ರಸಾದದ ಬಟ್ಟಲು ಹಿಡಿದುಕೊಂಡು ಕಾವೇರಿ ಧಡಬಡ ಎಂದು ಮನೆಯತ್ತ ಸಾಗಿದಳು.ಈಗ ಓಣಿಗುಂಟ, ಕತ್ತಲು ಹರಡುತ್ತೇ ಅಲ್ಲಲ್ಲಿ ರಸ್ತೆಯಲ್ಲಿ ಚಿಮಣಿ ದೀಪಗಳು ಹತ್ತಿಕೊಂಡಿದ್ದವು. ಆ ಮುಂದೆ ಕತ್ತಲಲ್ಲಿ ಎಲ್ಲಿಯೋ ಒಂದು ಬೆಳಕಿನ ಕಿರಣ ತನ್ನ ಜೊತೆ ಸಾಗುತ್ತಲೇ ಇದೆ ಏನೋ ಎನ್ನುವಂತೆ ಕಾವೇರಿ ಮನೆ ಅಂಗಳಕ್ಕೆ ಬಂದಾಗ ದೀಪವನ್ನು ಮುಂದಿಟ್ಟುಕೊಂಡು ದಾಸರು ಏನೋ ಬರೆಯುತ್ತಾ ಕೂತಿದ್ದಾರೆ.

ಅವರ ಕಣ್ಣುಗಳು ಧ್ಯಾನದಲ್ಲೋ ಭಕ್ತಿಯಲ್ಲೋ ಇಲ್ಲಾ ಅಂತರಂಗದಲ್ಲಿ ಏನೋ ವಿಶೇಷತೆ ಕಾಣುತ್ತಿದ್ದಾರೇನೋ ಎನ್ನುವಂತೆ ಪ್ರಪಂಚದ ಅವರ ಸಂಬಂಧವೇ ಇಲ್ಲವಂತೆ ಅಂತರ್ಮುಖಿಯಾಗಿದ್ದಾರೆ ಕಾವೇರಿ ಬಂದು ಅವರ ಮುಂದೆ ನಿಂತಳು

"ವೆಂಕಣ್ಣ"

"ಜ್ಞಾನಿಯಾಗಬೇಕು ಅಜ್ಞಾನ ನೀಗಬೇಕು ತತ್ವಜ್ಞಾನದಿಂದರಬೇಕು"

ಬಾಯಿಂದ ಹೊರಡುತ್ತಿದ್ದ ಆ ವಾಕ್ಯಗಳು ಅವರನ್ನು ಸಂಪೂರ್ಣ ಭಕ್ತಿಯ ಭಂಡಾರದಲ್ಲಿ ಮುಳುಗಿಸಿರಬೇಕು.

"ವೆಂಕಣ್ಣ" ಮತ್ತೇ ಕರೆದಳು ಕಾವೇರಕ್ಕ ಈಗ ಅವರಿಗೆ ಅತ್ತಿಗೆಯ ಧ್ವನಿ ಕೇಳಿರಬೇಕು. ಮುಖ ಎತ್ತಿ ಅವರ ಕಡೆ ನೋಡಿದಾಗ ಅವಳ ಮುಖದಲ್ಲಿ ತುಂಬಿದ ವಿಸ್ಮಯ ಗಾಬರಿ ದಿಗ್ಭ್ರಮೆ ಏನೋ ಕೇಳಬೇಕೆಂಬ ತವಕ.

"ಹೇಳ್ರೀ ವೈನಿ ಯಾಕಿಷ್ಟು ಗಾಬರಿ ಆಗಿರಿ?"

"ಅಲ್ಲ ವೆಂಕಣ್ಣ ಇವತ್ತ" ಕಾವೇರಕ್ಕ ಹೇಳುತ್ತಿದ್ದಂತೆ ಓಣಿಯ ಗಂಡಸರ ಗುಂಪು ಅದೇ ಅಂಗಳದಲ್ಲಿ ಬಂದು ನಿಂತಿತು. ಕಾವೇರಕ್ಕ ಮೌನವಾಗಿ ಸುಮ್ಮನೆ ಹುಳು ಹುಳು ದಾಸರನ್ನೊಮ್ಮೆ ಗಂಡಸರ ಗುಂಪನ್ನೊಮ್ಮೆ ನೋಡಿ ಅದೇ ಪಡಸಾಲೆಯ ಗೋಡೆಯ ಬಾಗಿಲಿಗೆ ಹೋಗಿ ಮರೆಯಾಗಿ ನಿಂತಳು.

"ನಮಸ್ಕಾರ ದಾಸರ"

"ಕೂಡ್ರೋಪ್ಪಾ ಏನು ಎಲ್ಲಾರು ಒಟ್ಟಿಗೆ ಬಂದೀರಲ್ಲ? ಯಾವ ಗ್ರಂಥದ ತತ್ವ ತರ್ಕ ಸಿದ್ಧಾಂತ ಎನ$$ರ ಕೇಳಬೇಕೆನು?"

"ಇಲ್ರಿ ತರ್ಕ ಸಿದ್ಧಾಂತ ನಮ್ಮ ತಲಿಗೆ ಹೊಳಿಯೋ ಮಾತಲ್ಲ ಸ್ವಾಮಿ ನಾವು ಎನಂದ್ರು ಪೂಜಾ ಮಡಿ, ಹುಡಿ, ನೈವೆದ್ಯ ಊಟಾ ಬ್ಹಾಳಾಂದ್ರಾ ಪಾರಾಯಣಾ"

"ದೇವರ ಪೂಜಾ ಪಾರಾಯಣಾ ಅಂದ್ರ ಸಣ್ಣ ಮಾತಲ್ಲ ಅಲ್ಲ? ನಾರಾರಣ ಕಾಕಾ ಒಟ್ಟ ಮನಸ್ಸು ದೇವರ ಧ್ಯಾನದಾಗ ನಟ್ರ ಸಾಕು ಅದು ಸುದ್ದೇ ತರ್ಕ, ಸಿದ್ಧಾಂತಕ್ಕಿಂತ ದೊಡ್ಡದ ಹೇಳ್ರೀ ಏನಾಗ್ಭೇಕು?

"ದಾಸರ ಇದು ನಮ್ಮಂಥ ಸಾಮಾನ್ಯ ಜನಕ್ಕ ತಿಳಿಲಾದ ಸಂಗತಿ ಅಲ್ಲ ಇದು ಏನೋ ಎಂತೋ ಅನ್ನೂ ಗಾಬರಿ ದಿಗ್ಭ್ರಮೆ ಸುದ್ದಿ ಆಗೇದ ದಾಸರ ನೀವು ಯಾರು? ನಿಮ್ಮ ಮಹಿಮಾ ಏನು? ನಮ್ಮ ವಿಚಾರಕ್ಕೆ ಎಟುಕದ ಪ್ರಶ್ನೆ ನಮಗೆ ಗೊತ್ತಿದ್ದದು ಇಷ್ಟೇ. ನೀವು ಅಜ್ಞಾನಿಯಾಗಿದ್ರಿ, ತಿರುಪತಿ ವೆಂಕಪ್ಪನ ಅನುಗ್ರಹ ಪಡದ್ರಿ, ಸ್ವತಃ ವೆಂಕಪ್ಪ ನಿಮ್ಮ ನಾಲಿಗೆ ಮ್ಯಾಲೆ ಅಕ್ಷರ ಬಿತ್ತಿದ, ಅದು ಜ್ಞಾನ ಭಂಡಾರ ಆತು, ನೀವು ಭಗವದ್ಭಕ್ತರು ಸಾವಿರಾರು ಕೀರ್ತನಾ ಸುಳಾದೀಗಳು ಉಗಾ ಭೋಗಗಳು, ನಾರಾಯಣ ಪಂಜರ ಎಲ್ಲಾನೂ ಕಣ್ಣಿಗೆ ಕಟ್ಟುಹಂಗೆ ಬರದ್ರಿ, ಅದು ನಮ್ಮ ಕಣ್ಣಿಗೆ ಸ್ಪಷ್ಟ ಕಾಣಿಸೋ ಅಂಥದ್ದು ಸ್ವಾಮಿ. ಆದ್ರ ನಮ್ಮ ಅಂತರಂಗಕ್ಕೆ ಕಾಣಿಸದಂತಾ ವಿಚಿತ್ರ ಇವತ್ತೇ ಕಂಡ್ವಿ"

"ಆಂದ್ರೇನ ಪಾ ನಿಮ್ಮ ಮಾತು ನನಗೆ ಅರ್ಥ ಆಗವಲ್ದು"



"ದಾಸರ ನಿನ್ನೆ ದಿವಸ ಬಂದು ನಿಮ್ಮನ್ನು ರಾಮಣ್ಣನೂ ಊಟಕ್ಕೆ ಕರದಾ, ನಾನು ಊಟಕ್ಕೆ ಕರೆದೆ, ನಾವು ಒಬ್ಬರ ಕರದದ್ದು ಇನ್ನೊಬ್ಬರಿಗೆ ಗೊತ್ತಿರಲಿಲ್ಲ. ಎರಡು ಔತಣಾ ನೀವು ಒಪಗೊಂಡ್ರೀ, ಆದ್ರ ನೀವು ಇಬ್ಬರ ಮನೆಗೂ ಒಂದೇ ವ್ಯಾಳ್ಯಾಕೇ ಊಟಕ್ಕೆ ಬಂದ್ರೀ. ಇವತ್ತೇ ಇದರ ಮರ್ಮ ನಮಗೆ ಗೊತ್ತಾಗವಲ್ದು, ನಮಗೆ ಒಂದು ರೀತಿ ಅಬ್ರಂ ಸುಬ್ರಂ ಆಗೇದೇನೂ ಅಂತ ಅನಸ್ತದ, ಸ್ವಾಮಿ ಆದ್ರ ಇದು ಯಾವ ತತ್ವ ತರ್ಕ ಸಿದ್ಧಾಂತಕ್ಕೂ ಸಿಗದ ವಿಷಯ ಅಲ್ಲ?"

ಪಡಸಾಲೆಯ ಬಾಗಿಲಿಗೆ ನಿಂತ ಅತ್ತಿಗೆಯನ್ನು ಮುಂದೆ ಕೂತ ಗಂಡಸರ ಗುಂಪನ್ನು ಎದುರಿಗೆ ಹಾಕಿದ ವೆಂಕಪ್ಪನ ಚಿತ್ರವನ್ನು ಒಂದು ಗಳಿಗೆ ನೋಡಿದರು ದಾಸರು. ನಂತರ ಒಂದು ನಿಮಿಷ ಕಣ್ಮುಚ್ಚಿ ಅಂತರಂಗದೊಳಗೆ ಇಳಿಯುವಂತೆ ಲೀನವಾದರು. ಅಂತರಂಗದಲ್ಲೇಲ್ಲೋ ಬೆಳಕಿನ ಕಿಡಿ ತೇಜಃಪುಂಜುವಾಗಿ ಕಾಣುತ್ತಿದೆ. ಆ ಕಣ ದೊಡ್ಡದಾಗುತ್ತಾ ತನ್ನಪ್ಪ ವೆಂಕಪ್ಪನ ರೂಪ ಪಡೆಯುತ್ತಿದೆ. ಮಂದಸ್ಮಿತವಾಗಿ ತನ್ನನ್ನು ನೋಡಿ ನಗುತ್ತಿದೆ. ಆ ರೂಪ ಜಗನ್ಮೋಹನ ರೂಪ, ಅಪ್ಪ ಏನು ನಿನ್ನ ಮಹಿಮೆ? ಗಳಿಗೆಯಲ್ಲಿ ಮತ್ತೇ ಅದೇ ರೂಪ ದಾಸರ ರೂಪ ಪಡೆಯುತ್ತಿದೆ. ಮತ್ತೇ ಅದೇ ಮಂದಸ್ಮಿತ ನಗು, ದೇವರೇ ನನ್ನಪ್ಪ ಏನು ಈ ವಿಚಿತ್ರ ಅನುಭವ ಅಂದರೆ ತನ್ನಲ್ಲೇ ಆ ಶ್ರೀ ಹರಿ ಏನೋ ಒಂದು ಶಕ್ತಿ ಕೊಟ್ಟನೇ? ಒಂದೇ ವೇಳೆಗೆ ಎರಡು ರೂಪು ಪಡೆಯುವಂಥ ಶಕ್ತಿ ಎಲ್ಲಿಂದ ಬಂತು? ಇದು ಅವನ ಅನುಗ್ರಹವೇ ಅಲ್ಲವೇ? ತನ್ನ ಕೈಯಿಂದ ಇಂಥಹ ಅನುಭಾವಕ್ಕೆ ನಿಲುಕದ ಸಂದರ್ಭವನ್ನು ನಡೆಸಿದೆನೆ? ಎಲ್ಲದಕ್ಕೂ ಕಾರಣನೂ ಅವನೇ ಅಲ್ಲವೇ? ಅಂತರಂಗದ ಒಳಗಣ್ಣಿನ ದೃಶ್ಯ ಮಾಯವಾಗುತ್ತಾ ದಾಸರು ತಿಳಿಗೊಳದಿಂದ ಮೇಲೆದ್ದಂತೆ"

ಕಣ್ಣು ತೆಗೆದು ಮುಂದೆ ಕೂತ ಹಿರಿಯರನ್ನು ನೋಡಿದರು

ವೆಂಕಣ್ಣ ಏನು ಹೇಳುತ್ತಾನೋ ಎಂದು ಕಾಯುತ್ತಿದ್ದ ಅತ್ತಿಗೆಯನ್ನು ನೋಡಿದರು. ಮತ್ತೆ ಅದೇ ಮಂದಸ್ಮಿತ ನಗುವಿನಲ್ಲಿ ಹೇಳಿದರು.

"ಇದು ಆ ಶ್ರೀ ಹರಿ ಇಚ್ಛಾನಪಾ, ಗೊತ್ತಿಲ್ಲ ಹಿಂಗ ನನ್ನಿಂದ ಯಾಕ ಆಡಿಸಿದಾ ಅಂತ ಆದ್ರ ಇದೂ ಒಂದು ಅವನ ಲೀಲಾನ"

"ಅಂದ್ರೇನ್ರಿ ದಾಸರ ನಮಗೆ ಅರ್ಥ ಆಗವಲ್ದು" ಮುಂದಿನ ಸಾಲು ನೀವು ಒಬ್ಬರಾದ ಮ್ಯಾಲೆ ಒಬ್ಬರು ಔತಣಕ್ಕೆ ಕರೀಲಿಕ್ಕೆ ಬಂದಾಗು ನಾನು ಅದ ಶ್ರೀ ಹರಿ ಧ್ಯಾನದಾಗ ಇದ್ದೆ ಮಧ್ವ ಸಿದ್ಧಾಂತದ ಬಗ್ಗೆ ಭಗವಂತನ ಸ್ವರೂಪದ ಬಗ್ಗೆ ನಾನಾ ತರ್ಕ ಅವ, ನಾನಾ ಸಿದ್ಧಾಂತಗಳು ಅವ, ತಾತ್ವಿಕ ನೆಲೆಗಟ್ಟಿನೊಳಗೆ ಅವೆಲ್ಲ ಅವನ ಸತ್ಯ ಸ್ವರೂಪ ತಿಳಸ್ತಾವ ಅದು ಕಡೀ ಗೋಲಿನ್ಹಂಗ ನನ್ನ ಅತರಂಗ ದೊಳಗ ಕಡೀತಿದ್ದು. ನನಗ ಅವನ ಸ್ವರೂಪ ಬಿಟ್ಟು ಬ್ಯಾರೆ ಏನೂ ಕಾಣಸ್ತಾರಲಿಲ್ಲ ಖರೇ ಹೇಳ್ಬಕಂದ್ರ ಇಡೀ ನೀರಾಗ ಮುಳುಗಿ ಕಣ್ಮುಚ್ಚಿ ಕೂತಾವಗ ಬ್ಯಾರೆ ಪ್ರಪಂಚದ ಅರಿವು ಇಲ್ದಂಗ್ಹ ಇದ್ದೆ ಅವಾಗ ನಾರಾಯಣ ಕಾಕಾ ಬಂದು ಔತಣ ಕೊಟ್ಟದ್ದು ನೀವು ಬಂದು ಔತಣಾ ಕೊಟ್ಟದ್ದು ಅರಿವಿರಲಿಲ್ಲ ಹೂಂ ಅಂದೆ ಅಷ್ಟೆ".

"ಅಂದ್ರ ಏನು ಹೇಳ್ತೀರಿ ದಾಸರ"

"ನಾ ಹೇಳೋದು ಏನದಪಾ ಇಬ್ಬರಿಗೂ ಅಸಮಾಧಾನ ಆಗಬಾರದಂತ ದೇವರು ನನ್ನ ಕಡಿಂದ ಈ ಆಟಾ ಆಡಿಸಿದ ಅಂತ ಕಾಣಸ್ತದಾ, ಇದು ಎಲ್ಲಾ ಅವನ ಆಟ ಅಪ್ಪರಪಾ ನನಗೂ ಬಿಡಿಸಿ ಹೇಳಲಿಕ್ಕೆ ಆಗದಂಥ ಅನುಭವ ಇದು" ಎಂದರು.

ಕೂತ ಒಬ್ಬರಿಗೊಬ್ಬರು ಮುಖ ನೋಡುತ್ತಿದ್ದಾರೆ ಏನು? ಯಾವುದು ಆ ಭಗವಂತನ ಆಟ ದಾಸರು ಎರಡು ರೂಪ ಧರಿಸಿ ಇಬ್ಬರ ಮನೆಗೂ ಊಟಕ್ಕೆ ಬಂದದ್ದು ಯಾವ ತರ್ಕಕ್ಕೆ ಯಾವ ತಾತ್ವಿಕ ನೆಲೆಗೆ ಸಿಗುವಂಥಹದು ಅದನ್ನು ಅನುಭವಿಸಿ ಅರಗಿಸಿಕೊಳ್ಳುವಷ್ಟು ಶಕ್ತಿ ತಮ್ಮಲ್ಲಿಲ್ಲ.

ಗುಂಪಿನಲ್ಲಿ ಒಬ್ಬರು ಹೇಳಿದರು.

"ಖರೇರಿ ದಾಸರ ನೀವು ಬಿಡಿಸಿ ಹೇಳಿದ್ರೂ ತಿಳ್ಕೋಳಲಾರದಷ್ಟು ಅಧಮರು ನಾವು ಇದು ಯಾವ ತರ್ಕಕ್ಕೂ ನಿಲಕಂಗಿಲ್ಲ ಬಿಡ್ರೆ ಬರೇ ಆ ಭಗವಂತನ ಮಾಯಾಕ ಸಿಲುಕಿದ್ದು ದಾಸರ ನೀವು ಮಹಾನುಭಾವರು ಅಷ್ಟೇ ನಮಗೆ ತಿಳಿಯಾದು" ಎಂದು ಎದ್ದು ದಾಸರ ಮುಂದೆ ಉದ್ದಂಡ ನಮಸ್ಕಾರ ಹಾಕಿದರು"

"ಹೌದು ಮಹಾನುಭಾವರು ಮಹಾನುಬಾವರು" ಎನ್ನುತ್ತ ಒಬ್ಬೊಬ್ಬರೇ ಎದ್ದು ನಮಸ್ಕಾರ ಮಾಡಿ ಅಂಗಳದಕಟ್ಟೆ ಇಳಿದು ಹೋಗುತ್ತಿದ್ದಾರೆ ಮತ್ತೊಬ್ಬರು ರಾಮಣ್ಣ ನಾರಾಯಣ ಪುಣ್ಯವೇ ಪುಣ್ಯ ಎಂದು ಹೊಗಳುತ್ತಾ ಹೋಗುತ್ತಿದ್ದಾರೆ. ಎಲ್ಲರೂ ಇಳಿದು ಹೋದ ಮೇಲೆ ಪಡಸಾಲೆ ದೀಪದ ಬೆಳಕಿನಲ್ಲಿ ದಾಸರ ಕಣ್ಣುಗಳು ಆ ಭಗವಂತನ ಅನನ್ಯ ಅಂತಃಕರಣಕ್ಕಾಗಿ ತಲೆ ಬಾಗುತ್ತಿದೆ. ಪಡಸಾಲೆ ಬಾಗಿಲಿಗೆ ನಿಂತ ಕಾವೇರಿಕ್ಕನ ಕಣ್ಣಲ್ಲಿ ಮಾತ್ರ ನೀರು ತುಂಬಿವೆ.

"ವೆಂಕಣ್ಣ ಎಂಥ ಪುಣ್ಯವಂತನೋ ನೀನು ಆದರೆ ನಾವೆಂಥ ಪಾಪಿಗಳು".

"ಯಾಕ ವೈನಿ ನೀವು ಪಾಪಿ ಅಂತ ಯಾರು ಹೇಳ್ತಾರ ನನ್ನ ಈ ವೈರಾಗ್ಯದ ಹಾದಿಗೆ ಹಚ್ಚಿದವ್ರು ನೀವು ಸಣ್ಣವನಿದ್ದಾಗ ಅವ್ವ ಹೋದ್ಲು ಈಗ ಅವ್ವನ ರೂಪದಾಗ ನೀವು ನಿಂತೀರಿ"

"ಹೌದಪಾ ನಿಂತೀವಿ ಆದ್ರ ನಿನಗೆ ನಮಸ್ಕಾರ ಮಾಡಿ ಪುಣ್ಯವಂತರಾಗೋ ಯೋಗ್ಯತಾ ನಮಗ ಸಿಗಲಿಲ್ಲ. ಎಲ್ಲಾರ ಕೈಯಾಗ ಸಿಕ್ಕ ಬೆಳಕು ನಮ್ಮ ಕೈಯಾಗ ಸಿಗವಲ್ದಲ್ಲಾ ಅಂತ ಜೀವ ಖಜಿಲ್ ಅನಸ್ತದ" ಎಂದು ಕಣ್ಣೊರಿಸಿಕೊಂಡಳು ಕಾವೇರಕ್ಕ.

"ಇಲ್ಲ ವೈನಿ ಇದು ನಿಮ್ಮ ಉಡೇದಾಗಿನ ಬೆಳಕು ಕೈಯಾಗ ಹಿಡಿಯೂ ಆಕಾಂಕ್ಷಾ ಯಾಕ? ಜೀವ ಖಜೀಲ್ ಯಾಕ ಮಾಡ್ಕೋತೀರಿ ಬರ್‍ರಿ ಕೂಡ್ರಿ ಅಣ್ಣ ಬರೋತನಕಾ ಈ ಕೀರ್ತನಾ ಅಂದು ತೋರಿಸ್ತೀನಿ" ಎಂದು ತಾವು ಬರೆದಿದ್ದ ಕೀರ್ತನೆಗಳನ್ನು ಹಾಡುತ್ತಾ ಅದರಲ್ಲೆ ತನ್ಮಯರಾದರು.

ಮರುದಿನ ಬೆಳಕು ಹರಿಯುವುದರಲ್ಲಿ ಓಣಿಯಿಂದ ಓಣಿಗೆ ಊರಿನಿಂದ ಊರಿಗೆ ಹಿಂದಿನ ದಿನ ನಡೆದು ಹೋದ ಪವಾಡ ಸದೃಶ ಘಟನೆ ಎಲ್ಲ ಕಡೆ ಕಿವಿ ಮಾತಾಗಿ ಊರಿನವರ ಮನೆ ಮಾತಾಯ್ತು.



ಬಾಗಲಕೋಟೆಯ ಪ್ರಸನ್ನ ವೆಂಕಟ ದಾಸರಂತೆ ಅವರ ಎಷ್ಟು ಕೀರ್ತನೆಗಳನ್ನು ಕೇಳಿದ್ದೇವಲ್ಲ ಆದರೆ ಇಂಥಹ ಮಹಾತ್ಮರೆಂದು ಗೊತ್ತಿರಲಿಲ್ಲ ಎನ್ನುವಂತೆ ಜನ ಅಕ್ಕ ಪಕ್ಕದ ಊರಿನಿಂದ ಭೇಟ್ಟಿಗಾಗಿ ಬರತೊಡಗಿದ್ದರು.

ಸತ್ಯಸ್ವರೂಪದ ಹಿಂದಿದ್ದ ಛಾಯೆಯಂತೆ, ಆ ಛಾಯೆಯ ಮೂಲವನ್ನು ಹುಡುಕುವಂತೆ ಅಗೋಚರವಾದದ್ದನ್ನು ಗೋಚರಿಸಿಕೊಂಡು ಪುಣ್ಯ ಪಡೆಯುವುಂತೆ, ಜನ ಆಗಾಗ ಇವರನ್ನು ಹುಡುಕಿಕೊಂಡು ಬರುತ್ತಿದ್ದರು.

ಪುಣ್ಯಪುರುಷರ ದರ್ಶನ ವೆಂದರೆ ಸಾಮಾನ್ಯವೇ? ಅದು ಇಡೀ ಭಕ್ತಿ ಪಂಥವನ್ನು ತಮ್ಮ ಕೀರ್ತನೆಗಳಲ್ಲಿ ಭಾವ ತುಂಬಿ ಜನರ ಕರ್ಣಗಳಿಗೆ ಆನಂದ ನೀಡುವಂಥ ಸಾಹಿತ್ಯದ ಸಮೃದ್ಧಿಯ ಸೃಷ್ಟಿಗೆ ಕಾರಣನಾದವರು ಅವರನ್ನು ಹುಡುಕಿಕೊಂಡು ಬಂದು ಅವರಿಗೆ ನಮಸ್ಕರಿಸಿ ಉದ್ಧಾರವಾದೆವೆಂದು ತಿಳಿಯುತ್ತಿತ್ತು ಜನ, ಅವರ ಹಾಡುಗಳ ಭಕ್ತಿ ಭಾವ ಪರವಶವತೆಯಲ್ಲಿ ಮಿಂದು ಹೋಗುತ್ತಿದ್ದರು.

ದಾಸರ ಬಾಯಿಂದ ಕೇಳಬೇಕು ನಾರಾಯಣ ಪಂಜರನವನ್ನು ಕೊರವಂಜಿ ಹಾಡುಗಳನ್ನು ಶ್ರೀ ಕೃಷ್ಣ ಪಾರಿಜಾತವನ್ನು, ಅವೆಲ್ಲ ಕೇಳುಗರ ಹೃದಯಕ್ಕಿಳಿದು ಭಕ್ತಿ ತರಂಗಗಳನ್ನು ಎಬ್ಬಿಸುತ್ತಿದ್ದವು ಇದು ಬಾಗಲಕೋಟೆಗೆ ಮಾತ್ರ ಸೀಮಿತವಾಗಿರಲಿಲ್ಲ, ದಾಸರು ಹತ್ತಿರದ ಊರುಗಳಿಗೆ ಸಂಚಾರಮಾಡುವುದುಂಟು, ಹತ್ತಿರದ ದಕ್ಷಿಣ ಕಾಶಿ ಎನಿಸಿದ ಬಾದಾಮಿಗೆ ಹೋಗಿ ಕೆಲವು ಕಾಲ ಇರುವುದುಂಟು. ಸುತ್ತಲಿನ ಊರುಗಳಾದ ಬಂಕಾಪುರ, ತಡಸ ಕಲಘಟಗಿ ಶಿರೂರು ಎಂದ ಸಂಚಾರ ಮಾಡಿ ಬರುತ್ತಿದ್ದರು. ಹಾಗೇ ಸಂಚರಿಸಿ ಬರುವಾಗಲೆಲ್ಲಾ ದಾಸರಿಂದ ಯಾವುದುದಾರೊಂದು ವಿಶೇಷ ಘಟನೆಗಳು ಸನ್ನಿವೇಶಗಳು ಘಟಿಸುವುದುಂಟು.

ಊರಿಂದ ಊರಿಗೆ ಸಂಚಾರ ಮಾಡುತ್ತಾ ಹೊರಟಾಗ ಒಮ್ಮೊಮ್ಮೆ ಕಾಡು, ಅಡವಿಗಳ ನಡುವೆ ಹೋಗಬೇಕಾಗುತ್ತಿತ್ತು. ಸುತ್ತಲೂ ದಟ್ಟವಾದ ಅರಣ್ಯ ಎಲ್ಲಿಯೂ ಒಂದು ಕಡೆಯಿಂದ ಕಾಡು ಪ್ರಾಣಿಗಳ ವಿಚಿತ್ರ ರೀತಿಯ ಕೂಗುಗಳು ಜೊತೆಯಲ್ಲಿದ್ದವರು ಹೆದರಿ ಕಂಗಲಾಗಿ ಸುತ್ತಲೂ ನೋಡುತ್ತಾ ಹೋಗುತ್ತಿದ್ದರೆ ದಾಸರು ಮಾತ್ರ ನಿರ್ವಿಕಾರವಾಗಿ ಧೈರ್ಯದಿಂದ ದೇವರ ಪೆಟ್ಟಿಗೆಯನ್ನು ಹೆಗಲಲ್ಲಿ ಹೊತ್ತುಕೊಂಡು ನಡೆದಿದ್ದರು. ಜೊತೆ ನಿನ್ನಪ್ಪ ಆ ಶ್ರೀ ಹರಿ ಇದ್ದಾಗ ಯಾತರ ಹೆದರಿಕೆ ಯಾವುದರ ಭಯ ಎನಿಸಿರಬೇಕು. ಅರ್ಧಮೈಲಿ ಆ ಅಡವಿಯಲ್ಲಿ ನಡೆದಿರಬಹುದು ಘರ್ಜಿಸುತ್ತ ಎದುರಿಗೆ ಬಂದು ನಿಂತಿದೆಯಲ್ಲ ಒಂದು ಹೆಬ್ಬುಲಿ ಕಣ್ಣಲ್ಲಿ ಮಿಂಚುವ ಕ್ರೌರ್ಯ ಮಾನವ ಜಂತುಗಳು ಸಿಕ್ಕಿವೆ ಏಕೆ ಬಿಡಬೇಕು ಎಂಬ ಕ್ರೂರ ಹಂಬಲ ದಾಸರ ಜೊತೆಯಲ್ಲಿದ್ದವರು ನೋಡುತ್ತಿದ್ದಾರೆ ಹುಲಿಯನ್ನು ಕಂಡು ದಾಸರೆ ನಾವಿನ್ನು ಜೀವಸಹಿತ ಹಿಂತಿರುಗಲಾರೆವು" ಎನ್ನುತ್ತಿದ್ದಾರೆ "ಹುಚ್ಚಪ್ಪಾ ಗೋಳ್ರಾ ಜೀವದ ಮೋಹ ಬಿಟ್ಟು ನಂಬಬೇಕ ಆ ಭಗವಂತನನ್ನ" ಎನ್ನುತ್ತ ಮುಂದೆ ಭಯಂಕರವಾಗಿ ನಿಂತಿದ್ದ ಹುಲಿಯ ಮುಂದೆ ಬಂದು ನಿಂತು ಏನಪ್ಪಾ ಹುಲಿರಾಯ ಜೀವಬೇಟೆ ಬೇಕೆ ನಿನಗ ಎಂದು ತಮ್ಮ ಹೆಗಲ ಮೇಲಿದ್ದ ದೇವರ ಪೆಟ್ಟಿಗೆಯನ್ನು ಅದರ ಬೆನ್ನ ಮೇಲಿಟ್ಟು ಯಾವಾಗಲೂ ತಮ್ಮ ಜೊತೆಯಲ್ಲಿ ಇಟ್ಟುಕೊಂಡಿದ್ದ ತುಳಸೀಗಿರಿಯಪ್ಪನ ಅಂಗಾರವನ್ನು ಅದರ ಹಣೆಗೆ ಹಚ್ಚಿ

ನಡೆಯಪ್ಪಾ ಮುಂದೆ ನಡಿ, ಆಗಲಿ ನಿನಗೂ ಆ ಶ್ರೀ ಹರಿ ಸೇವೆ ಎಂದು ಬೆನ್ನು ಚಪ್ಪರಿಸಿದಾಗ ಹುಲಿ ಸಾಧು ಪ್ರಾಣಿಯಂತೆ ದೇವರ ಪೆಟ್ಟಿಗೆಯನ್ನು ಬೆನ್ನ ಮೇಲಿಟ್ಟು ಕೊಂಡು ಮುಂದೆ ನಡೆಯಿತಂತೆ ಮುಂದಿನೂರು ಬಂದಾಗ ದಾಸರು ಆ ದೇವರ ಪೆಟ್ಟಿಗೆಯನ್ನು ತಮ್ಮ ಹೆಗಲಲ್ಲಿ ಕೊಂಡು ಮತ್ತೆ ಅದರ ಬೆನ್ನು ತಟ್ಟಿ ಇನ್ನು ಮುಂದೆ ಹುಲಿಯಂತಾಗದೆ ಹಸುವಿನ ಗುಣ ಹೊಂದು" ಎಂದು ಹೇಳಿ ಕಳುಹಿಸಿದರಂತೆ, ಎಂಥೆಂಥಹ ಕಷ್ಟಗಳು ಸಮಸ್ಯೆಗಳು ಅವರು ಅಂಗಾರ ಹಚ್ಚಿದೊಡನೆ ಪರಿಹಾರವಾಗುತ್ತಿದ್ದರಿಂದ ಅವರಿಗೆ ಅಂಗಾರದ ದಾಸರೆಂದೆ ಕರೆಯುತ್ತಿದ್ದರು. ಪ್ರಸನ್ನ ವೆಂಕಟ ದಾಸರ ಕೀರ್ತನೆಗಳಲ್ಲಿ ತುಂಬಿದ ಸಾಹಿತ್ಯ ಭಂಡಾರವೆ ಒಂದೊಂದು ಸಲ ವಿಸ್ಮಯ ತುರುವಂಥದು ಶಬ್ಧಗಳ ಜೋಡಣೆಯಲ್ಲಿ ಭಕ್ತಿ ಭಂಡಾರವೊಂದೆ ಅಲ್ಲ ಅದ್ಭುತ ವೆನಿಸುವಂಥಹ ಪದಗಳು ತಮ್ಮದೇ ಆದ ರೀತಿಯಲ್ಲಿ ಕೋಲಾಟದ ನಾದದಂತೆ ಸ್ಫುರಿಸುತ್ತಿದ್ದವು ಇದು ಸ್ಪಷ್ಟವಾಗಿ ಕಂಡದ್ದು ಒಂದು ವಿಶಿಷ್ಟ ಸಂದರ್ಭದಲ್ಲಿ ಒಂದು ಬಾರಿ ಶ್ರೀಮಂತ ಪೇಶ್ವೆಯವರು ಬಾದಾಮಿಯಲ್ಲಿ ಬಿಡಾರ ಮಾಡಿದ್ದರು. ಸಹಜವಾಗಿ ಊರಿನ ವಿಶೇಷ ಸುದ್ದಿಗಳು ಅವರ ಕಿವಿಗೆ ಬಿದ್ದಾಗ ಅದರಲ್ಲಿ ಬಾದಾಮಿಯಲ್ಲಿ ವಾಸವಾಗಿರುವ ಪ್ರಸನ್ನ ವೆಂಕಟದಾಸರ ವಿಶೇಷ. ವೈರಾಗ್ಯ ಅವರ ಮಹಿಮೆ ಪವಾಡಗಳು ಅವರ ಅಗಾಧವಾದ ಪಾಂಡಿತ್ಯ ಅವರು ಹರಿಯನ್ನು ಒಲಿಸಿಕೊಂಡ ರೀತಿ ಪೇಶ್ವೆಯವರ ಕಿವಿಗೆ ಬಿತ್ತು. ಸಹಜವಾಗಿಯೇ ದಾಸರ ಬಗ್ಗೆ ಕೂತೂಹಲ ಹುಟ್ಟಿತು. ಅಲ್ಲದೆ ಅಂಥಹ ಮಹಿಮರ ದರ್ಶನವನ್ನು ಪಡೆಯಬೇಕೆಂಬ ಹಂಬಲವಾದಾಗ ತಮ್ಮ ಆಪ್ತವಾಗಿದ್ದ ವ್ಯಕ್ತಿಯನ್ನು ಅವರನ್ನು ಕರೆತರಲು ಕಳುಹಿಸಿದೆ ಅವರ ಖಾಸಗಿ ಆಪ್ತವಾಗಿದ್ದ ವ್ಯಕ್ತಿ ತನ್ನದೆ ಆದ ವ್ಯಕ್ತಿಗತ ಅಹಂಕಾರದಿಂದ ಬಂದು ದಾಸರನ್ನು ಭೇಟಿಯಾದ ಹಾಗೂ ಶ್ರೀಮಂತ ಪೇಶ್ವೆಯವರು ತಮ್ಮನ್ನು ಕಾಣಲು ಕೂತೂಹಲ ವಾಗಿದ್ದರೆಂದು ಹೇಳುವಾಗ ಅವನು ಪದೇ ಪದೇ ತನ್ನ ಕಿವಿಯ ಸಂದಿಯಲ್ಲಿಕೊಂಡಿದ್ದ ಅಪರೂಪದ ಲೇಖನಿಯನ್ನು ಮುಟ್ಟಿಕೊಳ್ಳುತ್ತಿದ್ದ ದಾಸರು ಕೂಡ ಕೂತೂಹಲದಿಂದ "ಸ್ವಾಮಿ ಅದೇನು ನಿಮ್ಮ ಕಿವಿಯ ಸಂಧಿಯಲ್ಲಿ ಅಲ್ಲದೆ ಪದೇ ಪದೇ ಅದನ್ನು ಮುಟ್ಟಿಕೊಳ್ಳುವ ಉದ್ದೇಶವೇನು" ಎಂದಾಗ ಅವರು ಅಹಂಕಾರದಿಂದ "ಸ್ವಾಮಿ ಇದು ಸಾಮಾನ್ಯ ಲೇಖನಿಯಲ್ಲ ನನ್ನ ಅಪರೂಪದ ಬರಹಕ್ಕೆ ಸಾಧನ" ಅಂಥಿಂಥ ಬರಹವಲ್ಲ ನನ್ನದು. ಎಂಥಹ ಕಷ್ಟಕರವಾದ ಬರಹವಾದರೂ ಶೀಘ್ರದಲ್ಲಿ ಸುಂದರವಾಗಿ ಬರೆಯುತ್ತೇನೆಂದು ನನ್ನ ಬರಹಮೆಚ್ಚಿ ಸ್ವತಃ ಪೇಶ್ವೆಯವರೇ ಅನುಗ್ರಹಿಸಿದ ಲೇಖನಿ ಇದು, ಅಲ್ಲದೆ ಆಸುಪಾಸಿನಲ್ಲಿ ನನ್ನಷ್ಟು ಶೀಘ್ರವಾಗಿ ಬರೆಯುವ ಬರಹಗಾರ ನಿಮಗೆ ಸಿಗಲಾರ ಎಂದಾಗ ದಾಸರು ನಕ್ಕು " ಹೌದೇ ಸ್ವಾಮಿ ಸಂತೋಷ ಹಾಗಾದರೇ ನನ್ನದೊಂದು ಬರಹವಿದೆ ನಾನು ಹೇಳುತ್ತೇನೆ. ತಾವು ಬರೆದುಕೊಡಲು ಸಾಧ್ಯವೇ?" ಎಂದಾಗ ಆತ ಅಹಂನಿಂದ ಅದೇನು ಮಹಾಕೆಲಸ ಸ್ವಾಮಿ ಹೇಳಿ ಎಂದಾಗ ದಾಸರು ತಾವು ರಚಿಸಿದ ಪದ್ಯವನ್ನು ಹೇಳಲು ಸುರುಮಾಡಿದರು.

"ಎಂಥಾ ಶ್ರೀಮಂತಾನಂತಾನು ಶ್ರೀಕಾಂತೆಯ ಕಾಂತತಾ ॥ಪ॥
ಬಮ್ಮನು ಹೆಮ್ಮಗ – ಮೊಮ್ಮ ಮೃಡಮ್ಮರಿ
ಮೊಮ್ಮೆಶಚಮ್ಮಸ್ವರಮ್ಮ ಪರಮ್ಮ
ಅಮ್ಮರ ಸಮ್ಮೋಹ ನಿಮ್ಮಣುಗಮ್ಮರು।



ನಮ್ಮೋನಮ್ಮ ಪರಮ್ಮ ಮಹಿಮ್ಮ ॥೧॥
ಅಂಗರುಹಂಗಳು ಅಂಗನಂತ ಗಡ
ಮಂಗಳ ಪಾಂಗ ವಿಶ್ವಂಗಳ ಮಂಗುಳ । ಶಿಂಗರದಂಗುಟ ಸಂಗದ–ಗಂಗಜ
ಗಂಗಳಘಂಗಳ ಹಿಂಗಿಪಳಾಂಗಾ ॥೨॥

ದಾಸರು ಹೇಳುತ್ತಿದ್ದರೆ ದಿಗ್ಭ್ರಮೆಯಿಂದ ಕೇಳುತ್ತಿದ್ದಾನೆ ಕರ್ಣಕ್ಕೆ ಅವರು ಹೇಳುತ್ತಿದ್ದ ಶಬ್ಧಗಳ ಹಿಂಡನ್ನು ಲೇಖನಿಯಲ್ಲಿ ಹಿಡಿದಿಡಲು ಸಾಧ್ಯವಾಗುತ್ತಿಲ್ಲ ಅವನಿಗೆ, ಆಹಾ ಎಂಥಹ ಪದ ಸಂಪತ್ತು ಶೀಘ್ರ ಬರಹಗಾರ ಎಂದು ಹಮ್ಮಿನಿಂದ ಹೇಳಿದ ಗತ್ತೆಲ್ಲ ಕರಗಿ ಆತ ಮುಖ ಕೆಳಗೆ ಹಾಕಿ ಸೋತವನಂತೆ ಅವರ ಮುಂದೆ ಸ್ರಾಷ್ಟಾಂಗವೆರಗಿದ, ದಾಸರು ಕರುಣೆಯಿಂದ ಅವನತ್ತ "ವಿದ್ಯೆ ಎಷ್ಟಿದ್ದರೂ ಅದು ಮನುಷ್ಯನಿಗೆ ಅಹಂಕಾರ ತರಬಾರದಲ್ಲವೇ ಸ್ವಾಮಿ? ಅದು ದೈವ ಸಂಪತ್ತು" ಎಂದರು ಬಂದ ಕರಣಿಕ ಪೇಶ್ವೆಯವರು ನಿರೂಪವನ್ನು ಮುಟ್ಟಿಸಿದ. ದಾಸರಿಗೆ ಪೇಶ್ವೆಯವರನ್ನು ಆ ಸಂದರ್ಭದಲ್ಲಿ ಭೇಟಿಯಾಗಲು ಸಾಧ್ಯವಾಗದಿದ್ದಾಗ ಪೇಶ್ವೆಯವರೇ ದಾಸರನ್ನು ಹುಡುಕಿಕೊಂಡು ಬಂದು ಭೇಟಿ ಮಾಡಿದಾಗ ದಾಸರ ದೈವಿಕಳೆ ಅವರ ವ್ಯಕ್ತಿತ್ವ ಅವರು ಧ್ಯಾನದಲ್ಲಿದ್ದಾಗ ಅವರು ಹರಿಯನ್ನು ಭಜಿಸುವ ರೀತಿ ಕಂಡು ಮಹಾ ಮಹಿಮರೇ "ನೀವು ನಮ್ಮ ಕರ್ನಾಕಟದ ಸಂಪತ್ತು" ಎಂದು ಕೈಮುಗಿದು ಅವರಿಗೆ ಬಾದಾಮಿಯಲ್ಲಿ ಮನೆಗಳನ್ನು ನೆಲವನ್ನು ದಾನವಾಗಿ ಕೊಟ್ಟು ಕೈಮುಗಿದು ಹೋದರಂತೆ.

ಅತಂರಂಗದಲಿ ಸತ್ಯದರ್ಶನ ಮಾಡಿಕೊಂಡಿದ್ದ ದಾಸರಿಗೆ ಅವರು ನುಡಿದ ಮಾತುಗಳು ಕೂಡ ಸತ್ಯವಾಗುತ್ತಿದ್ದವು ಸುತ್ತ ಮುತ್ತಲಿನವರ ಕಷ್ಟಗಳನ್ನು ನೋಡಿ "ಚಿಂತೆ ಮಾಡಬ್ಯಾಡ್ರಿ ನಿಮ್ಮ ಕಷ್ಟ ಇನ್ನೊಂದು ಗಳಿಗೆ ಇರಂಗಿಲ್ಲ ಅಂದ್ರೆ "ಅವರ ಕಷ್ಟಗಳು ಮಂಜಿನಂತೆ ಕರಗಿ ಹೋಗುತ್ತಿದ್ದವು"

ಒಂದು ಸಂದರ್ಭದ ಮಾತಿರಬಹುದು ದಾಸರ ಹೊಲವನ್ನು ಸಾಗುವಳಿ ಮಾಡುತ್ತಿದ್ದ ರೈತ ಪ್ರತಿವರ್ಷದಂತೆ ಬೆಳೆದ ಫಸಲಿನ ಭಾಗ ಕೊಡಲಿಲ್ಲ ದಾಸರು ಕೇಳಲಿಲ್ಲ. ಬಡರೈತ ಅವರು ಕೊಟ್ಟದನ್ನಷ್ಟೆ ತೆಗೆದುಕೊಂಡು ದೇವರಿಗೆ ಅರ್ಪಿತ ಎನ್ನುವ ಕಾರುಣ್ಯದವರು ಆದರೆ ಚೆನ್ನಾಗಿ ಫಸಲು ಬಂದರೂ ಆ ರೈತ ದುರಾಸೆಯಿಂದ ಫಸಲನ್ನು ಕೊಡಬಾರದೆಂದೆ ಅವರ ಹತ್ತಿರ ಬಂದು "ಸ್ವಾಮಿ ಈ ವರ್ಷದಾಗಹೊಲದಾಗ ಬೆಳೇನೆ ಬಂದಲ್ರಿಯಪ್ಪಾ ಬೆಳೀನ ಇಲ್ಲದ ಮ್ಯಾಲೆ ಏನು ಕೊಡ್ಲಿ ನಿಮಗೆ" ಎಂದನಂತೆ ದಾಸರು ಎಷ್ಟೆಂದರೂ ಅಪರೋಕ್ಷ ಜ್ಞಾನಿಗಳು ಬೆಳೆ ಬಂದರೂ ದುರಾಶೆಯಿಂದ ಸುಳ್ಳು ಹೇಳುತ್ತಿದ್ದಾನೆ. ಎಂದು ಗೊತ್ತಿದ್ದರೂ "ಆತಪಾ ಹಂಗ ಆಗ್ಲಿ" ಎಂದರು ಮುಂದಿನ ವರ್ಷಗಳು ಸಹಿತ ರೈತನ ಹೊಲದಲ್ಲಿ ಏನೂ ಬೆಳೆಯದೆ ಬೆಳೆದು ಪೈರು ಒಣಗಿ ಫಸಲು ಕೈಗೆ ಹತ್ತಲಿಲ್ಲ–ಶ್ರಮಪಟ್ಟು ದುಡಿದಿದ್ದು ಕೈಗೆ ಹತ್ತದೆ ಹೊಟ್ಟೆ ತುಂಬ ಮುಷ್ಠಿ ಕಾಳು ಸಿಗಲಿಲ್ಲ ರೈತನಿಗೆ ತನ್ನ ಮೋಸದ ದುರಾಶೆಯ ಅರಿವಾಗಿ ಅಂಥ ಮಹಾತ್ಮರಿಗೆ ತಾವು ಸುಳ್ಳುಹೇಳಿದೇನಲ್ಲ" ಬೆಳೆ ಬಂದಿಲ್ಲ ಅಂದರೆ ಹಂಗೆ ಆಗ್ಲಿ" ಅಂದ್ರು ಅವರು ನಾಲಿಗೆಯಲ್ಲಿ ಸತ್ಯವುಳ್ಳ ಮಹಾತ್ಮರು ಎಂದು ದುಃಖಿಸುತ್ತಾ ಬಂದು ಅವರಿಗೆ ಸಾಷ್ಟಾಂಗ ವೆರಗಿ "ಸ್ವಾಮಿ ನಂದು ತೆಪ್ಪಾತ್ರಿಯಪ್ಪಾ ಹೊಟ್ಯಾಗ ಹಾಕ್ರೋರೀ ಅಷ್ಟು

ಹೊಲದಾಗ ಫಸಲು ಬೆಳೀಲಿ ಅಂತ ಮಾತಾಡ್ರಿಯಪಾ" ಎಂದಾಗ ಕಣ್ಣೀರು ತುಂಬಿ ನಿಂತಾಗ "ಆತಪಾ ಹಂಗ ಆಗಲೀ ಹೋಗು ಹೊಲದ ತುಂಬ ಫಸಲು ಬೆಳೀಲಿ" ಎಂದಾಗ ಮರುವರ್ಷ ಹೊಲಗಳು ಫಸಲಿನಿಂದ ತುಂಬಿ ದಾಸರಿಗೆ ಕೊಡುವ ಫಸಲನ್ನು ಕೊಟ್ಟ ರೈತ. ದಾಸರು ನುಡಿದಿದ್ದು ಖರೇ ಆಗುತ್ತಿದ್ದರಿಂದ ಅವರಿಗೆ " ಖರೇ ಬಾಯಿ ದಾಸರೆಂದೆ, ಹೆಸರು ಬಿದ್ದಿತ್ತು. ದಿನಗಳು ಉರುಳುತ್ತಿದ್ದವು. ದಾಸರ ಬದುಕು ಎಂದಿನಂತೆ ಶ್ರೀ ಹರಿಯ ಸೇವೆಯಲ್ಲಿ ನಡೆಯುತ್ತಿತ್ತು. ಅವರ ಮನಸ್ಸಿನಲ್ಲಿ ಏನೋ ಒಂದು ಭಾವನೆ ಅಗಾಧವಾದ ಆಶೆ ಅಂಕುರಿಸಿತ್ತು. ಯಾಕೋ ತನ್ನಪ್ಪ ಕೃಷ್ಣ ಹುಟ್ಟಿ, ಬೆಳೆದು ಆಡಿದ ನೆಲ, ಮಣ್ಣು, ಅವನ ಬಾಲಲೀಲೆಗಳನ್ನು ಕಂಡು ಅವನು ಹೆಜ್ಜೆ ಇಟ್ಟು ಓಡಾಡಿದ ಪವಿತ್ರ ನೆಲ ಮಥುರೆ ಗೋಕುಲ ದ್ವಾರಕೆ ಇವುಗಳನ್ನು ನೋಡುವ ಹಂಬಲ ಹೆಚ್ಚಾಗುತ್ತಿತ್ತು. ಹೇಗಿದ್ದೀತು? ಆ ನನ್ನ ತುಂಟ ಕೃಷ್ಣ ಹುಟ್ಟಿ ಆಡಿ ಬೆಳೆದ ನಾಡು ಅವನು ಕುಣಿದಾಡಿದ ನಲಿದ ಸಾನಿಧ್ಯವಲ್ಲವೇ ಅದು? ಹೋಗಲೇಬೇಕೆಂಬ ಮನಸ್ಸಿನ ಹಾತೊರೆಯುವಿಕೆಗೆ ದಾಸರು ಒಂದು ಮುಂಜಾನೆ ಹೆಗಲಿಗೆ ತಂಬೂರಿ ಹಾಕಿ ಎದ್ದೆ ಬಿಟ್ಟಿದ್ದರು. ದೂರದ ಊರು ಎನ್ನುವುದು ಅಂತರದ ಲೆಕ್ಕದಲ್ಲಿ ಇರಬಹುದು ಆದರೆ ಅವನೆಡೆಗೆ ಕರೆದೊಯ್ಯುವ ಈ ಮನಸ್ಸಿನ ಹಂಬಲಕ್ಕೆ ದೂರವೆಲ್ಲಿಯದು? ದಿನಗಳ ಮೇಲೆ ದಿನಗಳು ಪ್ರಯಾಣ ಮಾಡಿ ದಾಸರು ಮಥುರೆ ಬೃಂದಾವನ ಗೋಕುಲ ದ್ವಾರಕೆ "ಎಂದು ಅವುಗಳ ಸಾನಿಧ್ಯದಲ್ಲಿ ದ್ವಾಪರ ಯುಗಕ್ಕೆ ಹೋದಂತೆನಿಸಿತ್ತು ಅಷ್ಟು ಅನನ್ಯತೆ ತನ್ಮಯತೆ, ಭಾವ ತುಂಬಿಕೊಂಡಿತ್ತು. ಮಥುರೆ ನೋಡುತ್ತಿದ್ದಂತೆ ಅವರಿಗೆ ಕೃಷ್ಣನ ಜನನ ದೇವಕಿ ವಸುದೇವರ ಸಂಕೋಲೆಗಳಲ್ಲಿ ಕಳಚಿ ವಸುದೇವ ಹಸುಳೆ ಕೃಷನನ್ನು ಬುಟ್ಟಿಯಲ್ಲಿರಿಸಿ ಕೊಂಡು ಯುಮುನೆ ದಾಟಿ ಗೋಕುಲಕ್ಕೆ ಹೊರಟು ಯಶೋಧೆಯ ಪಕ್ಕದಲ್ಲಿ ಮಲಗಿಸಿ ಅವಳಿಗೆ ಹುಟ್ಟಿದ ಹೆಣ್ಣು ಕೂಸನ್ನು ತೆಗೆದುಕೊಂಡು ಬರುವುದು.

ಯಶೋಧೆ ಮಡಿಲಲ್ಲಿ ಬೆಳೆಯುತ್ತಾ ಬೆಳೆಯುತ್ತಾ ಸುರುವಾಗುತ್ತಿದೆ ಕೃಷ್ಣನ ಬಾಲಲೀಲೆಗಳು ಇಡೀ ಬಾಗವತ ಕಣ್ಮುಂದೆ ಬಂದು ನಿಲ್ಲುತ್ತಿದೆ. ಯಶೋಧೆಯ ಮಡಿಲ ಜೀವ ದ್ರವ್ಯವಾಗಿ ಇದ್ದವನಲ್ಲವೇ? ಏನು ಅವನ ತುಂಟಾಟ ಗೆಳೆಯೇರ ಹಿಂಡು, ಕೊಳಲು ನಾದ ತಮ್ಮ ಮನೆಯ ಬೆಣ್ಣೆ ಕದ್ದು ತಂದನೆಂದು ಗೋಪಿಕೆಯ ಅವಹಾಲು. ಕಾಳಿಂಗಸರ್ಪದ ಮೇಲೆ ನರ್ತಿಸಿದ ಆ ಪುಟ್ಟ ಪಾದಗಳು, ನೋಡುತ್ತೆ ನೋಡುತ್ತಾ ಕಾಲ ಹಿಂದೆ ಸರಿಯುತ್ತದೆಯೋ ಏನೋ? ಎಷ್ಟು ಸ್ಪಷ್ಟವಾಗಿ ಅಂದಿನ ಚಿತ್ರಣಗಳು ಅವರ ಮುಂದೆ ತೇಲಿ ಬರುತ್ತಿವೆ. ಯುಗದ ಇತಿಹಾಸ ಮತ್ತೆ ತಿರುವು ಹಾಕಿದಂತೆ ಅವನ ತುಂಟಾಟ ತಡೆಯದೆ ಒರಳಿಗೆ ಅವನನ್ನು ಕಟ್ಟಿಹಾಕುವ ಯಶೋಧೆ ಎಂತಹ ಪರಿಹಾಸ ತುಂಬಿದೆ ಮುದ್ದು ಮೊಗದಲ್ಲಿ. ತನ್ನ ಪುಟ್ಟ ಎರಡು ಕೈಗಳನ್ನು ಮುಂದೆ ಚಾಚಿ ನೀರಿನಿಂದ ಒದ್ದೆಯಾದ ಕಣ್ಣುಗಳಿಂದ ಅವ್ವನನ್ನು ನೋಡುತ್ತಾ ಹೇಳುತ್ತಿದ್ದಾನೆ ತನ್ನ ಬಾಲ ಭಾಷೆಯಲ್ಲಿ

ಎತ್ತೋದೆಯಮ್ಮಾ ನಂಗನೆತ್ತಿಕೋ ಅಮ್ಮ ಬಾಲ।
ವತ್ತು ಅತ್ತು ಬಂದೀನಿ ಇತ್ತ ಅಮ್ಮಿ ತಿಂದಿನೆ ॥ಪ॥

ತುಟಿ ಬಾಯಿ ವಂಗ್ಯಾವೆ ಬಿತಿ ಆವು ವಾಕತ್ತಿ ಬರ್ತಾವೆ
ಆಲೆ ಆವು ಉಪ್ಪು ಕಾಯಿ ಅಮ್ಮ ಮಮ್ಮೊಲ್ಲೆ



ಉತ್ತತ್ತಿ ಬೆನ್ನಿ ತಿಂದೇನೆ ॥೧॥

ಕಲ್ಲಕಿತ್ನ ಎಂತಾಡೆ ಬಂಗಾಡ ಬುಲ್ಲಿ ಬೆಲ್ಲ ತಿಂತಾಡೆ
ಗಲ್ಲ ಕತ್ತಿ ಕತ್ತಿ ಉಮ್ಮ ಹಲ್ಲು ನತ್ತು ತಾವೆ
ಕೊಲ್ಲ ಬಾಲಗೆ ದೊತ್ತ ಗೊಲ್ಲ ತೆಲನಾ॥
ಕೂಂಚಿಗಮ್ಮಿ ಕೊಬ್ಯಾಲೆ ನಂಗಂಗಚ್ಚತಾನೆ ಅವನಾಲೆ
ಪಾಂಚನ್ನ ವೇಂಕತ ಕಿತ್ತಪ್ಪ ಕನ್ನದಿಲಿ ನಚುನಗಿ
ನಗುತಾನೆ ಕಲತಾಲೆ ॥೩॥"

ಒಂದಲ್ಲ ಎರಡಲ್ಲ ಎಷ್ಟೊಂದು ಅಮೋಘವಾದ ದೃಶ್ಯಗಳು ಚಿತ್ರದಂತೆ ಅವರೆದುರು ತೇಲಿ ಬರುತ್ತಿವೆ. ಇಲ್ಲಿ ತಾನಿಲ್ಲ, ತನ್ನ ನಿಲುವಿಲ್ಲ, ತನ್ನ ಭಾವ ಬಂಧಗಳೆಲ್ಲ ಅವನ ಗುಂಗಿನಲ್ಲೇ ತೇಲಾಡಿ ಯಾವುದೋ ಯುಗಕ್ಕೆ ಕರೆದೊಯ್ದಂತೆ ಎನಿಸುತ್ತಿತ್ತು ಅವರಿಗೆ.

ಎಂಥಹ ಅನನ್ಯ ಭಾವ ತುಂಬಿದೆ. ಒಳಮನಸ್ಸಿನ ಅರಿವಿನಲ್ಲಿ ಯಮುನೆಯ ತಟದ ಮೇಲೆ ನಿಂತು ನೋಡುತ್ತಿದ್ದರೆ ಕೃಷ್ಣನ ಕೊಳಲಿನ ಧ್ವನಿ ಇನ್ನು ಕೇಳಿಸುತ್ತಿದೆ. ಏನೋ ಎನ್ನುವ ಅನುಭವವಾಗುತ್ತಿದೆ ತನ್ನ ಒಳಗಿನ ಪ್ರಜ್ಞೆಗೆ ಇಷ್ಟು ಇಂಪಾಗಿ ಕೇಳಿಬರುತ್ತಿದೆ ಆ ಕೊಳಲಿನ ಮಾಧುರ್ಯ ಹರಿಯುತ್ತಿರುವ ಯಮುನೆ ನಿಂತಿದ್ದಾಳೆ. ಗೋವುಗಳೆಲ್ಲ ಮೇವು ತಿನ್ನಲು ಮರೆತಂತೆ, ಗೋಪಿಕೆಯರು ಧ್ಯಾನದಲ್ಲಿ ಮಗ್ನರಾದಂತೆ ಎಂಥಹ ಸೆಳವು ಆ ರಾಗದಲ್ಲಿ

ಒಂದರ ಮೇಲೊಂದರಂತೆ ತನ್ನ ಅಂತರಂಗದಿಂದ ಬಂದ ಕೀರ್ತನೆಗಳು, ಪುತ್ರ ವಾತ್ಸಲ್ಯ ತುಂಬಿದ ಯಶೋಧೆಗೆ ಕೃಷ್ಣ ನಿರ್ಗಮನ, ಹೃದಯ ತರಂಗ ಎಂಥಹ ನೋವು ಕೊಟ್ಟಿದೆ ಗೋಪಿಕೆಯರ ಗೋಳಾಟ ಕಂಸವಧೆ ಒಂದೇ? ಎರಡೇ? ಕಾಲಚಕ್ರ ಹಿಂದೆ ಬಿಚ್ಚಿಕೊಳ್ಳುತ್ತಾ ಕಣ್ಣೆದುರೇ ನಡೆಯುತ್ತಿದೆ ಏನೋ ಎನ್ನುವಂತೆ ದಾಸರ ಮನದಲ್ಲಿ ಆ ಎಲ್ಲಾ ಚಿತ್ರಗಳು ಮಾಡಿ ಮರೆಯಾಗುತ್ತಿವೆ.

ಭಗವಂತ ಧನ್ಯನಾದೆ ನಾನಿಂದು ಎಂತಹ ಭಾಗ್ಯಕರುಣಿಸಿದೆ ನನಗೆ
"ವೃಂದಾವಸದಿ ಮುಕುಂದ ನಾಲಯದ ಮುಂದೆ ದಿಗಿ ದಿಗಿತವಾದ್ಯ
ವಂದನೆ ತಂದೆ ಪ್ರಸನ್ವೇಂಕ ಟೇಂದ್ರ ಮುದ್ರಾಂತ
ಹೊಂದುವ ಜನುಮವಾನಂದ ಮುನಿಮತವ॥"

ಈ ಜನ್ಮದಲ್ಲಿ ಈ ಆನಂದಕ್ಕಿಂದ ಇನ್ನೇನು ಬೇಕು? ಎನಿಸಿರಬೇಕು ದಾಸರಿಗೆ. ಸಂಚಾರ ಮಾಡಿ ಬಂದ ಮೇಲೆ ದಾಸರಿಗೆ ಅಲ್ಲಿಯ ಚಿತ್ರಗಳನ್ನು ಮರೆಯಲಿಕ್ಕೆ ಆಗುತ್ತಿರಲಿಲ್ಲ ಕೂತರೆ ನಿಂತರೆ ಮಥುರೆ, ಗೋಕುಲ, ಬೃಂದಾವನ, ಕೃಷ್ಣನ ಬಾಲಲೀಲೆಗಳ ಚಿತ್ರಣದ ನೆನಪು ತನ್ನದೆ ಆದ ರೀತಿಗೆ ಅವರನ್ನು ಚಿಂತಿಸಲು ಹಚ್ಚುತ್ತಿತ್ತು. ಬರೆದರೆ ಬರೆಯಬೇಕು ಆ ನನ್ನ ಅಪ್ಪನ ಬಾಲಲೀಲೆಗಳ ಚಿತ್ರಣಗಳನ್ನು ಅವನು ಬೆಳೆದುಬಂದ ಅನುಭವಗಳನ್ನು ಆ ಅನುಭವಗಳೆಲ್ಲ ಹರಳು ಗಟ್ಟಿದಂತೆ ಆ ಸಾನಿಧ್ಯದ ಆ ನೆಲದ ಪ್ರಭಾವವಿರಬಹುದು. ತಮ್ಮ ಮನಸ್ಸಿನಲ್ಲಿ ಭಾಗವತದ ಕಥೆ ಹರಳುಗಟ್ಟುತ್ತ ಹೋಯಿತು.

ಕೈಗೆ ಲೇಖನಿ ಹಿಡಿದು, ಭಾಗವತದ ಅಧ್ಯಾಯಗಳು ಕಣ್ಮುಂದೆ ದೃಶ್ಯಗಳಂತೆ ಸ್ಫುಟವಾಗುತ್ತ ಹೋಯಿತು

ಮೊದಲಿನ ಭಾಗವತ ದಶಮ ಸ್ಕಂದದಲ್ಲಿ ನಲ್ವತ್ತೆಂಟು ಅಧ್ಯಾಯಗಳಿದ್ದು ದಾಸರು ಅದರಲ್ಲಿ ನಾಲ್ವತ್ತ್ಮೂರು ಅಧ್ಯಾಯಗಳನ್ನು ತೆಗೆದುಕೊಂಡು ಕೃಷ್ಣನ ಬಾಲಲೀಲೆಗಳನ್ನು ವರ್ಣಿಸುತ್ತಾ ಹೋದರು. ಬರೆಯುತ್ತಾ ಬರೆಯುತ್ತಾ ಅವರ ಭಾಗವತ ಬ್ರಹ್ಮಾಂಡದಂತೆ ತನ್ನದೆ ಒಂದು ರೂಪವನ್ನು ಪಡೆಯಿತು. ಇದೊಂದು ಕನ್ನಡದ ಅಮೋಘ ಕೃತಿಯಾಯ್ತು. ಬರೆಯುತ್ತಾ ಬರೆಯುತ್ತಾ ಅವರಿಗೆ ಮತ್ತೊಮ್ಮೆ ಮಥುರೆ ಬೃಂದಾವನ ಗೋಕುಲ ದ್ವಾರಕೆ ಎಂದು ಸಂಚರಿಸಿ ಬಂದಂತಾಯಿತು.

ದಾಸರ ಭಾಗವತ ಎಲ್ಲ ಕಡೆ ಪ್ರಚಾರವಾಯ್ತು ಕೂಡ ಸಾಮಾನ್ಯ ಜನರಿಗೂ ತಿಳಿಯುವಂತ ಭಾಷೆಯಲ್ಲಿ ಅದರ ಜೊತೆ ಭಕ್ತಿ ಭಾವಗಳು ಕೂಡ ತುಂಬಿ ಬಂದಂತೆ ಜನರ ಹೃದಯವನ್ನು ತಟ್ಟುತ್ತಿತ್ತು.

ಬದುಕಿನ ಹಂತಗಳು ಒಂದೊಂದಾಗಿ ದಾಟುತ್ತಿದ್ದವು ಆ ಹಂತಗಳನ್ನು ದಾಟಿ ಬರುವಾಗ ಪಡೆದುಕೊಂಡಿದ್ದು ಅವರ ಬದುಕನ್ನೆ ಸಾರ್ಥಕದ ಹಾದಿಯಲ್ಲಿ ಕೊಂಡ್ಯೊಯ್ಯುತ್ತಿತ್ತು ಹುಟ್ಟಿ ಬೆಳೆದು ಬಾಲ್ಯ ಕಳೆದ ಬಾಗಲಕೋಟೆಯೊಂದೆಯಲ್ಲ ಸುತ್ತಲೂ ಪ್ರಜ್ವಲಿಸುವ ಜ್ಞಾನದೀಪವಾಗಿ ಅವರುತಮ್ಮ ಸುತ್ತಲಿನವರನ್ನು ಕೂಡ ಬೆಳಕಿನಡೆಗೆ ಕೊಂಡೊಯುವಂತಿತ್ತು. ಅದು ಅಲೌಕಿಕವಾದ ಬೆಳಕು.

ಅವರು ಬರೆದ ಭಾಗವತ ಎಲ್ಲೆಲ್ಲೂ ಮನೆ ಮಾತಾಗಿ ಜನರ ಅಂತರಂಗವನ್ನು ತನ್ನ ಭಕ್ತಿ ಭಾವದಲ್ಲಿ ಕೊಂಡೊಯ್ಯುವಂಥ ಸಂದರ್ಭವಿರಬಹುದು.

ಒಂದು ದಿನ ದಾಸರು ತಂಬೂರಿ ಮೀಟುತ್ತಾ ಕುಳಿತಿರುವ ಸಮಯ. ಅವರದೆ ವಯಸ್ಸಿನನೊಬ್ಬರು ಬಂದು ಎದುರು ಕುಳಿತರು. ಕಣ್ಮುಚ್ಚಿ ಹಾಡುತ್ತಿದ್ದ ದಾಸರು ಎಷ್ಟು ಹೊತ್ತಿನ ಮೇಲೆ ಕಣ್ತೆಗೆದರು ಎದುರಿಗೆ ಕೂತವರನ್ನು ಎರಡು ಗಳಿಗೆ ನೋಡಿದರು.

"ನೀನು ಕೇಶವ"

"ಧನ್ಯ ಆದೇ ದಾಸರ, ನಾ ಕೇಶವ ಖರೇ ಆದ್ರ ನಿಮ್ಮ ಮುಂದೆ ನಿಂದ್ರು ಯೋಗ್ಯತಾ ನಾ ಕಳಕೊಂಡೀನಿ ಬ್ಹಾಳ ಸಲ ಅನ್ಕೊಂಡೆ ಬಂದು ನಿಮ್ಮ ಮುಂದೆ ನಿಂತು ಕ್ಷಮಾ ಭಿಕ್ಷಾ ಬೇಡೋಣಂತ ಆದ್ರ ಬರೊ ಮಾರಿ ಇರ್ಲಿಲ್ಲ"

"ಹೌದೇನು ಯಾಕ ಹಂಗ್ಯಾಕನಸ್ತು ಕೇಶವ ನಾವಿಬ್ರೂ ಕೂಡಿ ಬೆಳೆದವರಲ್ಲ?

"ಖರೇ ಆದ್ರ ದಾಸರ ನನ್ನ ಮಾತು ನನ್ನ ಮುಖಕ್ಕೆ ಹೊಡೆದು ಕೇಳುತ್ತಿತ್ತು. ಈಗ ಕ್ಷಮಾ ಕೇಳಲಿಕ್ಕೆ ಬಂದೀನಿ ದಾಸರ, ನೀವು ಬರೆದ ಭಾಗವತ ಓದಿ ಮನಸ್ಸು ತೃಪ್ತಿ ಆತು ಮೂಢಮಂದಿ ನಾವು ಯಾವ ಗರ್ಭದೊಳಗ ಯಾವ ರತ್ನ ಇರ್ತದೋ? ಭಾಗವತ ಅಂದ್ರ ಗೊತ್ತೇನೋ ನಿನಗ ಅಂದಿದ್ದೆ. ಈಗ ನೀವು ಬರೆದ ಭಾಗವತ ಓದಿ ಜನ್ಮ ಸಾರ್ಥಕ ಆತ



ಅನಸ್ತು ಎಂಥಾ ಮಹಾನುಭಾವರು ನೀವು ದಾಸರ ಈ ಪಾಪಕ್ಕೆ ಪ್ರಾಯಶ್ಚಿತ್ತ್ ಹೇಳ್ರೀ" ಎಂದರೆ ದಾಸರು ಕಾರುಣ್ಯ ಭಾವದಿಂದ ನಕ್ಕು "ಭಗವಂತನ ನಂಬಿಯಲ್ಲಾ ಅದೇ ಪ್ರಾಯಶ್ಚಿತ್ತ ಕೇಶವಣ್ಣ ನೀವು ಅಂದದ್ರಾಗೂ ಅರ್ಥ ಇತ್ತು. ನೀವು ಹಂಗ ಅಂದಿರದಿದ್ರ ನಾನು ಜ್ಞಾನ ಕೊಡು ಅಂತ ಆ ಪರಮಾತ್ಮನ ನಂಬಿ ಹೋಗ್ತೀರಲಿಲ್ಲ ಯಾರ್ಯಾರ ಉದ್ದಾರಕ್ಕೆ ಯಾರ್ಯಾರ್ನ ಕಾರಣಾ ಮಾಡ್ತಾನೋ ಶ್ರೀ ಹರಿ ಅವಗ ಗೊತ್ತು" ಎಂದರು.

ಇದು ದಾಸರ ಮನಸ್ಸಿನ ದೊಡ್ಡತನ

ಕೇಶವ ಹೋದಮೇಲೆ ಕೂಡ ದಾಸರು ಎಷ್ಟೋ ಹೊತ್ತು ಅದನ್ನೆ ಮನನ ಮಾಡುತ್ತಾ ಕುಳಿತಿದ್ದರು. ಖರೇ ಕೇಶವ ಹಂಗ ಅಂದ್ದು ತನ್ನ ಉದ್ಧಾರಕ್ಕೆ ಒಂದು ಹಾದಿನ ಆತಲ್ಲಾ ಎನಿಸಿತು.

ಮುಂದಿನ ಒಂದು ದಿನವಿರಬಹುದು. ಅದು ಮುಂಜಾನೆಯ ಸಮಯ ನದಿಯಂಚಿನ ಮಲ್ಲಯ್ಯನ ಗುಡ್ಡದಾಚೆಯಿಂದ ಸೂರ್ಯ ಉದಯಿಸಿ ಸುಮಾರು ಹೊತ್ತಾಗಿರಬೇಕು ಎಳೆ ಬಿಸಿಲಿನ ಕಿರಣಗಳಿಗೆ ಪ್ರಭೆಯ ನೀರು ಚಿನ್ನದ ಛಾಯೆಯಲ್ಲಿ ಮಿಂದು ಹರಿಯುತ್ತಿತ್ತು. ದಾಸರು ಬ್ರಾಹ್ಮೀ ಮುಹೂರ್ತದಲ್ಲೇ ಎದ್ದು ಸ್ನಾನ ಮುಗಿಸಿ ದೇವರಪೂಜೆ ಮುಗಿಸಿ ಆ ದೇವರ ಪೂಜೆ ನೋ? ವಿಗ್ರಹಗಳಲ್ಲಿ ಜೀವ ತುಂಬಿ ಹರಿಯೊಡನೆ ಮಾತನಾಡುತ್ತಾ ತಮ್ಮನ್ನು ತಾವೇ ಮರೆತು ಭಕ್ತಿ ಭಾವ ವನ್ನು ಬಿಂಬಿಸುತ್ತಾ, ಅವನನ್ನು ಅಪೇಕ್ಷಿಸುತ್ತಾ, ಅವನಿಗಾಗಿ ಹಂಬಲಿಸುತ್ತಾ, ಅಂತಃಕರಣದಿಂದ ಓಲೈಸುತ್ತಾ ಕರುಣಾಪೂರ್ವಕವಾಗಿ ಆಲಾಪಿಸುತ್ತಾ, ಆ ಭಗವಂತನಲ್ಲಿ ಒಂದಾಗಿ ಮಾಡುವ ಪೂಜೆಯ ಹೊತ್ತು ಇಷ್ಟೇ ಅಂತಿಲ್ಲ ಒಳಗಿನ ಅರಿವು ಹೊರಬಂದು ಲೌಕಿಕ ಪ್ರಪಂಚದ ಅರಿವಾದಾಗ ಮುಗಿಯುವ ಪೂಜೆಯದು.

ದಾಸರು ಎಂದಿನಂತೆ ಪೂಜೆ ಮುಗಿಸಿ ಪಡಸಾಲೆಗೆ ಬಂದು ಗೋಡೆಗೆ ಒರಗಿಕುಳಿತು ತಮ್ಮ ಗ್ರಂಥಗಳನ್ನು ತೆಗೆಯುತ್ತಿದ್ದರು, ಕಣ್ಣುಗಳು ಕೆಲವು ಸಾರಿ ಗ್ರಂಥದ ಮೇಲಿದ್ದರೂ ಮನಸ್ಸು ಯಾವುದೋ ಅಲೌಕಿಕತೆಗೆ ಸಿಕ್ಕು ಅದರಲ್ಲೇ ಲೀನವಾಗುತ್ತಿತ್ತು ಹಾಗಾದಾಗ ಹೊರಗಿನ ಯಾವ ಅರಿವು ಮನಸ್ಸಿನ ಸೂಕ್ಷ್ಮತೆಗೆ ಸಿಕ್ಕುತ್ತಿರಲಿಲ್ಲ.

ಅಂತದೆ ಒಂದು ಗಳಿಗೆ ದಾಸರ ಕಿವಿಗೆ ಎಲ್ಲಿಂದಲೋ ತಂಬೂರಿಯ ನಾದ ಕೇಳಿಸುತ್ತಿದೆ. ಎಷ್ಟೊಂದು ಇಂಪಾಗಿದೆ ತಂಬೂರಿಯ ನಾದ ಅಲೆ ಅಲೆಯಾಗಿ ಬರುತ್ತೆ ಭಕ್ತಿ ಭಾವದ ಪರಾಕಾಷ್ಠತೆಯಲ್ಲಿ ಆ ತಂಬೂರಿಯ ನಾದ ಕೇಳುಗರ ಎದೆಯನ್ನು ಮಿಡಿಯುವಂತಿದೆ.

ಎಂಥಹ ಆಲಾಪವಿದೆ ಆ ನಾದದಲ್ಲಿ

ಎಂಥಹ ಭಕ್ತಿಭಾವ ತುಂಬಿದೆ ಅದರ ಮಿಡಿತದಲ್ಲಿ. ಅದರ ಜೊತೆ ಸಣ್ಣದಾಗಿ ಗೆಜ್ಜೆಕಟ್ಟಿಕೊಂಡು ಕುಣಿಯುವ ಗೆಜ್ಜೆಯ ನಾದ, ಎಲ್ಲಿಂದ ಬರುತ್ತಿದೆ ಇದು? ಭಗವಂತ ಯಾವಯಾವ ನಾದದ ರೂಪದಿಂದ ನನ್ನ ತನು ಮನವನ್ನು ಎಚ್ಚರಿಸುತ್ತಿರುವೆ. ಎಂಥಹ ಅಗಾಧವಾದ ಅಮೋಘವಾದ ಝೇಂಕಾರ ಅದರಲ್ಲೇ ಮುಳುಗಿ ಮುಳುಗಿ ಪಾವನ ವಾದಂತೆ.

ಹೀಗೆ ಭಕ್ತಿ ಭಾವದಿಂದ ಧ್ಯಾನದಲ್ಲಿ ಕುಳಿತಾಗಲೆಲ್ಲ ಯಾವುದೋ ಒಂದು ನಾದದ ಝೇಂಕಾರ ತನ್ನನ್ನು ಸೆಳೆದುಕೊಂಡು ಇಹದ ಅರಿವನ್ನೇ ಮರೆಸುತ್ತಿತ್ತು. ಅವತ್ತೂ ಇಂಥದೇ ನಾದ, ಕೊಳಲು ನಾದ, ಹೀಗೆಯೇ ಧ್ಯಾನದಲ್ಲಿ ಕುಳಿತ ಹೊತ್ತು ಎಲ್ಲಿಯೋ ನದಿಯ ತಟದಲ್ಲಿ ಇದ್ದಂತೆ ಇಂಪಾದ ಕೊಳಲು ನಾದ ಹರಿದು ಬಂದಂತೆ ಸುತ್ತಲಿನ ಪ್ರಪಂಚ ಮೈಮರೆಯುವಂತೆ ಅದರ ನಾದಕ್ಕೆ ಗೋವುಗಳು ಕೂಡ ತಮ್ಮ ಕೊರಳಿನ ಗಂಟೆ ಅಲುಗಿಸಿ ತಲೆ ಹಾಕಿದಂತೆ "ಅಂಬಾ" ಎಂದು ಆ ನಾದವನ್ನು ಅರಸಿಕೊಂಡು ಬಂದಂತೆ ಗೋಕುಲದಲ್ಲಿಯ ಮನೆಯ ತಟದಲ್ಲಿ ಕೇಳಿದರಾಗ ಎಲ್ಲಿಂದ ಬಂದಿತ್ತು ಆ ಕೊಳಲಿನನಾದ

ನನ್ನಪ್ಪನೇ ಅಲ್ಲವೆ ಅದನ್ನು ನುಡಿಸಿದವ

ಸುತ್ತಲಿನ ಪ್ರಪಂಚವನ್ನೇ ತನ್ನ ಮೋಹಕರಾಗದಲ್ಲಿ ಮುಳುಗಿಸಿದ್ದು ಅಚೇತನ ವಸ್ತುಗಳಿಗೆಲ್ಲ ಚೇತನ ತುಂಬಿದಂತೆ ಚರಾಚರ ವಸ್ತುಗಳನ್ನು ತನ್ನ ನಾದದಲ್ಲಿ ಮುಳುಗಿಸಿ ಪರವಶವನ್ನಾಗಿ ಮಾಡಿದ್ದು.

ಕೇಳಿಸುತ್ತಲೆ ಇತ್ತು ಕೊಳಲಿನ ಧ್ವನಿ ಆಗಲೇ ಅಲ್ಲವೇ ತನ್ನ ಮನದಾಳದಿಂದ ಬಂದ ಈ ಕೀರ್ತನೆ

"ರಂಗ ಕೊಳಲನುದಲಾಗಿ ರಂಗಯ್ಯ ಕೊಳಲನೂದಲು
ಮಂಗಳ ಮಯವಾಯಿತು ಧರೆಯ । ಜನಂಗಳು
ಜೀವನ ಚೇತನ ಮೆರೆದು ಶ್ರೀ ರಂಗಧ್ಯಾನಪರರಾದರು॥೧॥

ಬಾಡಿದಾ ಬಳ್ಳಿ ಮರಾಗೊನೆ ವಡಿದು
ತೀಡುವ ಮಂದ ಮಾರುತನ ಕೂಡಿತೂ ।
ಗ್ಯಾಡಾವು ವನದ ಫಲದ ಗೊಂಚಲದಿ ಪಾಡಾ
ಲೊಲ್ಲಾ ಅಳಿ ಕುಲಗಳು ಹೇಡಿಗೊಂಡಾವು
ಜಾಣಕ್ಕೆ ಗಿಳಿಯೂ ಮಾತಾಡದೆ ಕಳೆಗುಂದಿದವು ಕೋಗಿಲೆ
ಓಡಾಟ ವೈರಾಟ ಜರಿದು ಖರಾಮೃಗಗಾಢ
ನಿದ್ರೆ ವಶವಾದವು ॥೧॥

ರಂಗಕೊಳಲನೂದಲಾಗಿ ರಂಗಯ್ಯ ಕೊಳಲನಾದಲು"

ಆ ಮೋಹಕರಾಗ ಕಿವಿಯಲ್ಲಿ ತುಂಬಿದಂತೆ ದಾಸರ ಬಾಯಿಂದ ಬಂದ ಆ ಕೀರ್ತನೆ ಕೇಳುಗರನ್ನು ಕೂಡ ಆ ಕೊಳಲಿನ ಮೋಹಕರಾಗದಲ್ಲಿ ಮುಳುಗಿಸಿದವು. ಕೀರ್ತನೆ ಮುಗಿದರೂ ದಾಸರ ಕಣ್ಣುಗಳು ಧ್ಯಾನದಲ್ಲಿ ಮುಚ್ಚಿದಂತೆ ಮತ್ತೆ ಮತ್ತೇ ಆ ರೂಪವನ್ನು ನೆನೆಯುತ್ತಿದ್ದಂತೆ ಎರಡು ಕೈಯೆತ್ತಿ ಮುಗಿದು ಧ್ಯಾನಸ್ವರೂಪ ಅವರ ಕಣ್ಣಿನಿಂದ ಧನ್ಯತೆಯ ಬಿಂದುಗಳು ತುಂಬಿ

"ರಂಗಾ ಇವತ್ತಿಗೆ ನನ್ನ ದಿನಗಳು ಸಾರ್ಥಕವಾತು ಶ್ರೀ ಹರಿ ಹೀಗೆ ನಿನ್ನ ಕಿರ್ತನೆಯನ್ನು ಅನುಗಾಲ ಹಾಡುವಂತೆ ಹಾಡಿದ್ದನ್ನು ಕಿವಿತುಂಬಿ ಕೇಳಿ ಧನ್ಯನಾಗುವಂತೆ ಮಾಡು ಎಂದು ಹರಿನಾಮ ಮನನ ಮಾಡುತ್ತಾ ಕುಳಿತೇ ಇದ್ದರು.



ಪ್ರಸನ್ವೆಂಟಕ ದಾಸರು, ಕಣ್ಮುಚ್ಚಿಕೊಂಡು ಹರಿಯಧ್ಯಾನದಲ್ಲಿದ್ದಾರೆ. ಒಳಗೆ ಅತ್ತಿಗೆ ಹರಿಯ ನಾಮಾಮೃತದ ಕೀರ್ತನೆಗಳನ್ನು ಹಾಡುತ್ತಿದ್ದಾರೆ. ಎಂಥ ಸುಮಧುರವಾದ ಕೀರ್ತನೆಯದು. "ರಂಗಾ ನಿನ್ನಕೊಂಡಾಡುವ ಮಂಗಳಾತ್ಮರಾ ಸಂಗಸುಖವಿತ್ತು ಕಾಯೋ ಕರುಣಾ ಸಾಗರಾ..." ಜಗನ್ನಾಥ ದಾಸರ ಕೃತಿಯಲ್ಲವೆ ? ಕೇಳಿದರೇ-ಕೇಳುತ್ತಲೇ ಇರಬೇಕೆಂಬ. ಅಮೃತಧಾರೆಯಂಥ ಭಕ್ತಿರಸದ ಹೊನಲು ಆ ನಮ್ಮಪ್ಪ ವೆಂಕಟರಮಣಯಾರ್ನಾರಿಂದ ಯಾವ ಸೇವೆ ಸ್ವೀಕರಿಸುತ್ತಾನೋ ?

"ಕಂಡ-ಕಂಡಲ್ಲೆ ವಿಶ್ವರೂಪ ಕಾಂಬರೋ.
ಉಂಡುಣಿಸಿದ್ದೆಲ್ಲ ನಿನ್ನ ಯಜ್ಞವೇಂಬರೋ
ಬಂಡುಣಿಯಂದದಿ ನಾಮಾಮೃತವ ಸವಿಯುವರೋ
ಹೆಂಡೀರು-ಮಕ್ಕಳು ನಿನ್ನ ತೊಂಡರೆಂಬರೋ"

ಎಂಥಹ ಅಮೋಘ ಅರ್ಥ ತುಂಬಿದೆ ಆ ನಾಮಾಮೃತದಲ್ಲಿ ವಿಜಯದಾಸರ – ಗೋಪಾಲದಾಸರಂಥ – ದೈವಿಕ ಅನುಗ್ರಹ ಪಡೆದವರಲ್ಲವೆ ? ಸಾಧುಜನಗಳ ಸಂಗವೆಂದರೇ ಸಾಮಾನ್ಯವೆ ?

ಪ್ರಸನ್ವೇಂಕಟದಾಸರು ಮನಸ್ಸಿನಲ್ಲಿ ಹೀಗೆ ಮನನಮಾಡಿಕೊಳ್ಳುತ್ತಿರುವಾಗಲೇ ಯಾವದೋ ಒಂದು ನಾದ ಮಾಧುರ್ಯ. ಎಷ್ಟು ಇಂಪಾಗಿ ಕೇಳಿಸುತ್ತಿದೆ. ಭಗವಂತ ಯಾರಿದು ? ನಿನ್ನ ನಾಮವನ್ನು ಅನನ್ಯ ಅಂತಃಕರಣದಿಂದ ಬಾಲಕನು ತಾಯಿಯನ್ನು ಕರೆಯುವಂತೆ ಆರ್ತರಾಗಿ ಕರೆಯುತ್ತಿರುವವರು. ಅಲೆ ಅಲೆಯಾಗಿ ಬರುತ್ತಿರುವ ಆ ನಾದ ಆ ಹಾಡು ತಮ್ಮ ಮನೆಯಂಗಳದಲ್ಲಿಯೇ ಅಲ್ಲವೆ ?

"ಬಂಧನವ ಪರಿಹರಿಸೋ ಭವವಿದೂರ
ಕಂದರ್ಪ ಜನಕ ಕಾರುಣ್ಯದಲ್ಲಿ ಭಕ್ತರ ॥ಪ॥

ವೀತಶೋಕನೆ ಎನ್ನ ಮಾತನಾಲಿಸಿ
ನಿನ್ನ ದೂತರನು ಸಲಹುವದು ಪ್ರೀತಿಯಿಂದ
ದಾತ ಶ್ರೀ ಜಗನ್ನಾಥ ವಿಠ್ಠಲ ನಿನ್ನ
ನಾ ತುತಿಸಬಲ್ಲೇನೆ ವಿಧಾತ
ಮುಖವಂದ್ಯನೆ ॥೧॥

ನಮ್ಮಪ್ಪ ಶ್ರೀಹರಿಯ ಕೀರ್ತನೆಯ ಮಹತ್ವ. ಎಂಥಹ ಅಮೃತದಂಥಹ ತತ್ವಅಡಗಿದೆ ಅದರಲ್ಲಿ. ಒಳಗೆ ಅತ್ತಿಗೆ ಕೂಡ ಇದೇ ಶ್ರೀ ಜಗನ್ನಾಥ ವಿಠ್ಠಲನ ಅಂಕಿತ ಹಾಡುಹಾಡುತ್ತಿದ್ದಾರಲ್ಲವೆ. ಇಲ್ಲಿ ನೋಡಿದರೆ ಅಂಗಳದಲ್ಲಿ ಅದೇ ಜಗನ್ನಾಥ ವಿಠ್ಠಲಾಂಕಿತ ಹಾಡು.

ದಾಸರು ಆನಂದಾತಿಶಯದಿಂದ ಎದ್ದು ಬಂದರೇ ಯಾರಿದ್ದಾರೆ ? ಎದುರಿಗೆ ಮುಂದಿನ ಅಂಗಳದಲ್ಲಿ ನಿಂತಿದ್ದಾರೆ. ಮಹಾತ್ಮರಂತೆ ಕಾಣುವ ದಾಸವರ್ಯರೊಬ್ಬರು ಏನು ಕಳೆ? ಏನು ತೇಜಸ್ಸು ಆ ಶ್ರೀಹರಿಯನ್ನೇ ಒಪ್ಪಿಸುತ್ತ ಆರಾಧಿಸುತ್ತ ನಿಂತಿದ್ದಾರೆ. ಕೈಯಲ್ಲಿ ತಂಬೂರಿ– ತಾಳ. ಹರಿನಾಮ ಹಾಡುತ್ತ ಜಗನ್ನಾಥವಿಠ್ಠಲ ಅಂಕಿತದೊಂದಿಗೆ ಮುಗಿದ ಆ ಶ್ರೀಹರಿಯ

ಲೀಲಾಮೃತ, ಕೇಳುತ್ತ ಭಾವುಕರಾಗಿ ವಿನಯದಿಂದ ಶ್ರೀ ಪ್ರಸನ್ವೇಂಕಟದಾಸರು ಕಟ್ಟೆ ಇಳಿದು ಬಂದು ಅವರೆದುರು ಕೈಮುಗಿದು ನಿಂತರು.

"ಮನಸ್ಸಿಗೆ ಬ್ಹಾಳ ಸಂತೋಷವಾಯ್ತು. ನಮ್ಮಪ್ಪ ಹರಿಯ ಕೈಂಕರ್ಯವನ್ನು ಹೊಂದಿದವರು. ಶ್ರೀ ಜಗನ್ನಾಥವಿಠ್ಠಲ ಅಂಕಿತ ಶ್ರೀ ಜಗನ್ನಾಥದಾಸರಲ್ಲವೆ ? ಸಾಮಾನ್ಯರಲ್ಲ ತಾವು ಪ್ರಲ್ಹಾದರಾಜರ ತಮ್ಮ ಸಲ್ಹಾದರಾಗಿದ್ದಿರಲ್ಲವೆ ? ನನ್ನ ಮನಸ್ಸಿನ ಸಂತೋಷ ತೃಪ್ತಿ ಹೇಗೆ ಹೇಳಲಿ.

ಎನ್ನುತ್ತಿದ್ದ ಶ್ರೀ ಪ್ರಸನ್ವೇಂಕಟ ದಾಸರನ್ನು ನೋಡುತ್ತ ಎರಡುಗಳಿಗೆ ಹಾಗೇ ಮೌನವಾಗಿ ನಿಂತಿದ್ದಾರೆ. ಶ್ರೀ ಜಗನ್ನಾಥದಾರು ಶ್ರೀ ಪ್ರಸನ್ವೇಂಕಟದಾಸರ ಪಾದಕ್ಕೆ ನಮಸ್ಕಾರ ಮಾಡಿ" ಹಿರಿಯರು ತಾವು ಸ್ವಾಮಿ ತಾವೇನು ಸಾಮಾನ್ಯರೆ ? ರುದ್ರಾಂಶ ಸಂಭೂತರು ಹರಿಯನ್ನು ಒಲಿಸಿದವರು. ಹರಿಯಿಂದ ಅಂಕಿತವನ್ನು ಪಡೆದವರು ದೇವಾಂಶ ಸಂಭೂತರಲ್ಲದೆ ಮತ್ತೇನು ?

ನಿಜ. ಒಬ್ಬರನ್ನೊಬ್ಬರು ನೋಡುತ್ತಿದ್ದಾರೆ ಭಕ್ತಿ ಪರವಶತೆ ಇಬ್ಬರ ಕಣ್ಣಲ್ಲೂ ಸೂಸಿ ಹರಿಯುತ್ತಿದೆ. ಎರಡು ಮಹಾಚೇತನಗಳು. ಮುಖಾ-ಮುಖಿಯಾಗಿ ನಿಂತಾಗ ಸೂತ್ತಲೆಲ್ಲ ಚೆಲ್ಲಿದ ಪ್ರಖರ ಬೆಳಕು.

ಹೃದಯ ತುಂಬಿ ಹೇಳುತ್ತಿದ್ದಾರೆ. ಶ್ರೀ ಜಗನ್ನಾಥದಾಸರು "ಸ್ವಾಮಿ ತಮ್ಮ ಭಾಗವತ ಓದಿದ ಮೇಲೆ ತಮ್ಮ ಕೀರ್ತನೆಗಳ ಭಕ್ತಿರಸವನ್ನು ಸ್ವಾದಿಸಿದ ಮೇಲೆ ತಮ್ಮನ್ನು ನೋಡುವ ಹಂಬಲ ಕೂಡ ಆಯ್ತು. ಇದು ಆ ನಮ್ಮಪ್ಪ ವೇಂಕಪ್ಪನ ಪ್ರೇರಣೆ. ತಮ್ಮನ್ನು ಭೇಟಿಯಾಗುವದು ಒಂದು ಸುಯೋಗವೆಂದುಕೊಂಡು ಬಂದೆ" ಎಂದು ವಿನಯ ತುಂಬಿ ಹೇಳುತ್ತಿದ್ದ ಶ್ರೀಜಗನ್ನಾಥರ ಎರಡು ಕೈಗಳನ್ನು ಹಿಡಿದು ಹೇಳುತ್ತಿದ್ದಾರೆ. ಪ್ರಸನ್ವೇಂಕಟ ದಾಸರು ಎಷ್ಟಾದರೂ ಹಿರಿಯ ಚೇತನ ವಯಸ್ಸು ಮಾಗಿದವರು.

"ಖರೇ ಸ್ವಾಮಿ, ಇದು ನಮ್ಮಪ್ಪನ ಇಚ್ಚೆಯೆ. ನನಗೂ ಇತ್ತೀಚೆಗೆ ತಮ್ಮನ್ನು ನೋಡಬೇಕು. ಎಂದು ಒಳಗಿನಿಂದ ಪ್ರೇರಣೆಯಾಗುತ್ತಿತ್ತು. ಆ ಹಂಬಲದ ಪ್ರೇರಣೆಯೇ ಇವತ್ತು ನಮ್ಮಿಬ್ಬರ ಭೇಟಿಗೆ ಕಾರಣವಲ್ಲವೆ ?" ಎನ್ನುತ್ತ ಜಗನ್ನಾಥದಾಸರ ಕೈಗಳನ್ನು ಅನನ್ಯ ಅಂತಃಕರಣದಿಂದ ಹಿಡಿದುಕೊಂಡು ಅಂಗಳದ ಮೆಟ್ಟಲು ಹತ್ತಿ ಬರುತ್ತಿದ್ದ ಆ ಎರಡು ಮಹಾಚೇತನಗಳನ್ನು ನೋಡುತ್ತಾನಿಂತ ಕಾವೇರಕ್ಕನ ಮನಸ್ಸು ತುಂಬಿ ಬಂದು ಸೆರಗಿನಿಂದ ಕಣ್ಣೊರಿಸಿಕೊಳ್ಳುತ್ತಿದ್ದಾಳೆ.

"ಇವತ್ತು ತಮ್ಮಂಥವರ ದರ್ಶನದಿಂದ ನಾನು ಧನ್ಯನಾದೆ". "ತಪ್ಪು-ತಪ್ಪು ಜಗನ್ನಾಥದಾಸರೆ, ನಿಮ್ಮಂಥ ಹರಿಭಕ್ತರನ್ನು ಕಾಣುವ ಭಾಗ್ಯವು ನನ್ನದಿತ್ತು. ಇದು ನಮ್ಮಪ್ಪ ಕೂಡಿಸಿದ ಸುಯೋಗ" ಎಂದು ಅವರನ್ನು ಹಾಸಿದ ಕೃಷ್ಣಾ ಜೀನದ ಮೇಲೆ ಕೂಡಿಸಿದರು.

ಎರಡು ಪುಣ್ಯ ಜೀವಿಗಳ ಸಂಗಮದಲ್ಲಿ ಎಂಥೆಂಥಹ ಸಂದರ್ಭಗಳು ಕಳೆದವು. ಮುಂದೆ ನಾಕೆಂಟುದಿನ ಇಬ್ಬರೊ ಒಟ್ಟಿಗೆ ಕಳೆದರು.

ಆ ಒಟ್ಟಿಗೆ ಕಳೆದ ದಿನಗಳಾದರೂ ಎಂಥಹವು. ಎರಡು ಭಕ್ತಿ ಚೇತನಗಳು ಒಟ್ಟಿಗೆ ಕೂಡಿದಾಗ ಬ್ರಹ್ಮಾನಂದದ ಬೆಳಕು ಸುತ್ತಲೂ ಹರಡಿದಂತೆ ಹಗಲು, ಮಧ್ಯಾನ್ಹ ರಾತ್ರಿ ಒಂದೊಂದು ಕ್ಷಣವೂ ಕೂಡ ಹರಿನಾಮ ಸಹಕೀರ್ತನೆ ಎಂದು ಹಾಡುತ್ತಾ, ಹೊಗಳುತ್ತಾ ಹರಿಯನ್ನು ಆಲೈಸುತ್ತಾ ಆರಾಧಿಸುತ್ತಾ ಕಳೆದದ್ದು ಮಧ್ವ ಸಿದ್ಧಾಂತದ ಬಗ್ಗೆ ಅಣು-ಅಣುವು



ಹಿಂಜಿ, ಹಿಂಜಿ ಅದರ ತತ್ವ... ತಾರ್ಕಿಕತೆಯ ಬಗ್ಗೆ ಮಾತನಾಡಿದ್ದು. ಲೌಕಿಕಕ್ಕೆ ಅದರದೇ ಮಿತಿಯುಂಟು. ಆದರೆ ಅಲೌಕಿಕಕ್ಕೆ ಯಾವ ಚೌಕಟ್ಟಿಲ್ಲ, ಭಗವಂತಹ ವಿಶ್ವರೂಪದಂತೆ ಅದು ಭಕ್ತಿ ಭಾವವನ್ನು ಒಳ-ಒಳಗೆ ಆಳದಲ್ಲಿ ಇಳಿಸುತ್ತಾ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುವ ಭಾವ.

ಇಬ್ಬರ ಕೀರ್ತನೆಗಳು ಭಗವಂತನ ಬಗ್ಗೆಯೇ ಇರಬಹುದು. ಪ್ರಪಂಚದ ನಶ್ವರತೆಯ ಬಗ್ಗೆ ಇರಬಹುದು. ಜಗತ್ತಿನ ವಿಡಂಬನೆ ಬಗ್ಗೆ ಇರಬಹುದು. ಹರಿಭಕ್ತರ ಸಂಗದ ಸಾರ್ಥಕತೆಯನ್ನು ಹೇಳುವ ಬಗ್ಗೆ ಇರಬಹುದು. ಆದರೆ ಅವುಗಳನ್ನು ಜನ-ಮನದಲ್ಲಿ ಬಿತ್ತಿಬೆಳೆಸಿದ ರೀತಿ ಮಾತ್ರ ಬೇರೆಯೇ. ರೀತಿ ಬೇರೆಯಾದರೂ ಭಕ್ತಿಭಾವ ಸಂಗಮ ಒಂದೇ.

ಓಣಿಯಜನ ಊರಿನ ಜನ ಬಂದು-ಬಂದು ಆ ಮಹಾಮಹಿಮರ ಮುಂದೆ ಅನನ್ಯ ಭಕ್ತಿಯಿಂದ ತಲೆಬಾಗಿ, ದರ್ಶನ ಪಡೆದು ಧನ್ಯರಾಗಿ ಹೋಗುತ್ತಿದ್ದರು. ಇಬ್ಬರಿಂದಲೂ ಕೀರ್ತನೆಗಳ ಮಹಾಪೂರ ಹರಿದು ಜನರ ಚೇತನಗಳನ್ನು ಕೂಡ ಪಾವನಗೊಳಿಸುವಂತಿತ್ತು.

ಎಂಥಹ ಪುಣ್ಯದ ನೆಲ ತಮ್ಮದು ಎನಿಸುತ್ತಿತ್ತು. ಸಾಮಾನ್ಯರೆ ಜಗನ್ನಾಥ ದಾಸರು ? ಹಾಡಿನಲ್ಲಿಯೇ ಹರಿಯನ್ನು ಕುಣಿಸಿಬಿಟ್ಟವರು. ಭಕ್ತಿಯ ಮಹಾಪೂರ ಹರಿಸಿದವರು.

"ತಟಿತ್ಕೋಟಿ ನಿಭಕಾಯ ಜಗನ್ನಾಥ
ವಿಠಲಯ್ಯ ಹರಿ ವಿಠಲಯ್ಯ"
ಭಜಿಸುವೆ ನಿನ್ನನು ಅಜಭವ ಸುರನುತ
ಭಜಕಾ ಮತರನು ಕುಜನಕುಠಾರ
ನೀಕರುಣಿಸದೇ ನಿರಾಕರಿಸಲು ಎನ್ನ
ಸಾಕುವರ್ಯಾರೊ ದಯಾಕರ ಮೂರುತಿ ॥೨॥

ಶರಣಾಗತರನು ಪೊರೆವನೆಂಬತವ
ಬಿರುದು ಕಾಯೋ ಕರಿವರದ ಜಗನ್ನಾಥ
ವಿಠ್ಠಲಯ್ಯ ಹರಿ ವಿಠಲಯ್ಯ"

ತಂಬೂರಿ ಮೀಟುತ್ತ ಗೆಜ್ಜೆಗೆ ತಕ್ಕಂತೆ ಹೆಜ್ಜೆಹಾಕುತ್ತ ಹಾಡುತ್ತ ಭಕ್ತಿ ಪರವಶರಾಗಿ ಕುಣಿಯುತ್ತಿದ್ದಾರೆ ಜಗನ್ನಾಥದಾಸರು. ಅವರೊಡನೆ ಶ್ರೀ ಪ್ರಸನ್ವೇಂಕಟ ದಾಸರು ಕೂಡ ಭಕ್ತಿಪರವಶರಾಗಿ ಆನಂದದಿಂದ ಕಣ್ಣೀರು ಹರಿಸುತ್ತಿದ್ದಾರೆ.

ಎಂಥಹ ಅಮೋಘ ಭಾವ. ಹರಿಯನ್ನಲ್ಲದೆ ಹರಿಯ ಭಕ್ತರನ್ನು ಕೂಡ ಕೊಂಡಾಡುತ್ತಿದ್ದಾರೆ. ಅವರ ಕೀರ್ತನೆ ಮುಗಿದಂತೆ. ಪ್ರಸನ್ವೇಂಕಟ ದಾಸರ ಹಾಡಿನ ಮಾಧುರ್ಯ ಸುರುವಾಗುತ್ತಿತ್ತು.

"ಆನೆ ಬಂತಾನೆ ಬಂತಾನೆ ಬಂತಮಮ್ಮ
ದಾನವ ಕದಳಿಯ ಕಾನನ ಮುರಿಯುತ ॥ಪ॥

ಗುಂಗುರು ಗುರುಳು ನಿಲಾಂಗ ಚೆಲ್ವಾನೆ
ಕಂಗಳಿಗ್ವೋಳೆವ ವ್ಯಾಘ್ರಾಂಗುಳಿ

ಆನೆ
ಬಂಗಾರದಣುಗಂಟು ಶಿಂಗಾರದಾನೆ
ಮಂಗಲ ತಿಲಕದ ರಂಗನೆಂಬಾನೆ ॥೧॥

ಆ ಮುದ್ದು ರಂಗನೆಂಬಾನೆ ದುಷ್ಟರನ್ನು ಶಿಕ್ಷಿಸುತ್ತಾ ಶಿಷ್ಟರನ್ನು ಪೊರೆಯುತ್ತಾ ಬರುವ ಪರಿ ಹಾಡಿಯೇ ತಿಳಿದುಬೇಕು. ಭಕ್ತರ ಭಕ್ತ ಅವನು

"ನಳಿನ ಭವರಿಗೆ ಸಿಲುಕದ ಆನೆ
ಒಲವಿಂದ ಭಕುತರ ಪೊರೆಯುವ ಆನೆ
ಹಲವು ಕವಿಗಳಿಗೆ ನಿಲುಕದ ಆನೆ
ಬಲಪ್ರಸನ್ವೇಂಕಟ ನಿಲಯನೆಂಬಾನೆ

ಪುನೀತವಾಗುತ್ತಿತ್ತು ಕೇಳುವವನ ಮನಸ್ಸು ಭಾವ, ಜನ್ಮ ಕೂಡ ಯಾರಿಗುಂಟು ಇಂಥಹ ಭಾಗ್ಯ? ಇಬ್ಬರೂ ಆ ಶ್ರೀಹರಿಯನ್ನು ಒಲಿಸಿಕೊಂಡವರು. ಅವನ ಅಖಂಡ ಧ್ಯಾನವೆ ತಮ್ಮ ಬದುಕಿನ ಗುರಿ ಎಂದುಕೊಂಡವರು. ಇಂಥವರೊಡನೆ ದಿನಗಳು ಎಷ್ಟು ಸಾರ್ಥಕತೆಯಿಂದ ಕಳೆಯುತ್ತಿವೆ.

ಒಂದು ಸಲವಂತೂ ಇಂಥಹದೇ ಒಂದು ಸಂದರ್ಭದಲ್ಲಿ ಶ್ರೀ ಜಗನ್ನಾಥದಾಸರು, ಶ್ರೀ ಪ್ರಸನ್ವೇಂಕಟದಾಸರ "ಭಾಗವತ", "ನಾರಾಯಣ ಪಂಜರ" ಗ್ರಂಥಗಳನ್ನು ಓದಿ ಭಕ್ತಿ, ಭಾವ ಪರವಶರಾಗಿ ಅವುಗಳನ್ನು ತಲೆ ಮೇಲೆ ಹೊತ್ತುಕೊಂಡು ತಂಬೂರಿಮೀಟುತ್ತಾ ಹೆಜ್ಜೆ ಹಾಕಿದರು.

"ಕಂಡ-ಕಂಡಲ್ಲಿ ವಿಶ್ವರೂಪ ಕಾಂಬುವರೋ
ಉಂಡುಣಿಶಿದ್ದೆಲ್ಲ ನಿನ್ನ ಯಜ್ಞವೆಂಬರೋ
ಬಂಡುಣಿಯಂದದಿ ನಾಮಾಮೃತದ ಸವಿಯುವರೋ
ಹೆಂಡರು-ಮಕ್ಕಳು ನಿನ್ನ ತೊಂಡಿರೆಂಬರೋ"

ಬರೇ ಕಂಡಲೆಲ್ಲ ಅವನ ವಿಶ್ವರೂಪವನ್ನು ಕಾಣುವವರು ಇಂಥಹ ಮಹಾನುಭಾವರಲ್ಲದೆ ಮತ್ಯಾರು? ಅದಕ್ಕೆ ಅಲ್ಲವೆ ಇಂಥಹ ಅತ್ಯಮೂಲ್ಯ ಗ್ರಂಥಗಳು, ಕೀರ್ತನೆಗಳು ಹುಟ್ಟಿದ್ದು.

ಆ ದೃಶ್ಯವನ್ನು ನೋಡುತ್ತಾ ಅವರ ಹಾಡು ಕೇಳುತ್ತ ಜನರ ಎದೆ ತುಂಬಿ ಬಂದು ಭಕ್ತಿಯ ಕಣ್ಣೀರು ಹರಿದಿತ್ತು. ಒಂದು ಮಹಾಚೇತನ ಇನ್ನೊಂದು ಮಹಾಚೇತನವನ್ನು ಕೊಂಡಾಡುವದೆಂದರೆ?

ಶ್ರೀ ಪ್ರಸನ್ವೇಂಕಟದಾಸರ ಸಾನಿಧ್ಯದಲ್ಲಿ ಕಳೆದ ಆ ನಾಲ್ಕು ದಿನಗಳು ಶ್ರೀ ಜಗನ್ನಾಥ ದಾಸರಿಗೆ ಕೂಡ ಅಪೂರ್ವ ಗಳಿಗೆಗಳಾಗಿದ್ದವು. ಇರುವ ನಾಕು ದಿನ ಶ್ರೀಜಗನ್ನಾಥದಾಸರು ಶ್ರೀ ಪ್ರಸನ್ವೇಂಕಟ ದಾಸರು ಪೂಜಿಸುವ ವಿಗ್ರಹಗಳನ್ನು ಅವರೂ ಪೂಜಿಸುತ್ತಿದ್ದರು. ದೇವರು ಪೆಟ್ಟಿಗೆ ತೆರೆದು ಕೈಯಲ್ಲಿ ವಿಗ್ರಹಗಳನ್ನು ಹಿಡಿದು ಒಂದೆರಡುಗಳಿಗೆ ದಿಟ್ಟಿಸುತ್ತಿದ್ದರು. ಮೈಯಲ್ಲಿ ಒಂದು ರೀತಿಯ ಆನಂದದ ಅನುಭವ ಕೈಯಲ್ಲಿ ಹಿಡಿದದ್ದು ಬರೀ ವಿಗ್ರಹಗಳಲ್ಲಿ ಆ ನನ್ನಪ್ಪ ವೇಂಕಟರಮಣನೇ ಎದುರಿಗೆ ಬಂದು ನಿಂತಂತಿತ್ತು. ಆನಂದ ಭಾಷ್ಪಗಳನ್ನು ಕಣ್ಣಲ್ಲಿ ಸುರಿಸುತ್ತ ಜಗನ್ನಾಥ ದಾಸರು. ಎದುರಿಗೆ ತಂಬೂರಿ ಮೀಟುತ್ತಾ ಕುಳಿತ ಪ್ರಸನ್ವೇಂಕಟ ದಾಸರಿಗೆ ಹೇಳುವದುಂಟು.



"ದಾಸರೇ ತಾವು ಪೂಜಿಸುವ ಈ ವಿಗ್ರಹಗಳಲ್ಲಿ ನನ್ನಪ್ಪನೇ ಬಂದು ಮೈದುಂಬಿ ನಿಂತಿದ್ದಾನೆ. ಧನ್ಯ ಪ್ರಸನ್ವೇಂಕಟ ದಾಸರೆ" ಎಂದು ಶ್ರೀ ಜಗನ್ನಾಥದಾಸರು ಕೈಮುಗಿದರೇ ದಾಸರು ವಿನಯದಿಂದ.

"ಅದು ನಿಮ್ಮ ಭಕ್ತಿ, ನನ್ನಪ್ಪನ ದಯೆ" ಎನ್ನುತ್ತಿದ್ದರು ನಾಲ್ಕು ದಿನಗಳ ನಂತರ ಇಬ್ಬರೂ ಅಗಲುವಾಗ ಮಾತ್ರ ಇಬ್ಬರ ಹೃದಯ ಮನಸ್ಸು ಭಾವ ತುಂಬಿಬಂದು ಯಾವದೋ ವಿಷ್ಣತೆಯ ತೆರೆ ಇಬ್ಬರನ್ನು ಬಂಧಿಸಿತ್ತು.

ಪ್ರಪಂಚ ನಶ್ವರ ಎನ್ನುವದು ಇಬ್ಬರಿಗೂ ಗೊತ್ತು. ಮನುಷ್ಯ-ಮನುಷ್ಯನನ್ನು ಅಗಲುವ ಕ್ಷಣ ಕೂಡ ಪ್ರಪಂಚದ ರೀತಿಯದು. ಅದನ್ನು ಇಬ್ಬರೂ ತಿಳಿದಿದ್ದಾರೆ. ಆದರೂ ಯಾಕೆ ಈ ವಿಷಣ್ಣತೆ.

'ಖರೇ ನಾವೂ ಮನುಷ್ಯರೇ, ಅಗಲುವ ಕ್ಷಣ ಕೂಡ ಲೌಕಿಕದ ರೀತಿಗೆ ಬದ್ಧವಾಗಿದ್ದು, ಆದರೆ ನಮ್ಮಲ್ಲಿರುವ ಹರಿ ಒಬ್ಬನೆ ಅಲ್ಲವೆ ? ಆ ನಿರಂತತೆಯಲ್ಲಿ ನಾವು ಹರಿಭಕ್ತರು ಯಾವಾಗಲೂ ಒಂದೆ' ಎಂದರು ಒಬ್ಬರು. ಆದರೆ ಯಾವದೂ ಮಾತಿನ ರೂಪ ಪಡೆದು ಬರಲಿಲ್ಲ ಬಾಗಿದ ಶ್ರೀ ಜಗನ್ನಾಥ ದಾಸರನ್ನು ಎರಡು ಕೈಯಿಂದ ಎತ್ತಿ ಪ್ರಸನ್ವೇಂಕಟರು ಅನನ್ಯ ಅಂತಃಕರಣದಿಂದ ಹೇಳಿದರು.

"ದಾಸರೇ ಮಹಾನುಭಾವರಾಗಬೇಕಾದವರು ನೀವು-ನಿಮ್ಮಿಂದ ಬಹಳ ಮಹತ್ಕಾರ್ಯ ಆಗಬೇಕಿದೆ. ಮಧ್ವಸಿದ್ಧಾಂತದ ಸರ್ವ-ಮೂಲ ತತ್ವಗಳನ್ನು ಸಿದ್ಧಾಂತಗಳನ್ನು ಸರಳ ಶಬ್ದರೂಪದಲ್ಲಿ ಹಿಡಿದು ಜನಗಳ ಮುಂದೆ ಇಡಬೇಕಿದೆ. ಅದರ ಸವಿಯನ್ನು ಭಗವದ್ಭಕ್ತರು ಸವಿಯಬೇಕಿದೆ. ಇದು ನನ್ನಪ್ಪ ಶ್ರೀನಿವಾಸನ ಇಚ್ಛೆ. ನಿಮ್ಮ ಭವಿಷ್ಯದ ಬದುಕು ಕೂಡ ಬ್ರಹ್ಮಾಂಡವಾಗಲಿದೆ" ಹೋಗಿ ಬನ್ನಿ – "ಎಂದವರನ್ನು ಭಕ್ತಿ-ಪರವಶತೆಯಿಂದ ನೋಡುತ್ತಾ ಕಣ್ಣು ತುಂಬಿಕೊಳ್ಳುತ್ತಾ ಕೈ ಎತ್ತಿ ಮುಗಿದು ತಂಬೂರಿ ಮೀಟುತ್ತಾ ಹೊರಟರು ಜಗನ್ನಾಥದಾಸರು.

ಖರೇ ಅಲೌಕಿಕತೆ ಕೂಡ ಲೌಕಿಕದ ಸಂಬಂಧದಲ್ಲಿ ಪ್ರಪಂಚದ ರೀತಿ ನೀತಿಗಳನ್ನು ತೋರುತ್ತದಲ್ಲ, ಪ್ರಪಂಚದ ಸಂಬಂಧಗಳು ನಮಗೆ ಬೇಡವೆಂದರೂ ಆ ಶ್ರೀ ಹರಿಯು ಇನ್ನೊಂದು ರೂಪದಲ್ಲಿ ಅವು ನಮ್ಮನ್ನು ಕಟ್ಟಿ ಹಾಕುವಂತೆ ಮಾಡುತ್ತೇವೆ. ಎಲ್ಲರಲ್ಲಿ ಹರಿಯನ್ನು ಕಾಣುವ ನಮಗೆ ಪ್ರಪಂಚದ ಎಲ್ಲ ಸಂಬಂಧಗಳು ಬೇಕು ಅದರಿಂದ ವಿಮುಖರಾಗಿ ತಿರುಗಲು ಹೇಗೆ ಸಾಧ್ಯ?

ಪ್ರತಿ ಜೀವಿಯಲ್ಲಿ ಹರಿಯನ್ನು ಕಂಡಿದ್ದರೆಂದೆ ಅಲ್ಲವೇ ಮಂತ್ರಾಲಯ ಶ್ರೀ ರಾಘವೇಂದ್ರರು ಪ್ರಪಂಚವೇ ತನ್ನದೆಂದು ಪ್ರತಿ ಜೀವಿಯ ಕಷ್ಟ ಕೋಟಲೆಗಳನ್ನು ತಮ್ಮೊಡಲಲ್ಲಿ ಹೊತ್ತು ಕೊಂಡವರು. ದಾಸರವಾಣಿ ಮತ್ತೆ ನೆನಪಾಯಿತು ಭೇಟಿಯಾಗೋಣ ಮತ್ತೆ ನಮ್ಮಪ್ಪನ ಸಾನಿಧ್ಯದಲ್ಲಿ ಎಂದಿದ್ದರಲ್ಲವೇ ಜಗನ್ನಾಥ ದಾಸರು? ಹಾಗಾದರೆ ಅವನ ಕರೆ ತಮಗೆ ಹತ್ತಿರವಾಗಿದೆಯೆ?

ದಾಸರು ನಡೆದು ಹೋದ ಹಾದಿ ಈಗ ಮೌನವನ್ನು ಹೊದ್ದು ಮಲಗಿತ್ತು ಗೆಜ್ಜೆಯ ಸದ್ದು, ತಂಬೂರಿಯ ನಾದ ಎರಡು ಮಾಯವಾಗಿ ಈಗ ಅದೇ ಜಾಗದಲ್ಲಿ ಅಂಗಳದ

ಬಿಸಿಲಿನಂತೆ ಮನಸ್ಸಿನ ಭಾವನೆಗಳು ಕೂಡ ತನ್ನದೆ ಆದ ರೀತಿಯಲ್ಲಿ ಆಕಾರ ಪಡೆಯುತ್ತಾ ನಡೆದಿದ್ದವು.

"ವೆಂಕಣ್ಣ ಒಳಗೆ ಬಾಪಾ ಅದೇನೋ ನಾಳೆ ಮತ್ತೆ ಸಂಚಾರಕ್ಕೆ ಹೋಗ್ಬೇಕು ಅಂತಿದ್ದಿ ಹೋಗಾವ ಇದ್ದೀ ಏನು?"ಎಂದು ಕಾವೇರಕ್ಕನ ಮಾತಿಗೆ ದಾಸರು ಒಳಬಂದು ಪಡಸಾಲೆ ಗೋಡೆಗೆ ಆತು ಕುಳಿತರು.

ಎಂಟು ದಿನ ಈ ಪಡಸಾಲೆ ಅಂಗಳ ಹೇಗೆ ಜೀವ ತಳೆದು ನಿಂತಂತಿತ್ತು ಮನೆಯ ಪ್ರತಿಯೊಂದು ಗೋಡೆ ಕಂಬ ಕಿಟಕಿ ಬಾಗಿಲು ಹರಿಯ ನಾಮವೊಂದನ್ನು ಉಸಿರಾಡುತ್ತಿವೆ ಏನೋ ಎನ್ನುವಂತೆ ಮನಸ್ಸಿನ ತುಂಬ ಕಿವಿಯ ತುಂಬ ಅದೇ ನಾಮ ಪದಗಳು ದಾಸರ ಸನ್ನಿಧಿಯಲ್ಲಿ ಅವರ ಮಾತುಗಳಲ್ಲಿ ತುಂಬಿ ಕೆನಿಗಟ್ಟಿನಿಂತ ಭಕ್ತಿಯ ರಸ ಎಷ್ಟು ಸವಿದರೂ ಸಾಲದು ಎಂಬಂತೆ ಅವರು ಹೊರಟುಹೋದರೂ ಅವರುಳಿಸಿ ಹೋದ ಭಕ್ತಿಯ ಪರಿಮಳ ಎಲ್ಲೆಡೆ ಸುಗಂಧ ಸೂಸುತ್ತೆ ಹರಡಿದೆ.

"ಧನ್ಯ ವೆಂಕಣ್ಣ ಧನ್ಯ" ಎಂದು ಕೊಳ್ಳುತ್ತಿದ್ದರು ತನ್ನ ತಾವೆ ಭಗವದ್ಭಕ್ತನ ಜೀವನ ಸಾಧನೆಯೆ, ಹಾಗೇ, ಎಷ್ಟು ಸಾಧನೆಗೈದರು ತಾನು ಮಾತ್ರ ಶೂನ್ಯ ಎನ್ನುವಂತೆ

"ಹೌದು ತಾನು ಸಾಧಿಸಿಬೇಕಾದ್ದು ಇನ್ನು ಇದೆ ಎನ್ನುವ ಪ್ರಲೋಭನೆ ತನಗೆ.

ಯಾಕೋ ಮತ್ತೆ ಸಂಚಾರಮಾಡುತ್ತ ಆ ನನ್ನಪ್ಪನನ್ನು ಕಾಣಬೇಕೆಂಬಾಸೆ ಮತ್ತು ಅವನ ದರ್ಶನ ಪಡೆಯಬೇಕೆನಿಸಿದಾಗ ದಾಸರು ಮತ್ತೆ ತಿರುಪತಿಗೆ ಹೋಗಿ ಬಂದರು. ಅವನ ಮನೋಹರ ಮೂರ್ತಿಯ ಮುಂದೆ ಎಷ್ಟು ನಿಂತರೂ ತೃಪ್ತಿಯಾಗದ ಮನಸ್ಸು ಬರುತ್ತ ಹಲವು ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿದರು ಉತ್ತರಾಧಿಮಠವ ಸಂಸ್ಥಾನವನ್ನಾಳಿದ ಶ್ರೀ ಸತ್ಯಾಧಿರಾಜರ ಸಾನಿಧ್ಯದಲ್ಲಿ ನಾಲ್ಕು ದಿನವಿದ್ದರು ಶ್ರೀರಾಮದೇವರ ಪೂಜೆ ದರ್ಶನದಿಂದ ಪುನೀತರಾಗಿದ್ದರು.

"ಸ್ವಾಮಿ ಸತ್ಯಾಧಿರಾಜ ಮುನಿಗೆಣೆಗಾಣೆ ನಾ  
ಭೂಮಿಯಾಮ್ಯಾಲೆ ಚತುರನಾ  
ಸಾಮರ್ಥ್ಯ ನೋಡಿರಿ ಭಕುತಿಯಾ ನರಿಯದ  
ಪಾಮರರನು ಬಾಗಿಸುವವನ"

ಹೌದಲ್ಲ ಭಗವದ್ಭಕ್ತರು ಸರ್ವಸಂಗಪರಿತ್ಯಾಗಿ ಶ್ರೀ ರಾಮನ ಸೇವೆಯನ್ನೇ ಮುಕ್ತಿಗಾಗಿ ಆರಿಸಿಕೊಂಡವರು ಅಂಥ ಮಹಾನುಭಾವರ ಮುಂದೆ ನಿಂತ ದಾಸರು ಹಾಡಿದಾಗ ಶ್ರೀ ಸತ್ಯರಾಜರಿಗೂ ಕೂಡ ಇವರ ಬಗ್ಗೆ ಅಭಿಮಾನ ಧನ್ಯತಾಭಾವ ಮೂಡಿರಬೇಕು.

ಅವರ ಅನುಗ್ರಹ ತೆಗೆದುಕೊಂಡು ಬಾಗಲಕೋಟೆಗೆ ಬಂದ ಮೇಲೆ ದಾಸರಿಗೆ ದಿನಗಳ ಮೇಲೆ ದಿನಗಳು ಉರುಳಿದವು ಬಾಗಲಕೋಟೆಗೆ ಬಂದ ಮೇಲೆ ಅವರ ಜೀವನದ ರೀತಿ ಅವರ ಮಹಿಮೆ ಪವಾಡಗಳು ಅವರ ಭಕ್ತರ ಗುಂಪನ್ನು ಹೆಚ್ಚಿಸಿತ್ತು. ಓಣಿಯ ಜನ ಸುತ್ತಮುತ್ತಲಿನ



ಜನ ಅವರ ಸಾನಿಧ್ಯಕ್ಕಾಗಿ ಹಾತೊರೆದು ಬರುತ್ತಿದ್ದರು. ಸಮಸ್ಯೆಗೆ ತಮ್ಮ ತಮ್ಮ ಕಷ್ಟ ನೋವುಗಳಿಗೆ ಪರಿಹಾರ ಕೇಳುತ್ತಿದ್ದರು ನನ್ನದು ಏನಿಲ್ಲಪ್ಪ ಎಲ್ಲ ಆ ನಮ್ಮಪ್ಪ ಶ್ರೀ ಹರಿದು ಎಂದರೆ "ನಿಮ್ಮ ಸಾನಿಧ್ಯ ಅಷ್ಟೇ ಸಾಕು ದಾಸರೆ ಅದೇನಮಗೆ ಭಗವಂತನ ಸಾನಿಧ್ಯ" ಎಂದು ಅವರ ಕಾಲಿಗೆ ಎರಗುತ್ತಿದ್ದರು.

ಏನಿದು ಬಂಧನ ಎನಿಸುತ್ತಿತ್ತು ದಾಸರಿಗೆ, ತಾನು ಅವರಿಂದ ದೂರವಿದ್ದರೂ ಮತ್ತೆ ಮತ್ತೆ ಬಂದು ಹಬ್ಬುವ ಬಳ್ಳಿಯಂತೆ ಜನ ತಮ್ಮ ಸುತ್ತಲೂ ಸುಳಿದಾಡುವಾಗ ತಮಗೆ ಏಕಾಂತತೆ ಬೇಕು ಎನಿಸುತ್ತಿತ್ತು. ಇಷ್ಟು ದಿನ ಹಾಗೆನಿಸಿದಾಗಲೆಲ್ಲ ತಿರುಪತಿ, ತುಳಸಿಗೇರಿ ದ್ವಾರಕೆ, ಮಥುರೆ, ಎಂದು ಸಂಚಾರ ಮಾಡಿಬಂದದ್ದಾಯಿತು ಆಗಾಗ ಬಾದಾಮಿಗೂ ಕೂಡ ಹೋಗಿ ಅಲ್ಲಿ ತೃಪ್ತಿಯಾಗುವಷ್ಟು ಇದ್ದು ಏಕಾಂತದಲ್ಲಿ ಧ್ಯಾನಕ್ಕೆ ಕೂಡುವದಿತ್ತು.

ಯಾಕೋ ಈಗ ಮತ್ತೆ ದಕ್ಷಿಣ ಕಾಶಿ ಎನಿಸಿದ ಅದೇ ಬಾದಾಮಿಗೆ ಹೋಗಿ ತಾಯಿ ಬನಶಂಕರಿ ಸಾನಿಧ್ಯದಲ್ಲಿ ಅಲ್ಲಿರುವ ಬೆಟ್ಟ ಗುಡ್ಡ ಅಗಸ್ತ್ಯ ತೀರ್ಥದ ಸನ್ನಿಧಾನದಲ್ಲಿ ಆ ತನ್ನಪ್ಪನ ಧ್ಯಾನದಲ್ಲಿ ಏಕಾಂತವಾಗಿರಬೇಕು ಎನಿಸುತ್ತಿತ್ತು. ಮನಸ್ಸಿನ ಭಾವನೆಗಳು ಕೊನೆಯಿಲ್ಲದೆ ಹಂಬಲಿಸುವಾಗ ತಂಬೂರಿತೆಗೆದುಕೊಂಡು ಕಣ್ಮುಚ್ಚಿ ಅನನ್ಯಭಕ್ತಿಯಿಂದ ಮೀಟುತ್ತಿದ್ದರು. ಅದು ಬರೀ ತಂಬೂರಿಯ ಮಿಡಿತವಾಗಿರಲಿಲ್ಲ ಅವರು ಎದೆಯಾಳದ ಆರ್ತನಾದ ಕೂಡ ಆಗಿತ್ತು.

"ರಕ್ಷಿಸಲರಿಯೆನೊ ರಂಗಯ್ಯ ಎನ್ನಲಕ್ಷಸಲರಿ ಏನು  
ಲಕ್ಷ್ಮೀಪತಿ ಎನ್ನ ಇಕ್ಷಿಸಿ ಕರುಣಾಕಟಾಕ್ಷದಿ"

"ವೆಂಕಣ್ಣ" ಅದೇ ಪಡಸಾಲೆಯ ಬಾಗಿಲಿಗೆ ಬಂದು ನಿಂತಳು ಕಾವೇರಕ್ಕ ಕಣ್ಮುಚ್ಚಿ ಭಗವಂತನ ಸಾನಿಧ್ಯದಲ್ಲಿ ಒಂದಾಗುವ ಹಂಬಲಿಸುವ ಧ್ವನಿ ಅವರದು ಅತ್ತಿಗೆಯ ಧ್ವನಿ ಎಲ್ಲಿ ಕೇಳಬೇಕು.

"ವೆಂಕಣ್ಣ" ಮತ್ತೇ ಅದೇ ಧ್ವನಿ ದಾಸರು ಕಣ್ತೆರೆದು ನೋಡಿದರು ಕಣ್ಣೀರು ತುಂಬಿ ನಿಂತಿದ್ದಾಳೆ ಅತ್ತಿಗೆ.

"ವೈನಿ ಯಾಕ ಈ ಕಣ್ಣೀರು?

"ಮಗ ತಾಯನ್ನ ಬಿಟ್ಟು ಹೋಗ್ತಾನ ಅಂದ್ರ ತಾಯಿಗೆ ದುಃಖ ಆಗಂಗಿಲ್ಲ ವೆಂಕಣ್ಣ"

"ಅರ್ಥ ಆಗ್ಲಿಲ್ಲ ವೈನಿ, ಈಗ ಯಾರು ಹೊಂಟಾರ? ರಾಮಣ್ಣ ಎಲ್ಲ್ಯಾರ ಹೊಂಟಾನೇನು?

"ರಾಮಣ್ಣನ ಮಾತು ನಾ ಹೇಳಿಲ್ಲಪಾ ಆವಾ ನನಗೆ ಸ್ವಂತ ಮಗ ಆದ್ರೂ ಆಂವಾ ನನ್ನಿಂದ ದೂರ ಹೋದ್ರು ನನಗೆ ಸಂಕಟ ದುಃಖ ಆಗ್ತೀರಲಿಲ್ಲ ನೋಡು ನಮಗೂ ವಯಸ್ಸಾತು. ನೀ ಕಣ್ಮುಂದೆ ಇದ್ರ ನಮಗೂ ನಿರಂಬಳ ಅನಸ್ತದ"

ದಾಸರು ಮೃದುವಾಗಿ ನಕ್ಕರು ವೈನಿ ಯಾಕ ಇಂಥಾ ಮೋಹ ? ನೋಡ್ರಿ ಅರಿದೋ ಅರಿದನೋ ನನ್ನ ವೈರಾಗ್ಯಕ್ಕ ಕಾರಣ ಆದವ್ರು ನೀವು ಈ ನಿಮ್ಮ ಉಪಕಾರ ಜನ್ಮ ಜನ್ಮಕ್ಕೆ ಮರೆಯಂಗಿಲ್ಲ ಈಗ ಮತ್ತೆ ನನ್ನ ಸಾಧನಾದ ಹಾದಿಗೆ ಬೆಳಕು ತೋರವ್ರು ನೀವ

"ಅಂದ್ರೇನಪಾ"

"ವೈನಿ ಈ ನನ್ನ ಕೊನೆಗಾಲಕೆ ಬಾದಾಮಿಗೆ ಹೋಗಿ ಅಲ್ಲಿ ಜೀವನಾ ಕಳಿಬೇಕಂತೆ ಆ ನನ್ನ ತಿಮ್ಮಪ್ಪನ ಪ್ರೇರಣಾ ಆಗೇದ ಅಲ್ಲೆ ನನ್ನ ಸಾಧನಾ ಮುಂದುವರೆಯಬೇಕು ವೈನಿ ದೊಡ್ಡವರು ನೀವು ತಾಯಿ ಸಮಾನ ಆಶೀರ್ವಾದ ಮಾಡಿ ಕೊಟ್ಟು ಕಳಿಸಿರಿ"

"ಆದ್ರ ಊರ ಜನ ಬಿಡಬೇಕಲ್ಲಪಾ"

"ಆ ಊರಿನ ಜನಕ್ಕೂ ನನ್ನ ಮ್ಯಾಲಿನ ಮೋಹ ಬ್ಯಾಡಂತ ನಾನು ಬಿಟ್ಟು ಹೊಂಟಿನ್ರಿ ಅವರವರ ಮುಕ್ತಿ ಮಾರ್ಗ ಅವ್ರು ನೋಡ್ಕೋತ್ತಾರೆ ಎಂದು ಕಣ್ಮುಚ್ಚಿ ಮತ್ತೆ ಅಂತರಂಗದ ಧ್ಯಾನದಲ್ಲಿ ಲೀನವಾದರು.

"ಪ್ರಾಚೀನ ಕರ್ಮದಿಂದ ನಾ ದಣಿದ ಮೇಲೆ

ನಾಚಿಕೆನ್ನಾರಿಗಯ್ಯಾ ಹೇ ಜೀಯಾ"

ಕಾವೇರಕ್ಕ ಮಾತನಾಡದೆ ಕಣ್ಣೊರಿಸಿಕೊಂಡು ಒಳಹೋದಳು.

ಮುಂದೆ ಎರಡು ದಿನವೂ ದಾಸರ ಮನೆಯಲ್ಲಿ ಊರಿಗೆ ಊರೇ ಬಂದು ಬಂದು ಅಡ್ಡಬಿದ್ದು ಹೋಗುತ್ತಿದ್ದರು

"ಬ್ಯಾಡ್ರಿ ದಾಸರ ನೀವು ಹೋಗ್ಬ್ಯಾಡ್ರಿ ನಮ್ಮನ್ನ ಅನಾಥರನ್ನೇ ಮಾಡಬ್ಯಾಡ್ರಿ"

"ಯಾರು ಅನಾಥರಲ್ರಪ್ಪಾ ಎಲ್ಲಾರಿಗೂ ಆ ನಮ್ಮ ಶ್ರೀ ಹರಿ ಇದ್ದಾನ ಅವನ ಎಲ್ಲರಿಗೂ ಅವ್ವಾ ಅಪ್ಪಾ, ಹಾದಿ ತೋರಸಾಂವಾ ಅಂಥಾವನ ಮುಂದ ನೀವು ಅನಾಥ ಯಾಕ ಆಗ್ತೀರಿ?"

"ಭಗವಂತ ನಮ್ಮ ಕಣ್ಣಿಗೆ ಕಾಣಸಂಗಿಲ್ಲ ದಾಸರ ಆದ್ರ ನೀವು ನಮ್ಮ ಕಣ್ಣಿಗೆ ಕಾಣಿಸೋ ದೇವರು"

"ಹುಚ್ಚಪ್ಪ ಗೋಳ್ರಾ ಆ ನಮ್ಮ ತಿಮ್ಮಪ್ಪನ ಹಿಡಿರಿ, ಸಮರ್ಪಣಾ ಭಾವದಿಂದ ಅವನ್ನ ಕರೀರಿ, ಬಂದು ನಿಮ್ಮ ಮುಂದ ನಿಂದ್ರತಾನ ಜಗತ್ತು ಉದ್ಧಾರ ಮಾಡಬೇಕೊಂತ ಬಂದು ಈ ಭೂಲೋಕದಾಗ ನಿಂತಾನ ಅಂವಾ ನೀವೆಲ್ಲಾ ತಿಳಿದವ್ರು ನಾ ಏನು ಹೇಳೇನು ನಿಮಗೆ? ಆದಷ್ಟು ಧರ್ಮಮಾರ್ಗ ದೊಳಗ ನಡೀರಿ, ಧರ್ಮ ಅನ್ನೋದು ಮನುಷ್ಯತ್ವದೊಳಗೆ ಇರ್‍ತದ ಪ್ರತಿಯೊಂದು ಜೀವದೊಳಗ ಆ ಭಗವಂತನನ್ನೆ ಕಾಣ್ರಿ ಎಲ್ಲಾನು ಅಂವಗ ಒಪ್ಪಿಸರಿ ಇದು ಬದುಕಿನ ಮಂತ್ರ, ಮುಕ್ತಿ ಮಾರ್ಗಕ್ಕೆ ಹಾದಿ" ಎನ್ನುತ್ತಿದ್ದರು.

ಊರಿನ ಜನ ಓಣಿಯಜನ ಮನೆಯ ಜನ ನೋಡುತ್ತಿದ್ದಂತೆ ದಾಸರು ಕಿಲ್ಲೆಯ ಹಾದಿಗುಂಟ ನಡೆದು ರಸ್ತೆಯಂಚಿನ ಕೊತ್ಲಪ್ಪನ ಗುಡಿ ಮುಂದೆ ನಿಂತು ತಲೆಬಾಗಿ ಮಿಂಚಿನಂತೆ ಕಣ್ಮರೆಯಾದರು.

ದಾಸರು ಊರು ಬಿಟ್ಟು ಹೋದ ಮೇಲೆ ಜನ ಏನೋ ಮಹತ್ತರವಾದುದನ್ನು ಕಳೆದುಕೊಂಡಂತೆ ಒದ್ದಾಡುತ್ತಿದ್ದರು ನಿಂತಲ್ಲಿ ನಿಲ್ಲಲಾಗುತ್ತಿರಲಿಲ್ಲ ಏನೋ ಚಡಪಡಿಕೆ ದುಃಖ ಆ ದುಃಖದ ಭಾವ ಅವರ ಮನೆಯಲ್ಲೂ ಕೂಡ ತುಂಬಿತ್ತು.



ಗಳಿಗೆಗೊಮ್ಮೆ ಸೆರಗಿನಿಂದ ಕಣ್ಣೊರಿಸಿಕೊಳ್ಳುತ್ತಿದ್ದ ಹೆಂಡತಿಗೆ ಹೇಳಿದ್ದ ರಾಘಣ್ಣ

"ಅಳಬ್ಯಾಡಾ ಅಂವಾ ಬರೀ ಈ ಮನಿಗೆ ಅಷ್ಟ ಸೀಮಿತ ಅಲ್ಲ ಕಾವೇರಿ ಆ ಭಗವಂತನಿಗೆ ಸೇರಿದವಾ, ಅವನಿಂದ ನಾವೆಲ್ಲ ಉದ್ಧಾರ ಆಗ್ತೀವಿ ಮುಂದಿನ ನಮ್ಮ ವಂಶ ಅವನಿಂದ ಉದ್ಧಾರ ಆಗ್ತೆದ ಜ್ಯೋತಿನ ಮನ್ಯಾಗಿಟ್ಟು ಕೊಂಡು ಮುಚ್ಚಿಡ್ತೀನಿ ಅನ್ನೋದು ಹುಚ್ಚುತನ" ಎಂದಿದ್ದ ಆ ಸತ್ಯ ಎಲ್ಲರಿಗೂ ಗೊತ್ತಿತ್ತು ಆದರೆ ಎಲ್ಲರಿಗೂ ಅವರದೇ ಆದ ಭಾವನೆಗಳುಂಟಲ್ಲ ಇನ್ನು ಮೇಲೆ ದಾಸರ ಸಾನಿಧ್ಯ ಅವರ ರೀತಿ ನೀತಿ ಮಾತು ತಾತ್ವಿಕ ಆಲೋಚನೆ ಭಗವಂತನ ಧರ್ಮದ ಮಧ್ವಸಿದ್ಧಾಂತದ ವರ್ಣನೆ ಯಾವುದೋ ಕೇಳದೇ ಬದುಕುವುದಾದರೂ ಹೇಗೆ?

ಆದರೂ ಮುಂದಿನ ದಿನಗಳಲ್ಲಿ ತಮ್ಮದೆ ಆದ ಲೌಕಿಕ ಚಿಂತನೆಗಳಲ್ಲಿ ಮುಳುಗಿ ಜನ ತಮ್ಮದೇ ಆದ ಬದುಕಿನ ರೀತಿ ನೀತಿಗೆ ಬದ್ಧರಾದರು. ಮುಂದಿದ್ದ ಬದುಕನ್ನೂ ದಾಸರು ಹಾಕಿ ಕೊಟ್ಟ ಮುಕ್ತಿ ಹಾದಿಯಲ್ಲಿ ಕಳೆದರಾಯ್ತು ಎನ್ನುವ ನಿಶ್ಚಿಂತಭಾವದಿಂದ ಬದುಕು ಸಾಗಿಸುತ್ತಿದ್ದರು.

ದಾಸರ ಬದುಕಿನ ಅಧ್ಯಾಯ ಮತ್ತೊಂದು ಹಂತದಲ್ಲಿ ಸುರುವಾಗಿತ್ತು ದಾಸರು ಬಾದಾಮಿಗೆ ಬಂದದ್ದು ಇದೇ ಮೊದಲಲ್ಲ ಇದಕ್ಕೂ ಮೊದಲು ಅನೇಕ ಬಾರಿ ಬಂದಿದ್ದುಂಟು ಅಗಸ್ತ್ಯ ತೀರ್ಥದಲ್ಲಿ ಸ್ನಾನ ಮಾಡಿ ದೇವಿಯ ದರ್ಶನ ಮಾಡಿ ಅಲ್ಲಿಯೇ ಬೆಟ್ಟಗುಡ್ಡಗಳಲ್ಲಿ ಏಕಾಂತವನ್ನರಸಿ ಧ್ಯಾನಕ್ಕೆ ಕೂಡುವುದಿತ್ತು ಮನಸ್ಸಿನ ಒಂದು ಸ್ಥಿತ್ಯಂತರಕ್ಕೆ ಹಾದಿ ತೋರಿದ ನೆಲೆ ಇದು. ಕೊನೆಗಾಲದಲ್ಲಿ ಇಲ್ಲಿಗೆ ಬರಬೇಕೆಂಬ ಅಪೇಕ್ಷೆ ಕೂಡ ಅವರದಿತ್ತು ಹೀಗಾಗಿಯೇ ಅವರಂಥ ತಪಸ್ವಿಗಳು ಆಗಾಗ ಬರುವುದನ್ನು ಕಂಡು ಅವರಿಗೆ ಅನಕೂಲವಾಗಲೆಂದೇ ಅಲ್ಲಿಯ ಕಿಲ್ಲೇದಾರ ಖಂಡೋಪಂಥ ಘೋರ್ಪಡೆ ಎನ್ನುವವನು ಅಲ್ಲಿಯೇ ಎರಡು ಮನೆಗಳನ್ನು ದಾಸರಿಗೆ ದಾನರೂಪವಾಗಿ ಕೊಟ್ಟಿದ್ದನು ಹೀಗಾಗಿ ನಿಲ್ಲಲು ನೆಲೆಯಿತ್ತು ಆದರೆ ಈ ಲೌಕಿಕದ ನೆಲೆಗಿಂತ ಅವರಿಗೆ ಬೇಕಾದದ್ದು ಮಾನಸಿಕವಾಗಿ ಆ ಭಗವಂತನ ಸಾನಿಧ್ಯದಲ್ಲಿ ನೆಲೆಗೊಳ್ಳುವುದು ಅಂಥಹ ಮಹಾತ್ಮರಿಗೆ ಅದೇನು ಸಿದ್ದಿಸದ ಹಾದಿಯಲ್ಲವಲ್ಲ.

ಸ್ವತಃ ಪರಮಾತ್ಮ ನನ್ನೆ ಸಾಕ್ಷಾತ್ಕಾರಿಸಿ ಕೊಂಡವರಲ್ಲಿವೇ ಅವರು? ಆದರೂ ಸಾಧನೆಗೊಂದು ಹಾದಿ ಬೇಕಲ್ಲ?

ಈಗ ಈ ದಕ್ಷಿಣ ಕಾಶಿ ಎನಿಸಿಕೊಂಡ ಬಾದಾಮಿ ಅವರ ಮುಂದಿನ ಸಾಧನದ ಹಾದಿಗೆ ಪ್ರಶಸ್ತವಾಗಿ ಕಂಡಿರಬೇಕು. ಬೆಟ್ಟ ಗುಡ್ಡ ನದಿ ಗಿಡ ಮರ ನಿಸರ್ಗದ ತವರು ಈ ವಾತಾಪಿ ಎಂಬ ಊರು ದೇವರೆಂದರೆ ನಿಸರ್ಗದ ಇನ್ನೊಂದು ಊರು ಎಂದು ತಿಳಿದವರು ಅವರು. ಬೆಟ್ಟ ಗುಡ್ಡ ಹರಿಯುವ ನೀರಿನಲ್ಲಿ ಅವನ ಚೈತನ್ಯಸ್ವರೂಪವನ್ನು ಕಂಡವರು. ಭಗವಂತನ ಇನ್ನೊಂದು ವಿಶ್ವರೂಪವೆಂದರೆ ಈ ಪ್ರಕೃತಿ ನಿಸರ್ಗ ಹರಿಯುವ ನೀರಿನಲ್ಲಿ, ಬೀಸುವ ಗಾಳಿಯಲ್ಲಿ, ಸೃಷ್ಠಿ ಲಯ ಎರಡಕ್ಕೂ ಆಧಾರವಾಗಿದ್ದ ಮಣ್ಣಿನಲ್ಲಿ, ಅಣು ರೇಣು ತೃಣಕಾಷ್ಠ ಎಲ್ಲದರಲ್ಲಿ ಭಗವಂತನ ರೂಪ ಕಂಡವರಿಗೆ ಈ ಬಾದಾಮಿ ಎಂಬ ನಿಸರ್ಗದ ಮಡಿಲು ಭಗವಂತನ ಮಡಿಲೇ ಆಗಿತ್ತು.

ಹೀಗಾಗಿ ದಾಸರು ಮುಂಜಾನೆ ಬ್ರಾಹ್ಮೀ ಮುಹೂರ್ತದಲ್ಲಿ ಎದ್ದರೆ ಕಾಲುನಡಿಗೆಯಿಂದ ಪೂರ್ವಾಭಿಮುಖವಾಗಿ ಬೆಟ್ಟ ಹತ್ತಿ ಬಂಡೆಯೊಂದರ ಮೇಲೆ ಕೂಡುತ್ತಿದ್ದರು. ಇಡೀ ನಿಸರ್ಗದ ಚೇತನಗಳ ಪಂಚಭೂತಗಳೇ ತಮ್ಮಲ್ಲಿವೆ ಎನ್ನುವಂತೆ ಕಣ್ಣು ಮುಚ್ಚಿ ಏಕಾಗ್ರತೆಯಿಂದ ಧ್ಯಾನದಲ್ಲಿ ಲೀನವಾಗುತ್ತಿದ್ದರು. ಒಳಗಣ್ಣು ತೆರೆದು ಅಂತರಂಗದ ಆಳಕ್ಕೆ ಒಂದು ಅಲೌಕಿಕತೆಗೆ ಅವರನ್ನು ಕರೆದುಕೊಂಡು ಹೋಗಿ ಇಡೀ ಬ್ರಹ್ಮಾಂಡದ ಬೆಳಕಿನಡೆಗೆ ಇವರನ್ನು ಕರೆದೊಯ್ಯುತ್ತಿತ್ತು. ಅದೇ ಪರಮಾತ್ಮ ನ ಅಂತಃಸ್ವರೂಪವಿರಬೇಕು.

ಸುಳಿಯಲ್ಲಿ ಸಿಕ್ಕಂತೆ ಆನಂದದ ಅನುಭವದೊಳಗೆ ಸುತ್ತಿ ಸುತ್ತಿ ಮೇಲಕ್ಕೆ ಬಂದು ಬಾಹ್ಯದ ಅರಿವಾಗಿ ಕಣ್ಣು ತೆರೆದರೆ ಎಂಥಹ ಬ್ರಹ್ಮಾನಂದದ ಅನುಭವ

ಜೀವ ಆತ್ಮ ಪರಮಾತ್ಮನ ಭಿನ್ನತೆ ಎಂದರೆ ಇದೇ ಇರಬೇಕು, ಜೀವ ಪರಮಾತ್ಮ ಭಿನ್ನವಾಗಿದ್ದರಿಂದಲೇ ಆನಂದದ ಅನುಭವವಾಗುತ್ತಿರಬಹುದು. ನಾನೇ ಪರಮಾತ್ಮ ಎಂದು ತಿಳಿಯುವುದಕ್ಕೂ ನನ್ನೊಳಕ್ಕೆ ಪರಮಾತ್ಮ ಇದ್ದಾನೆ ಎಂದು ತಿಳಿಯುವುದಕ್ಕೂ ಎಷ್ಟು ಅಂತರ ಪರಮಾತ್ಮನ ಧ್ಯಾನ ಆತ್ಮದ ಧ್ವನಿಯಾಗಬೇಕು. ಒಳಗಿನ ಈ ವಿಚಾರಗಳಿಂದ ಮಥಿಸಿ ಹೊರ ಅರಿವು ಬಂದಾಗ ಸುತ್ತಲೂ ಬಂಗಾರದಂಥಹ ಕಿರಣ ಇದೀಗ ಅಗಸ್ತ್ಯ ತೀರ್ಥವನ್ನು ಮುಟ್ಟಿ ನೀರಿನ ತರಂಗಗಳು ಮಿನುಗುತ್ತಿವೆ. ದಾಸರು ಸ್ನಾನ ಮುಗಿಸಿ ಮನೆಗೆ ಬಂದು ದೇವರ ಮನೆಯಲ್ಲಿ ಪೂಜೆಗೆಂದು ಕುಳಿತರೆ ಆಯಿತು. ವಿಗ್ರಹಗಳೆಲ್ಲಾ ಜೀವ ತಳೆದು ಬಂದು ಅವರೊಡನೆ ಮಾತನಾಡುತ್ತಿವೆಯೇನೋ ಎನ್ನುವಷ್ಟು ಭಕ್ತಿಯಲ್ಲಿ ಮೈಮರೆಯುತ್ತಿದ್ದರು.

ಆಭಕ್ತಿ ಅರ್ಪಣೆ ಆರ್ತತೆಯ ಭಾವದಿಂದ ಕೀರ್ತನೆಗಳು ಹೊರಬರುತ್ತಿದ್ದವು ಪೂಜೆ ಮುಗಿದರೆ ಗೆಜ್ಜೆಕಟ್ಟಿ ತಂಬೂರಿ ಹಿಡಿದು ಮೈಮರೆತು ಹಾಡುವುದುಂಟು.

ಪೂಜೆ ಅಡುಗೆ, ನೈವೆಧ್ಯ ಊಟ ಮುಗಿಸಿ ಮಧ್ಯಾಹ್ನದಲ್ಲಿ ಗ್ರಂಥಗಳನ್ನು ಹರಡಿಕೊಂಡು ಕೂಡುವುದುಂಟು.

ಯಾರ್‍ಯಾರೋ ಬರುತ್ತಿದ್ದರು ಹೋಗುತ್ತಿದ್ದರು ಹಣ್ಣು ಪಲ್ಯಾ ಕಾಯಿ, ತುಪ್ಪ, ಬೆಣ್ಣೆ ಎಂದು ತಂದಿಡುತ್ತಿದ್ದರು.

ಕಷ್ಟಗಳನ್ನು ಹೇಳಿಕೊಂಡು ಕೊರಗುತ್ತಿದ್ದರು

“ಭಗವಂತ ಇದ್ದಾನ್ರೆಪ್ಪಾ ಕಾಪಾಡ್ತಾನೆ” ಎನ್ನುವ ದಾಸರ ಅಂತಃಕರಣವಾದ ಮಾತೆ ಅವರಿಗೆ ಬಲವನ್ನು ತುಂಬುತ್ತಿತ್ತು.

ಆದರೆ ಏಕಾಂಗಿಯಾಗಿ ಭವ ಬಂಧನವನ್ನು ತೊರೆದು ಇರಬೇಕೆಂದರೆ ಹ್ಯಾಗೆ? ಅವರ ಅಂತಃಕರಣ ಪ್ರೀತಿಗೆ ತಾನು ಏನು ಹೇಳಲು ಸಾಧ್ಯ ಸಂಜೆಯಾದರೇ ತಮ್ಮ ಮುಂದೆ ಬಂದು ಕೂತ ಜನಕ್ಕೆ ತತ್ವ ಸಿದ್ಧಾಂತ ಧರ್ಮ ಕರ್ಮ ಹರಿನಾಮಸ್ಮರಣೆಯ ಮಹತ್ವದ ಬಗ್ಗೆ ಹೇಳುತ್ತಿದ್ದರು. ತಮ್ಮ ಕೀರ್ತನೆಗಳನ್ನು ಹಾಡಿ ಜನರ ಮನಸ್ಸನ್ನು ಭಕ್ತಿ ಸಾಗರದಲ್ಲಿ ಮುಳುಗಿಸುತ್ತಿದ್ದರು.



ಸಂಸಾರ ಸಂಬಂಧಗಳು ಸುತ್ತಲಿನ ಯಾವ ವ್ಯಾಮೋಹ ಬೇಡ ಎಂದು ತಾಯಿ ಬನಶಂಕರಿಯ ಸಾನಿಧ್ಯಕ್ಕೆ ಬಂದವನು ತಾನು. ಆದರೆ ಬಿಟ್ಟು ಬಂದ ಸುತ್ತಲಿನ ವ್ಯಾಮೋಹ ಮತ್ತೆ ತನ್ನ ಸುತ್ತಲೇ ಸುತ್ತುತ್ತಿವೆ. ಇದು ಭಗವಂತನ ಇಚ್ಛೆಯೇ ಇರಬೇಕು ಎಂದು ಅಂದು ಕೊಳ್ಳುತ್ತಿದ್ದರು. ಎಲ್ಲರೂ ಹೋದ ಮೇಲೆ ಮತ್ತೇ ರಾತ್ರಿ ಏಕಾಂತದಲ್ಲಿ ಭಗವಂತನ ಧ್ಯಾನದಲ್ಲೇ ಲೀನವಾಗುತ್ತಿದ್ದರು.

ಕೆಲವು ಸಲ ಸುತ್ತಲಿನ ಊರಿನವರು ಬರುತ್ತಿದ್ದರು. “ಯಪ್ಪಾ ನೀ ಮಹಾತ್ಮ ನಿಮ್ಮಿಂದ ನಮ್ಮ ಬಾಳು ಹಸನಾತು” ಎನ್ನುತ್ತಿದ್ದರು ದಾನಪತ್ರ ಉಂಬಳಿ ಎಂದು ಹೊಲಗಳನ್ನು ಕೊಡುತ್ತಿದ್ದರು.

“ನನಗಿದೇಲ್ಲಾ ಬ್ಯಾಡ್ರಪ್ಪಾ ಒಂಟಿ ಬಡುಕ ನಾನು ನನಗ್ಯಾಕೆ ಇದೆಲ್ಲ ನಿಮ್ಮ ಅಂತಃಕರಣ ಪ್ರೀತೀನೇ ಸಾಕು ಎಂದರೆ ಕೇಳುವವರೇ ಅವರು? “ಯಪ್ಪಾ ಇದು ನಮ್ಮ ಉದ್ಧಾರಕ್ಕೆ ಯಪ್ಪಾ”

ಎನ್ನುತ್ತಿದ್ದರು ಅವರ ಅಂತಃಕರಣ ಪ್ರೀತಿಗೆ ತಾವು ಏನು ಹೇಳಲು ಸಾಧ್ಯವಿತ್ತು. ಪ್ರಾಪಂಚಿಕ ಸುಖಗಳನ್ನು ಬಿಟ್ಟಿರಲು ಸಾಧ್ಯ ವಿದ್ದರೂ ಪ್ರಪಂಚವನ್ನು ಬಿಡಲು ತಮಗೆ ಸಾಧ್ಯವಿರಲಿಲ್ಲ ತನಗೆ ಭಕ್ತಿಜನ ಬೇಕಾಗಿತ್ತು. ಬೇಕು ಎಂಬುದನ್ನು ತೋರಿಸಿಕೊಟ್ಟವರೇ ಆ ಮುಗ್ಧ ಜನ ಅವರ ಸುಖ ದುಃಖ ಕೂಡ ತನಗೆ ಬೇಕಿತ್ತು. ಇದು ಹರಿಯ ಪ್ರೇರಣೆ ಕೂಡ ಆಗಿತ್ತು. ಜ್ಞಾನದ ಭಂಡಾರವನ್ನು ನಿನ್ನ ಕೈಗೆಕೊಟ್ಟಿದ್ದೇನೆ ವೆಂಕಣ್ಣ ಅದನ್ನು ನಾಲ್ಕು ಜನಕ್ಕೆ ಹಂಚಿರಿ ಎಂದು ಅಪ್ಪಣೆ ಕೊಟ್ಟಿರಲಿಲ್ಲವೇ. ತನ್ನಪ್ಪ ವೆಂಕಟರಮಣ ಅಂದ ಮೇಲೆ ಸಾಧನೆಗೆ ಏಕಾಂತತೆ ಬೇಕು ಎಂದು ಅರಿಸಿ ಬಂದರೂ ಹಲವು ಸಮಯ ಸಂದರ್ಭಗಳು ಈ ಪ್ರಪಂಚದ ಸುತ್ತಲೇ ಸುತ್ತುವಂತೆ ಮಾಡುತ್ತಿದ್ದವು.

ಇಡೀ ಪ್ರಪಂಚದ ಕಷ್ಟ ಸುಖ ತನಗಿರಲಿ ಜನರ ಕಣ್ಣೀರು ತನ್ನದಾಗ ಬೇಕು ಎಂದು ಪ್ರಪಂಚವನ್ನೇ ಪ್ರೀತಿಸುತ್ತ ನಿಜವಾದ ವಿರಕ್ತರಂತೆ ಕಾಮಧೇನುವಾಗಿ ಕುಳಿತಿದ್ದಾರಲ್ಲ ಮಂತ್ರಾಲಯದ ಪ್ರಭುಗಳು ಅವರು ಪ್ರಪಂಚದ ಗೊಡವೆ ತನಗೆ ಬೇಡ ಸಾಧನೆಗೆ ಏಕಾಂತದ ಹಾದಿ ಬೇಕು ಎಂದು ಹೋಗಿದ್ದರೆ. ಈವತ್ತು ಕೊಟ್ಯಾಂತರ ಜನರ ಅಳಲನ್ನು ಕೇಳುವವರು ಯಾರಿದ್ದಾರೆ? ಸಂತೈಸುವವರು ಯಾರಿದ್ದರು?

ಅವರದು ನಿಜವಾದ ವಿರಕ್ತಿ ಜೀವನ ಪ್ರಪಂಚವನ್ನು ಅತಿಯಾಗಿ ಪ್ರೀತಿಸುವವನೆ ನಿಜವಾದ ವಿರಕ್ತಿ ಇಂತಹ ಅನುಭಾವದ ಹಾದಿಯಲ್ಲಿ ದಾಸರು ಪ್ರಪಂಚದಲ್ಲಿ ಮಿಳಿತರಾಗಿ ಸಾಧನೆಯ ಮಾರ್ಗವನ್ನು ಕಂಡುಕೊಂಡಿದ್ದರು.

ನೂರಾರು ಸಾವಿರಾರು ಕೀರ್ತನೆಗಳು

ಉಗಾ ಭೋಗಗಳು

ಸುಳಾದಿಗಳು

ಭಾಗವತ, ನಾರಾಯಣ ಪಂಜರ, ಕೊರವಂಜಿವೇಷದಂತಹ. ವಿಶೇಷ ಕೃತಿಗಳನ್ನು ಬರೆದರು.

ಅನವರತನ ಭಗವಂತನ ನಾಮ ಸ್ಮರಣಯಲ್ಲಿ ಇರುವವನಿಗೆ ಅವನನ್ನು ಹೃದಯದಲ್ಲಿ ಹಿಡಿದಿಟ್ಟುಕೊಂಡವರಿಗೆ ಗುಡ್ಡ ಬೆಟ್ಟ ಅಲೆದು ಸಾಧನೆ ಮಾಡ ಬೇಕಿರಲಿಲ್ಲ. ನಿಸರ್ಗ ಒಂದು ವಿಶ್ವರೂಪ, ಆ ವಿಶ್ವರೂಪ ದಲ್ಲಿ ಹರಿಯ ರೂಪವನ್ನು ಕಂಡು ಆನಂದಿಸುವುದು ಕೂಡ ಒಂದು ಆರಾಧನೆಯೇ ಅಂಥ ಆರಾಧನೆ ಅವರ ದಾಗಿತ್ತು.

ಆರ್ತರಾಗಿ ದೇವರನ್ನು ಬಿಡದಂತೆ ಕೊಂಡಾಡುತ್ತಿದ್ದರು.

"ಬಿಡೇನು ನಿನ್ನಂಘ್ರೀ ಶ್ರೀನಿವಾಸ

ಎನ್ನು ದುಡಿಸಿಕೊಳ್ಳಲೋ ಶ್ರೀನಿವಾಸ

ನಿನ್ನನುಡಿಯೇ ಜೀತಲ್ಲೋ ಶ್ರೀನಿವಾಸ ಎನ್ನವಡೆ ತಪ್ಪುಕಾಯೋ ಶ್ರೀನಿವಾಸ

ಬಡಿಯೋ ಬೆನ್ನಲ್ಲಿ ಶ್ರೀನಿವಾಸ ಎನ್ನೊಡಲಯೊಯದಿರೋ ಶ್ರೀನಿವಾಸ

ನಾ ಬಡವ ಕಾಣೇಲೋ ಶ್ರೀನಿವಾಸ ನಿನ್ನೊಡಲ ಹೊಕ್ಕೇನೋ ಶ್ರೀನಿವಾಸ

ಪಂಜು ಪಿಡಿವೆನೋ ಶ್ರೀನಿವಾಸ ನಿನ್ನೆಂಜಲ ಬಳಿದುಂಬೆ ಶ್ರೀನಿವಾಸ

ನಾಸಂಜೆ ಉದಯಕೆ ಶ್ರೀನಿವಾಸ ಕಾಳಂಜಿಯ ವೆಡಿವೆ ಶ್ರೀನಿವಾಸ

ಸತ್ತಿಗೆ ಚಾಮರ ಶ್ರೀನಿವಾಸ ನಾನೆತ್ತಿಕುಣಿವೆನೋ ಶ್ರೀನಿವಾಸ

ನಿನ್ನ ರತ್ನದ್ಹಾವಿಗೆ ಶ್ರೀನಿವಾಸ ನಾ ಹೊತ್ತು ನಲಿವಿನೋ ಶ್ರೀನಿವಾಸ

ಹೇಳಿದಂತಾಲಿಪೆ ಶ್ರೀನಿವಾಸ ನಿನ್ನಾಳಿಗಳಾಗಿಹೆ ಶ್ರೀನಿವಾಸ

ಅವರೊಳಗೆ ಮಾಳ್ಪೆ ಶ್ರೀನಿವಾಸ ಎನ್ನಪಾಲಿಸೋ ಬಿಡದೆ ಶ್ರೀನಿವಾಸ

ನಿನ್ನವ ನಿನ್ನವ ಶ್ರೀನಿವಾಸ ನಾ ನನ್ನ ವರಿಯೆನೋ ಶ್ರೀನಿವಾಸ

ಅಯ್ಯ ಮನಿಸೋತಾಮ್ತುಂದೆ ಶ್ರೀನಿವಾಸ

ಪ್ರಸನ್ವೆಂಕಟಾದ್ರಿ ಶ್ರೀನಿವಾಸ"

ಧ್ಯಾನಕ್ಕೆ ಕುಳಿತಾಗಲೆಲ್ಲಾ ಮನಸ್ಸು ಅಂತರಂಗದ ಸುಳಿಗೆ ಸಿಕ್ಕು ಒಳಗಿನದನ್ನು ಶೋಧನೆ ಮಾಡುತ್ತ ಹೋದಾಗಲೆಲ್ಲಾ ಅನ್ನಿಸುವುದುಂಟು

ನಾನು ಯಾರು? ಯಾಕಿದ್ದೆ? ಯಾತಕ್ಕಾಗಿ ಇಲ್ಲಿಗೆ ಬಂದೆ? ಎನ್ನುವ ಪರಿಶೋಧನೆ ಮಾಡುವಾಗಲೆಲ್ಲ ಎಲ್ಲಿಯದೋ ಒಂದು ಬೆಳಕಿನ ಕಿರಣ ಮೂಡಿ ಬರುತ್ತಿತ್ತು.

ಹುಚ್ಚಪ್ಪ ನೀನು ಯಾರಾದರೇನು? ನೀನು ಆ ಭಗವಂತನಿಗೆ ಸೇರಿದವನು ಅಷ್ಟೇ ಭಗವಂತ ಈ ಭೂಮಿಯಲ್ಲಿ ಮನುಷ್ಯ ಜನ್ಮಕೊಟ್ಟ ಮೇಲೆ ಅದನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ದಿವ್ಯಮಂತ್ರಗೊತ್ತಿರಬೇಕು.

ಗೊತ್ತಾಗಿತ್ತು ಅವರಿಗೂ, ಅದು ಇಂದಿನದಲ್ಲ ಬಾಲ್ಯದಲ್ಲಿ ಅವ್ವ ತನ್ನ ಕೈ ಹಿಡಿದು ನಡೆಸುತ್ತಿದ್ದಾಗಿನಿಂದ ಇತ್ತೀಚೆಗೆ ಕಾಡು ಬೆಟ್ಟ ಅಲೆಯುವಾಗಲೆಲ್ಲ ಅವ್ವನ ನೆನಪಾಗುತ್ತಿತ್ತು. ಹೌದಲ್ಲ ಹುಡುಗನಾಗಿದ್ದ ಅಬೋದ ಮನಸ್ಸಿನಲ್ಲಿ ಅವ್ವ ತನ್ನನ್ನು ಬಿಟ್ಟು ನಡೆದಾಗ ಅಂಗಳ



ಪಡಸಾಲೆ ಅಡುಗೆ ಮನೆ ಎಂದು ಅವ್ವನ ಹೆಜ್ಜೆ ಗುರುತನ್ನು ಅವಳ ನೆರಳನ್ನು ಹುಡುಕಾಡುತ್ತಾ ಅಲೆದಾಡುತ್ತಿದ್ದೆ. ಅವ್ವ ಇದ್ದಕ್ಕಿದ್ದಂತೆ ಎಲ್ಲಿ ಮಟಾಮಾಯವಾದೆ ಎಂದು. ಆದರೆ ಇಂಥದೊಂದು ಅಗಲಿಕೆ ಆಗುತ್ತಿದೋ ಏನೋ ಎಂಬ ಅರಿವಿದ್ದಂತೆ ಅವ್ವ ತಾನು ಹಿಡಿದುಕೊಂಡಿದ್ದ ಕೈಯನ್ನು ನಿಧಾನವಾಗಿ ಬಿಡಿಸಿ ಆ ಭಗವಂತನ ಆಸರೆ ಪಡೆ ಮಗನೇ ಎನ್ನುವಂತೆ ಬಿಟ್ಟು ಹೋಗಿದ್ದಳು.

ಆಮೇಲೆ ಕೂಡ ಊರು ತೊರೆದು ತಿರುಪತಿಗೆ ಹೋದಾಗ ಬಾಲ್ಯದಲ್ಲಿ ಅವ್ವನನ್ನು ಕಾಣಬೇಕೆಂಬ ಹಂಬಲ ಕೂಡ ಹೆಚ್ಚಾಗಿತ್ತು.

ಈಗ ಆ ಬಾಲ್ಯದ ನೆನಪುಗಳನ್ನು ಸಂಬಂಧಗಳನ್ನು ಮನೆಯ ನೆಲದ ವ್ಯಾಮೋಹವನ್ನು ತೊರೆದು ಬಂದರೂ ಯಾಕೋ ಆ ಹಿರಿಯಜೀವ ನೆನಪಾಗುತ್ತಿದೆ ಎನಿಸುತ್ತಿತ್ತು ದಾಸರಿಗೆ.

ಕೈ ಹಿಡಿದು ನಡೆಸಿದ ಅವ್ವನ ಅಮೃತ ಹಸ್ತಯಾರಿಲ್ಲದವರಿಗೆ ದೇವರಿದ್ದಾನೆ ಎಂದು ಕತ್ತಲಲ್ಲಿ ಬೆಳಕು ತೋರಿದವಳಲ್ಲವೆ ಅವಳು?

ಮುಕ್ತಿ ಪಥಕ್ಕೆ ಬೆಳಕು ತೋರಿದವಳಲ್ಲವೇ?

ಇದು ನಿನ್ನ ಬೆಳಕಿನ ಹಾದಿ ಕಂದ ಎಂದಿದ್ದಳು.

ಲೌಕಿಕದ ಭಾವನೆಗಳಂತೆ ಆ ಅವ್ವನ ನೆನಪಿನ ಭಾವನೆಗಳು ಈ ಕೊನೆಗಾಲದಲ್ಲಿ ತಟ್ಟನೆ ಬರುತ್ತಿದ್ದವು ಆದರೂ ಅವು ಅಲೌಕಿಕತೆಗೆ ಸೇರಿದ್ದುವಲ್ಲ.

ಸೃಷ್ಠಿಯ ಮೂಲ ಅವಳು "ಅವ್ವಾ ಇನ್ನೊಂದು ಜನ್ಮವಿದ್ದಿದ್ದರೆ ಮತ್ತೆ ನಿನ್ನ ಮಗನಾಗಿ ಹುಟ್ಟುವ ಹಂಬಲವಿರುತ್ತಿತ್ತು ಏನೋ? ಆದರೆ ಆ ಭಗವಂತನ ಸಾನಿಧ್ಯ ನಿನ್ನ ಮುಕ್ತಿಗೆ ಹಾದಿ ಎಂದು. ಅವನ ಚರಣಕ್ಕೆ ನನ್ನ ಕೈ ಸೇರಿಸಿ ಮಾಯವಾದಳು ನೀನು"

ಇಲ್ಲಾ ಅವ್ವನ ರೂಪದಲ್ಲಿ ಬಂದ ಭಗವಂತನೋ? ತಾಯಿ ಕೃತಾರ್ಥನಾದೆ ನಿನ್ನ ಪುಣ್ಯಗರ್ಭದಿಂದ ಜನಿಸಿ ಇನ್ನು ಈ ಜನ್ಮ ಸಾಕು

ಭಗವಂತ ಶಕ್ತಿ ಕೊಟ್ಟಷ್ಟೋ ಸಾಧನೆ ಮಾಡಿದೆ. ಆದರೂ ಮಾಡಿದೆ ಎನ್ನುವದೇನು? ನಡೆದಷ್ಟು ಮುಗಿಯದ ಹಾದಿ ಇದು ನಡೆಯುತ್ತಲೇ ಇರಬೇಕು. ದುರ್ಗಮವಾದ ಬೆಟ್ಟ ಹತ್ತುವ ಅನುಭವ ಇದು ಹತ್ತುತ್ತಲೇ ಇರಬೇಕು. ಆದರೂ ಬೆಟ್ಟದ ಅರಿವಿಗೆ ಬಾರದಂತೆ ಅವನ ಸಾನಿಧ್ಯಕ್ಕೆ ಹೋಗುವುದು ಕೂಡ ಮುಗಿಯದ ಪಯಣದಂತೆ.

ಆದರೂ ಕಾಡು ಬೆಟ್ಟ, ಗುಡ್ಡ ಅಲೆದು ಅವನನ್ನು ಹುಡುಕುತ್ತ ನಡೆದೆ ಆರ್ತನಾಗಿ ಕೇಳಿದೆ ಹಂಬಲಿಸಿದೆ.

"ಧಡೆ ಸೇರಿಸೋ ಭವದಾ ಕಡಲಿನ

ಧಡೆ ಸೇರಿಸೋ ಹರಿಯೇ

ಕಡೆ ಮೊದಲಿಲ್ಲದ ಕ್ಲೇಶದ ವಾರಿಯ॥

ದುರ್ವ್ಯಸನಕೆ ಮನ ಬೇಸರದೆ ಘನ್ನ

ಗರ್ವಿಲಿ ವರ್ಲೆಪೆನಲ್ಲಾ ಪರ್ವತ ನಗಹುವ
ನುಡಿಯನ್ನಾಡುವೆ ನಿರ್ವಹ ಕಡ್ಡಿಯೊಳಿಲ್ಲಾ॥
ನಿನ್ನ ಗುಣದ ನಂಬಿಗೆ ನನಗಿಲ್ಲ ನಿನ್ನಯ ನಾಮವೆ
ಗತಿಯು॥ ಇನ್ನಾದರೂ ಕಡೆಗಣ್ಯಲಿ ನೋಡದೆ
ಪ್ರಸನ್ವೆಂಕಟ ಸಿರಿ ಪತಿಯೆ॥"

ಹೌದು ಪ್ರಭು ಹುಲುಮಾನವರು ನಾನು ನಿನ್ನ ಹೊರತು ನನಗೆ ಗತಿ ಇಲ್ಲ ಬಾಲ್ಯದಿಂದಲೂ ನಂಬಿಕೊಂಡು ಬಂದ ತತ್ವವಲ್ಲವೇ ಇದು? ಎಂದು ದಿನ ನಿತ್ಯ ಹಂಬಲಿಸುವುದು ದಾಸರ ದಿನದ ಆರ್ತತೆಯಾಗುತ್ತಿತ್ತು.

ಮೈಯಲ್ಲಿ ಶಕ್ತಿ ಕುಗ್ಗುತ್ತಿದ್ದರೂ ಮನದ ಮನೋಬಲ ಚೈತನ್ಯ ಕುಗ್ಗಿರಲಿಲ್ಲ. ಭಗವಂತನೆಡೆಗೆ ಸದಾಕಾಲ ಹರಿಯುವ ಮನಸ್ಸಿಗೆ ಕಡಿವಾಣ ಇರಲಿಲ್ಲ. ಅವನನ್ನು ಮತ್ತೇ ಮತ್ತೇ ಕಾಣಬೇಕೆಂಬ ಮನೋ ಸಂಕಲ್ಪ ದೃಡವಾಗುತ್ತಲೇ ಇತ್ತು. ಶ್ರೀ ಹರಿ ಈ ಜೀವನವನ್ನು ಕೊನೆಗಾಣಿಸುವ ಮುನ್ನೆ ಒಮ್ಮೆಯಾದರೂ ಮತ್ತೇ ನಿನ್ನ ದರ್ಶನ ಭಾಗ್ಯ ಕೊಡು ನನ್ನಪ್ಪ ಎಂದು ದಾಸರು ಕಣ್ಣೀರು ತುಂಬಿ ಹಂಬಲಿಸುತ್ತಿದ್ದಂತೆ ಆ ಆರ್ತಭಾವ ಹೆಚ್ಚಾಗುತ್ತಲೇ ಇತ್ತು.

ಆಕಾಶದ ಅಂಚಿಗಿದ್ದ ಸೂರ್ಯ ಒಂದೊಂದೆ ಹೆಜ್ಜೆ ಹಿಂದೆ ಸರಿದಂತೆ ಮತ್ತೆ ತಾಯಿಗೆ ಗರ್ಭವನ್ನಾಆಶ್ರಯಿಸುವ ಮಗುವಿನಂತೆ.

ದಾಸರು ಆ ಶ್ರೀ ಹರಿಯನ್ನು ಸೇರುವ ಕಾಲ ಹತ್ತಿರವಾಗಿರಬೇಕು
ಅವತ್ತು ಅಂಗೀರಸಸಂವತ್ಸರ ಭಾದ್ರಪದ ಶುದ್ಧ ಏಕಾದಶಿ ಇರಬಹುದು.
ಏಕಾದಶಿ ಎಂದರೆ ಭಗವದ್ಭಕ್ತರಿಗೆ ವಿಶೇಷ ದಿನವೇ.

ದಾಸರು ಎಂದಿನಂತೆ ಸ್ನಾನ ಸಂಧ್ಯಾವಂದನ ಪೂಜೆ ಮುಗಿಸಿ ಪೂಜೆ ಮಾಡುವಾಗ ಇರಬಹುದು. ಕೈಯಲ್ಲಿ ವಿಗ್ರಹಗಳನ್ನು ಎಂದಿನಂತೆ ಹಿಡಿದು ಅವನನ್ನು ಆರಾಧನೆಗೈಯುವಂತೆ ನೋಡುತ್ತಿದ್ದರೆ ನನ್ನಪ್ಪ ಕಣ್ಣು ಪಿಳುಕಿಸಿ ಬಾ ಎಂದು ಕರೆದಂತಾಗಲಿಲ್ಲವೇ? ಯಾಕೋ ಮೈಯಲ್ಲಿ ವಿಚಿತ್ರ ಅನುಭವ ಚೈತನ್ಯ ತುಂಬಿದಂತೆ. ತಾಯಿ ಬನಶಂಕರಿಯ ದರ್ಶನ ಮಾಡಿ–ಅಗಸ್ತ್ಯ ತೀರ್ಥದ ಹೊಂಡದ ಅಂಚಿನಲ್ಲಿದ್ದ ಶ್ರೀ ವ್ಯಾಸರಾಯರು ಸ್ಥಾಪಿಸಿದ. ಆಂಜನೇಯ ಸನ್ನಿಧಿಗೆ ಬಂದರು. ಸ್ವತಃ ಶ್ರೀವ್ಯಾಸರಾಯರು ಪ್ರತಿಷ್ಠಿಸಿದ ಆಂಜನೇಯ ನಲ್ಲವೆ ? ನೋಡುತ್ತಿದ್ದರೇ ನಿನ್ನೊಡನೆ ನಾನಿದ್ದೇನೆ ವೆಂಕಣ್ಣ ನೀನು ನನ್ನನ್ನು ಸೇರುವ ಕಾಲ ಸಮೀಪಿಸುತ್ತಿದೆ ಎಂದಂತಾಯ್ತು. ಹನುಮಂತ ದೇವರ ವಿಗ್ರಹ ನೋಡುತ್ತ ಯಾಕೊ ಅಂತರಾಳದೊಳಗಿಂದ ಅನನ್ಯ ಭಾವ ಊಕ್ಕಿ ಕಣ್ಣೀರಿನಲ್ಲಿ–ಭಕ್ತಿಭಾವದಲ್ಲಿ ಮನಸ್ಸು ಮಿಡಿಯುತ್ತಿದೆ. ಆಂಜನೇಯನನ್ನು ಮನಃಪೂರ್ತಿ ತೃಪ್ತಿಯಾಗುವವರೆಗೆ ಭಜಿಸಿ. ಮನೆಗೆ ಬಂದಾಗ ಸಂಧ್ಯಾಸಮಯ ಅವರು ಮನೆಗೆ ಬರುವ ಹಾದಿಯನ್ನೇ ಕಾಯುತ್ತಾ ಓಣಿಯ ಜನ ಕೂತಿದ್ದಾರೆ. ಇವತ್ತು ಏಕಾದಶಿ ದಾಸರ ಬಾಯಿಂದ ನಾಲ್ಕು ಕೀರ್ತನೆಗಳನ್ನಾದರೂ ಕೇಳಬೇಕು ಹರಿಕಥೆ ಶ್ರವಣ ಮಾಡಬೇಕೆಂಬಾಶೆ ಆ ಭಕ್ತರಿಗೆ.



ದಾಸರ ಅಮೃತದಂಥಹ ವಾಣಿಯಿಂದ ಭಗವಂತನ ಅಗಮ್ಯ ಮಹಿಮೆಯನ್ನು ಕೇಳುತ್ತ ಕುಳಿತಿದ್ದರೂ ಯಾಕೋ ಇವತ್ತು ದಾಸರನ್ನು ನೋಡಿದರೆ ಎಂಥಹದೋ ವಿಶೇಷ ತೇಜ ಕಾಣುತ್ತಿದೆ ಎನಿಸಿತು. ಅವರನ್ನು ಕಂಡವರಿಗೆ ದಾಸರ ಕೀರ್ತನೆಗಳು ಹರಿಕಥೆ ಶ್ರವಣ ಮುಗಿದ ಮೇಲೆ ಒಬ್ಬೊಬ್ಬರಿಗೆ ದಾಸರಿಗೆ ಕಾಲು ಮುಟ್ಟಿ ಹೋಗುತ್ತಿದ್ದರೆ.

"ನಿಮ್ಮ ಭಕ್ತಿ–ಶ್ರದ್ಧಾ ಆ ಶ್ರೀಹರಿ ಮ್ಯಾಲೆ ಸದಾಕಾಲ ಇರ್‍ಲಿ ಭಗವಂತ ನಿಮಗೆ ಛಲೋ ಹಾದಿ ತೋರಸ್ಲಿ–ಇದ–ನನ್ನ ಕಡೀ ಇಚ್ಛಾ" ಎಂದರೆ ಗಾಬರಿ ದಿಗ್ಭ್ರಮೆಯಿಂದ ನೋಡುತ್ತಿದ್ದ ಜನಗಳಿಗೆ ವಿದಾಯ ಹೇಳುವಂತೆ ಕೈಮುಗಿದರು ದಾಸರು.

ಕತ್ತಲೇ ಕಾಲಿಕ್ಕುತ್ತ ಬರುತ್ತಿದೆ. ದೇವರ ಮುಂದೆ ನಂದಾದೀಪ ಉರಿಯುತ್ತಿದೆ. ಅದನ್ನೆ ಕಣ್ತುಂಬಿಕೊಳ್ಳುವಂತೆ ನೋಡುತ್ತ ದಾಸರು ಆ ಜ್ಯೋತಿಯನ್ನು ಆ ಬೆಳಕನ್ನು ಅಂತರಂಗದಲ್ಲಿ ತುಂಬಿಕೊಳ್ಳುವಂತೆ ಕುಳಿತೆ ಇದ್ದರು. ಎಲ್ಲಿಯೋ ಒಳಗಿನ ಒಂದು ದನಿ. "ಬಾ–ನನ್ನ ಕಂದಾ ಬಾ–ವೆಂಕಣ್ಣ, ನಿನ್ನನ್ನು ನನ್ನೊಳಗೆ ಸೇರಿಸಿಕೊಳ್ಳುವ ಸಮಯ ಹತ್ತಿರವಾಗುತ್ತದೆ" ಎಂದಂತಾಯ್ತು. ಯಾರದು ಆ ಧ್ವನಿ? ನನ್ನಪ್ಪ ವೆಂಕಪ್ಪನದೆಲ್ಲದಲ್ಲವೆ. ಇಷ್ಟುದಿನ ತಾನಾಗೇ ನನ್ನ ಹತ್ತಿರ ಬರುತ್ತಿದ್ದ ಆ ಶ್ರೀಹರಿ ಇವತ್ತು ನನ್ನನ್ನು ಹತ್ತಿರ ಕರೆಯುತ್ತಿದ್ದಾನೇಯೆ? ಜ್ಯೋತಿಯನ್ನು ನೋಡುತ್ತಿದ್ದ ಕಣ್ಣುಗಳು ನಿದಾನವಾಗಿ ಮುಚ್ಚಿಕೊಂಡವು. ಒಳಗಿನ ಅಂತರಾಳದಲ್ಲಿ ನಭೋಮಂಡಲದಲ್ಲಿ ಬೆಳುಗುತ್ತಿದ್ದಂಥಹ ಪ್ರಜ್ವಲವಾದ ಬೆಳಕು. ತನ್ನೊಳಗೆ ಯಾವಾಗಲೂ ಸುಪ್ತವಾಗಿ ಅಡಕಿಕೊಂಡಿರುತ್ತಿದ್ದ ಆ ಬಿಂಬಮೂರ್ತಿ ತಾನು ಆರಾಧಿಸುತ್ತಿದ್ದ ಆ ಶ್ರೀಹರಿ. ಅವರ ಮನೋಮಂಡಲದಲ್ಲಿ ಬೆಳಗತೊಡಗಿ ಈಗ ಮುದ್ದು ಮೋಹಕವಾದ ಬಾಲರೂಪಿಯಾಗಿ ಇವರೆದುರು ಬಂದು ನಿಂತು ನಗುತ್ತಿದ್ದಾನೆ ಆ ಬಾಲಗೋಪಾಲ.

ರಾತ್ರಿ ಸರಿಯುತ್ತಲೇ ಇದೆ. ದಾಸರು ದೇವರ ಮನೆಯಲ್ಲಿ ಕುಳಿತು ತಂಬೂರಿ ಹಿಡಿದು ಮೆಲ್ಲಗೆ ಮೀಟುತ್ತಿದ್ದಾರೆ ಅದು ಬರೀ ತಂಬೂರಿಯ ಮಿಡಿತವಲ್ಲ ಅವರ ಅಂತರಂಗ ದೇಹದ ನರ ನರವೂ ಆ ಭಗವಂತನಿಗಾಗಿ ಹಂಬಲಿಸುತ್ತ ಆರ್ತವಾಗಿ ಆಲಾಪನೆ ಗೈಯುತ್ತ ಹೊಮ್ಮುತ್ತಿರುವ ನಾದ. ಕತ್ತಲೆ ಓಣಿಯಲ್ಲಿ ಊರಲ್ಲಿ ಗವ್ವೆನ್ನುವ ಕತ್ತಲೆ. ದಟ್ಟವಾದ ಮೌನ, ಹಗುರವಾದ ಅದೇ ತಂಬೂರಿಯ ಮಿಡಿತ ಮನೆಯಲ್ಲಿ ತುಂಬಿದಂತಿದ ಬೆಳಕು. ಆ ಬೆಳಕು ಅವರ ಅಂತರಂಗದಲ್ಲೂ ಪ್ರತಿಫಲಿಸಿ ಆಕಾರ ಪಡೆದು ಅವರ ಅಂತರಂಗ ಬಿಂಬರೂಪಿಯಾದ ಪರಮಾತ್ಮನಿಂತಂತಿದೆ.

ಹಗುರವಾದ ಮಕ್ಕಳ ಕಾಲ್ಗೆಜ್ಜೆ ಸಪ್ಪಳ

ಮನಸ್ಸಿನಲ್ಲಿ ಏನೋ ನವಿರು ಶಬ್ಧ ತಂಬೂರಿ ತಂತಿ ಮೀಟುತ್ತಿದ್ದಂತೆ ಕಣ್ಣು ತೆರೆದರು ದಾಸರು ಆಗ ಮುಚ್ಚಿದ್ದ ಕಣ್ಣ ಹಿಂದಿದ್ದ ಅಂತರಂಗದಲ್ಲಿದ್ದ ಬಿಂಬರೂಪಿ ಪರಮಾತ್ಮ ಈಗ ಬಾಲಗೋಪಾಲನ ರೂಪದಲ್ಲಿ ಕಣ್ಣೆದುರ ನಿಂತಿದ್ದಾನೆ.

ನನ್ನಪ್ಪ ಯಾರೋ ನೀನು?
ನಗುತ್ತಿದ್ದಾನೆ ಆ ಬಾಲ ಗೋಪಾಲ

ದಾಸರ ಕಣ್ಣಿಂದ ನೀರಿಳಿಯುತ್ತಿದೆ.
ನರ್ತಿಸುತ್ತಲೇ ಅವರತ್ತ ನೋಡಿ ಮೋಹಕವಾಗಿ ನಗುತ್ತಿದ್ದಾನೆ ಅವರ ಬಾಲಗೋಪಾಲ
ಯಾರೋ ಚಿನ್ನ ನೀನು ಯಾರಪ್ಪ?
ವ್ಯಾಸರಿಗೆ ಒಲಿದ ಬಾಲಗೋಪಾಲನೆ?
ಕನಕದಾಸರ ಹಾಡಿಗೆ ಕುಣಿದು ನರ್ತಿಸಿದ ಪುಟ್ಟ ಪಾದಗಳ ಮುದ್ದು ಮೋಹನಾಂಗನೆ?
ಪುರಂದರದಾಸರಿಗೆ ಒಲಿದ ವೇಣು ಗೋಪಾಲನೆ?
ಎಂಥಹ ಮುದ್ದು ಮೋಹಕ ರೂಪು ಕಂದಾ ನಿನ್ನದು

ನನ್ನಪ್ಪಾ ಎಂಥಹ ಕರುಣಾಮಯಿ ನೀನು! ಅಜ್ಞಾನಿಯಾದ ನನ್ನನ್ನು ಉದ್ಧರಿಸಿದೆ. ಜ್ಞಾನದ ಭಂಡಾರ ಕೈಗೆ ಕೊಟ್ಟೆ ನನ್ನ ಕೀರ್ತನೆಗಳಿಂದ ನಿನ್ನ ವಿಶ್ವರೂಪ ಸಾಕ್ಷಾತ್ಕಾರ ಮಾಡಿಸಿದೆ ಹೊರಗಿನ ಬೆಳಕನ್ನೆಲ್ಲ ನನ್ನಲ್ಲಿ ತುಂಬಿ ನಿನ್ನಂತರಂಗದಲ್ಲಿ ನನ್ನನ್ನು ಮುಚ್ಚಿಕೊಳ್ಳುವಂತೆ, ಶ್ರೀ ಹರಿ ಈ ಅಸ್ತಿತ್ವ ನನ್ನದಲ್ಲ. ಈ ಚೇತನ ನನ್ನದಲ್ಲ, ಈ ವಿಶ್ವ ಚೇತನವೆ ನಿನಗೆ ಸೇರಿದ್ದು ಎನ್ನುವ ಸಾಕಾರ ರೂಪವನ್ನು ತೋರಿಸಲಿಲ್ಲವೆ?

ಭಗವಂತ ಕೌರವರ ಸಭೆಯಲ್ಲಿ ವಿಶ್ವರೂಪದಂತೆ ನಿಂತೆಯಲ್ಲ, ಆದರೆ ಕಣ್ಣಿದ್ದವರು ಕಾಣಲಿಲ್ಲ. ಒಳಗಣ್ಣು ತೆಗೆದು ನೋಡಿದವರಿಗೆ ಮಾತ್ರ ಕಾಣುವೆ ಎನ್ನುವಂತೆ ಮಾಗಿದವರಿಗೆ ಕಂಡಿದ್ದ ಬೆಳಕದು. ಈಗ ಆ ವಿಶ್ವದ ಬೆಳಕು ಬಾಲಗೋಪಾಲನ ರೂಪದಲ್ಲಿ ನಗು–ನಗುತ್ತ ನಿಂತಿದೆ ದಾಸರೆದುರು ಆಲೈಸುತ್ತಿದ್ದಾರೆ ಅವರು. ದೈವವೆ ಮೂರ್ತಿವೇತ್ತಂತೆ ನನ್ನಪ್ಪ ಎಷ್ಟು ರೀತಿಯಿಂದ ನನ್ನೆದುರು ಸುಳಿದು ನನ್ನ ಕೀರ್ತನೆಗಳಿಂದ, ಉಗಾಭೋಗಗಳಿಂದ ನಿನ್ನನ್ನು ಅಲಂಕರಿಸಿಕೊಂಡೆ.

ಭಾಗವತದ ತಿರುಳೆ ನಿನ್ನ ಲೀಲಾರೂಪ ಎನ್ನುವಂತೆ ಇವತ್ತು ಆ ಲೀಲಾರೂಪ ಕಂದಮ್ಮನಾಗಿ ನಿಂತಿದೆ ಅವರೆದುರು. ಭಕ್ತಿ ತುಂಬಿದ ಕಣ್ಣೀರು ಅವರದು ಭಗವಂತ ನನ್ನನ್ನು ಉದ್ಧರಿಸಲು ಬಂದೆಯಾ ತಂದೆ, ಅವರ ಆರ್ತತೆ, ಆಲಾಪ, ಹಂಬಲ, ಭಕ್ತಿ, ಧನ್ಯತೆ ಎಲ್ಲ ಭಾವನೆಗಳು ಮೇಳೈಸಿ ಅವರ ಬಾಯಿಂದ ಹರಿದು ಬರುತ್ತಿದೆ. ಭಕ್ತಿ ರಸದ ಚಿಲುಮೆ ಕೇಳುತ್ತಿದ್ದಾರೆ ಆಲೈಸುತ್ತ.

“ದಾರೋ ನೀ ಚಿನ್ನ ದಾರೋ।
ಕಾರು ರಾತ್ರಿಯೊಳೆಮ್ಮಾಗಾರಕ್ಕೆ ಬಂದವ ॥ಪ॥

ಇಕ್ಕಿದ ಕದಗಳಿಕ್ಕ್ಯಾವೆ, ನಿದ್ರೆ ।
ಉಕ್ಕೇರಿ ಕಣ್ಣು ಮುಚ್ಚ್ಯಾವೆ । ನಮ್ಮ
ತಕ್ಕೈಸುವಂತೆ ನೀ ಕಳ್ಳ ಚಿಕ್ಕ ।
ಮಕ್ಕಳಾಡೂವಾಟ ವಲ್ಲೋಚಲ್ವಾ ॥೧॥
ಆಗೆ ಗೋಪಾಲನಂತಿದ್ದೆ ನೀ ।
ಬೇಗ ಚಟುಲರೂಪನಾದೆ ।
ಮತ್ತೀಗೆಮ್ಮ ನಲ್ಲನಂತೈದೆ ಕೋಟಿ ।



ಪೂಗಣೇರ । ಹೋಲುತೈದೆ ಅಹುದೆ ॥೨॥
ಸಪ್ಪಳಿಲ್ಲದೆ ಕೂಡು ಕಾಣೋ ಕೇಳಿ । ಬಪ್ಪರಿನ್ನಾರಾರೆ ಕಾಣೋ ।
ಪ್ರಾಣ ಕಪ್ಪವ ನಿನಗಿತ್ತೆವಿನ್ನು ।
ಕಾಯೊ ಶ್ರೀ ಪ್ರಸನ್ವೆಂಕಟ ಜಾಣ ಪ್ರವೀಣ ॥೩॥”

ಹಾಡು ಮುಗಿದರೂ ಅದರೊಳಗಿನ ನಾದ ಸುತ್ತಲೂ ಝೇಂಕಾರಗೈದಂತೆ; ಬಾಲಗೋಪಾಲನ ರೂಪ ಅವರ ಸಮೀಪ ಸುಳಿದು ಅವರನ್ನು ಎದೆಗೊತ್ತಿಕೊಂಡಂತೆ.

ದಾಸರು ಕುಳಿತೆ ಇದ್ದಾರೆ. ತಮ್ಮ ದೇಹಗತ ಪಂಚಭೂತಗಳ ತನ್ಮಾತ್ರೆಗಳು. ಲಯ ಚಿಂತನೆಯಲ್ಲಿ ತೊಡಗಿ ದೇಹದ ಆಕಾಶ ತತ್ವವು ಬಾಹ್ಯ ಆಕಾಶದಲ್ಲಿ ವಾಯಿತತ್ವ ಬಾಹ್ಯವಾಯುವಿನಲ್ಲಿ ದೇಹದ ಉಷ್ಣವು ಬಾಹ್ಯ ತೇಜಸ್ಸಿನಲ್ಲಿ ಶಾರೀರಕ ದ್ರವಗಳು, ಬಾಹ್ಯ ಉದಕದಲ್ಲಿ, ದೇಹದ ಪ್ರಥ್ವಿಭಾಗ ಬಾಹ್ಯ ಪ್ರಥ್ವಿಯಲ್ಲಿ, ವಾಗೀಂದ್ರಯವು ಅಗ್ನಿಯಲ್ಲಿ, ಪಾಣಿ ಹಸ್ತಗಳು ದಕ್ಷ, ಇಂದ್ರರಲ್ಲಿ, ಪಾದ ಜಯಂತನಲ್ಲಿ, ವಾಯು ಮಿತ್ರನಾಯಕ ಸೂರ್ಯನಲ್ಲಿ ಗುಹ್ಯೇಂದ್ರಿಯವು ಸ್ವಾಯಂಭುವ ಮನುವಿನಲ್ಲಿ, ಚರ್ಮಸ್ಪರ್ಶಗಳು ಅಹಂಕಾರಿಯ ಪ್ರಾಣನಲ್ಲಿ, ಚಕ್ಷುರೂಪಗಳು ಸೂರ್ಯನಲ್ಲಿ, ಶ್ರೋತ್ರ ಶಬ್ದಗಳು ದಿಗ್ದೇವತೆಗಳಲ್ಲಿ, ಜಿಹ್ವೇಂದ್ರಿಯ ಹಾಗೂ ರಸಗಳು ವರುಣನಲ್ಲಿ ಘ್ರಾಣ ಗ್ರಂಥಗಳು ಅಶ್ವನಿ ದೇವತೆಗಳಲ್ಲಿ, ಮನಸ್ಸು ರುದ್ರನಲ್ಲಿ, ಅಹಂಕಾರ ತತ್ವ ಗರುಡ, ಶೇಷ, ರುದ್ರರಲ್ಲಿ, ಮಹತತ್ವ ಬ್ರಹ್ಮವಾಯುಗಳಲ್ಲಿ ಅವರುಗಳು ಅವ್ಯಕ್ತ ತತ್ವಾಭಿಮಾನಿ ರಮಾದೇವಿಯಲ್ಲಿ ಹೀಗೆ ಲಯ ಚಿಂತನೆ ಮಾಡುತ್ತ, ಮಾಡುತ್ತ, ಹೃದಯದಲ್ಲಿಯ ಬಿಂಬರೂಪಿ ಹೃದಯ ಭಾಗದಿಂದ ಸುಷುಮ್ನೆಯ ಮಾರ್ಗವಾಗಿ, ಬ್ರಹ್ಮರಂಧ್ರಕ್ಕೇರಿ ಹರಿಯ ಧ್ಯಾನದೊಡನೆ ದೇಹತ್ಯಾಗ ಮಾಡಿ ಆ ಶ್ರೀಹರಿಯನ್ನೆ ಸೇರಿಕೊಂಡಿದ್ದರು ದಾಸರು.

ಎಂಥಹ ಮಹಾ–ಮಹಿಮ ಜೀವ ಅವರದು
ಎಂಥಹ ಪರಮಪಾವನ ಅದಮ್ಯ ಚೇತನ
ಆ ವಿಶ್ವದ ಅನಂತ ರೂಪದಲ್ಲಿ, ಹರಿಯಲ್ಲೆ ಐಕ್ಯವಾಗಿ ಹೋಗಿದ್ದಾರೆ.
“ನನ್ನ ಜೀವದ ಕಪ್ಪವಿಕುವೆ” ಎನ್ನುತ್ತ, ಪರಮಾತ್ಮನಲ್ಲಿ ಸೇರಿ ಹೋಗಿದ್ದಾರೆ.
ಅವರು ಹಿಡಿದ ತಂಬೂರಿ ಹಿಡಿದಂತೆ ಇದೆ.
ಮಿಡಿದ ಕೈಗಳು ಮಾತ್ರ ಸ್ತಬ್ಧವಾಗಿವೆ.

ಅನಂತ ಚೈತನ್ಯದ ರೂಪವಾಗಿ ಕುಳಿತ ಅವರ ಗೋಪಾಲ ಬುಟ್ಟಿ, ಪಾದುಕೆ, ತಂಬೂರಿ, ತಾಳ ತಮ್ಮದೆ ಆದ ಸ್ತರದಲ್ಲಿ ಇಂದಿಗೂ ನುಡಿಯುತ್ತಲೇ ಇವೆ.

**ಹರೇ ಶ್ರೀನಿವಾಸ ಹರೇ ಶ್ರೀನಿವಾಸ ಹರೇ ಶ್ರೀನಿವಾಸ**

## “ಶ್ರೀ ಪ್ರಸನ್ವೇಂಕಟ ವಿಜಯ ಕೃತಿಗೆ ಆಧಾರ ಗ್ರಂಥಗಳು”


೧. ಶ್ರೀ ಪ್ರಸನ್ನವೆಂಕಟ ದಾಸರು ಮತ್ತು ಕೃತಿಗಳು
– Phd ಪ್ರಬಂಧ ೧೯೫೧
ಡಾ॥ ಎ.ಟಿ. ಪಾಟಿಲ
ಪ್ರಕಾಶಕರು ॥ ಮಿಂಚಿನ ಬಳ್ಳಿ ಕಾರ್ಯಾಲಯ
ಧಾರವಾಡ (೧೯೫೬)

೨. ಕರ್ನಾಟಕ ಹರಿದಾಸ ಸಾಹಿತ್ಯ
– ಶ್ರೀ ಬೇಲೂರ ಕೇಶವದಾಸರು

೩. ಶ್ರೀ ಪ್ರಸನ್ ವೆಂಕಟದಾಸರು
– ಶ್ರೀ ಧ್ರುವರಾಜ ಕಾಖಂಡಕಿ
ಪ್ರಕಾಶಕರು : ಪ್ರಸನ್ವೆಂಕಟ ಸಾಹಿತ್ಯಮಾಲೆ, ಬಾಗಲಕೋಟೆ

೪. ಶ್ರೀ ಪ್ರಸನ್ವೆಂಕಟ ದಾಸರ ಭಾಗವತ
– ಪ್ರಕಾಶಕರು : ಮೈಸೂರು ವಿಶ್ವವಿದ್ಯಾಲಯ

೫. ಶ್ರೀ ವಿಷ್ಣು ಸ್ತುತಿ
– ಬನ್ನಂಜೆ ಗೋವಿಂದಾಚಾರ್ಯ
ಪ್ರಕಾಶಕರು : ಈಶಾವ್ಯಾಸ ಪ್ರತಿಷ್ಠಾನ
ಉಡುಪಿ – ಬೆಂಗಳೂರು – (೨೦೦೩)








ಶ್ರೀಮತಿ ರೇಖಾ ಕಾಖಂಡಕಿಯವರ ಲೇಖನಿಯಿಂದ ಮೂಡಿಬಂದ 'ಮಹಾ ನವಮಿ' ಈಗಾಗಲೇ ಅತ್ಯಂತ ಪ್ರಸಿದ್ಧವಾದ ಟಿ.ವಿ. ಸೀರಿಯಲ್ ಆಗಿದ್ದು, ಲೇಖಕಿಯವರಿಗೆ ಅಪಾರ ಜನಮನ್ನಣೆಯನ್ನು ತಂದು-ಕೊಟ್ಟಿದೆ. ಪ್ರಸನ್ನ ವೆಂಕಟದಾಸರ ಸೇವಾರೂಪದ ಈ "ಪ್ರಸನ್ನ ವೆಂಕಟ ವಿಜಯ" ಕೃತಿ ಬರಹದ ಮೂಲಕ ರೇಖಾ ಕಾಖಂಡಕಿಯವರು ತಮ್ಮ ಸಾಹಿತ್ಯಿಕ ಹಾಗೂ ಶಬ್ದ ರೂಪಸಾಮರ್ಥ್ಯವನ್ನು ಸಶಕ್ತವಾಗಿ ಪ್ರಕಟಪಡಿಸಿದ್ದಾರೆ. ಈ ಕಾದಂಬರಿಯಲ್ಲಿಯ ಅನೇಕ ಘಟನೆಗಳು, ಮಾತುಗಳು, ಸತ್ಯ ದರ್ಶನ ಮಾಡಿಸುತ್ತವೆ. ಸಾಕ್ಷಾತ್ಕಾರದ ಹಾದಿಗೆ ಎಳೆಯುತ್ತವೆ. ಅಲೌಕಿಕ ಸಾಧನೆಯತ್ತ ಸೆಳೆಯುತ್ತವೆ. ಹೃದಯವನ್ನು ತಟ್ಟುತ್ತವೆ. ಮನಸ್ಸನ್ನು ಮುಟ್ಟುತ್ತವೆ. ಅಂತರಂಗದಲ್ಲಿ ಭಕ್ತಿರಸದ ಊಟೆಯನ್ನು ಉಕ್ಕಿಸುತ್ತವೆ. ಲೇಖಕಿಯ ಈ ರೂಪಕ ಶಕ್ತಿ, ಶಬ್ದಶಿಲ್ಪ ಸಾಮರ್ಥ್ಯ, ತೀವ್ರ ರಸಾನುಭವ-ಅಭಿವ್ಯಕ್ತಿ, ವಿಸ್ತಾರವಾದ ವಿಚಾರ ಕ್ಷೇತ್ರ, ಸತ್ವಭರಿತ ನಿರೂಪಣೆ, ಹಾಗೂ ಕಾದಂಬರಿಯ ಮೂಲದ್ರವ್ಯದ ಸತ್ವದಿಂದಾಗಿ, ದಾಸತತ್ವದ ಮಹತ್ವ ದಿಂದಾಗಿ ಈ ಕಾದಂಬರಿ ಹರಿದಾಸ ಕ್ಷೇತ್ರಕ್ಕೆ ಒಂದು ಅಮೂಲ್ಯ ಸಾಹಿತ್ಯಿಕ ಕೊಡುಗೆಯಾಗಿದೆ.

ವಿದ್ಯಾವಾಚಸ್ಪತಿ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ